# ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ:ಒಂದು ವಿವರಣಾತ್ಮಕ ಅಧ್ಯಯನ

**(ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ)**

**ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸಿದ ಪ್ರೌಢಪ್ರಬಂಧ**


ಸಂಶೋಧಕರು

**ಸಿದ್ದರಾಜು**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570 006

ಮಾರ್ಗದರ್ಶಕರು

**ಡಾ. ಎಂ.ಪಿ. ಮಹದೇವಯ್ಯ**
ಎಂ.ಎ., ಪಿಎಚ್.ಡಿ., ಡಿಪ್-ಇನ್-ಎಪಿಗ್ರಫಿ.,
ನಿವೃತ್ತ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570 006



ಮೈಸೂರು ವಿಶ್ವವಿದ್ಯಾನಿಲಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570 006

**2014**

# **ಅಭ್ಯರ್ಥಿಯ ಪ್ರಮಾಣಪತ್ರ**

ಸಿದ್ದರಾಜು ಎಂಬ ನಾನು ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ., ಪದವಿಗಾಗಿ ಒಪ್ಪಿಸುತ್ತಿರುವ **"ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ:ಒಂದು ವಿವರಣಾತ್ಮಕ ಅಧ್ಯಯನ"** (ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವು ನನ್ನ ಸಂಶೋಧನೆಯ ಫಲವಾಗಿದ್ದು ಇದನ್ನು ಡಾ. ಎಂ. ಪಿ. ಮಹದೇವಯ್ಯ, ನಿವೃತ್ತ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದು ಈ ಮಹಾಪ್ರಬಂಧವನ್ನು ಈ ಮೊದಲು ಭಾಗಶಃವಾಗಿ ಆಗಲೀ ಅಥವಾ ಪೂರ್ಣವಾಗಿ ಆಗಲೀ, ಬೇರೆಯಾವುದೇ ಪದವಿ/ಡಿಪ್ಲೊಮಾಗಳಿಗಾಗಲೀ ಅಥವಾ ಅಂತಹ ಇತರ ಯಾವುದೇ ಪದವಿ ಪರೀಕ್ಷೆಗಳಿಗಾಗಲೀ ಒಪ್ಪಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಸಿದ್ದರಾಜು)
ಸಂಶೋಧಕರ ಸಹಿ

ದಿನಾಂಕ:

(ಎಂ.ಪಿ.ಮಹದೇವಯ್ಯ)
ಮಾರ್ಗದರ್ಶಕರ ಸಹಿ

(ಮೇಲುಸಹಿ)

ದಿನಾಂಕ:

ಮುಖ್ಯಸ್ಥರ ಸಹಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-06

## ಮಾರ್ಗದರ್ಶಕರ ಪ್ರಮಾಣಪತ್ರ

ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ ಮಾನಸಗಂಗೋತ್ರಿ, ಮೈಸೂರು ಇಲ್ಲಿ ಸಂಶೋಧಕರಾದ ಸಿದ್ದರಾಜು ಅವರು **"ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ:ಒಂದು ವಿವರಣಾತ್ಮಕ ಅಧ್ಯಯನ"** (ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ) ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಎಂದು ಈ ಮೂಲಕ ನಾನು ದೃಢೀಕರಿಸುತ್ತೇನೆ. ಈ ಮಹಾಪ್ರಬಂಧವು ಈ ಮೊದಲು ಭಾಗಶಃವಾಗಲೀ ಅಥವಾ ಪೂರ್ಣವಾಗಲೀ ಬೇರೆ ಯಾವುದೇ ಪದವಿ, ಡಿಪ್ಲೊಮಾಗಳಿಗಾಗಲೀ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲ್ಪಟ್ಟಿಲ್ಲ, ನನ್ನ ಅಭಿಪ್ರಾಯದಲ್ಲಿ ಈ ಮಹಾಪ್ರಬಂಧವು ತೃಪ್ತಿಕರವಾಗಿ ರಚಿಸಲ್ಪಟ್ಟಿದೆ ಮತ್ತು ನಿಬಂಧನೆಗಳಿಗನುಸಾರವಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಈ ಮಹಾ ಪ್ರಬಂಧವನ್ನು ಒಪ್ಪಿಸಿಕೊಳ್ಳಬಹುದೆಂದು ದೃಢೀಕರಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ:

**(ಎಂ. ಪಿ. ಮಹದೇವಯ್ಯ)**
ಎಂ.ಎ., ಪಿಎಚ್.ಡಿ., ಡಿಪ್–ಇನ್–ಎಪಿಗ್ರಫಿ.,
ನಿವೃತ್ತ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು–570006

# ಕೃತಜ್ಞತೆಗಳು

2005-06ನೇ ಸಾಲಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಎ. ಪದವಿಗೆ ಪ್ರವೇಶ ಪಡೆದಾಗ ಪ್ರಾಧ್ಯಾಪಕರಾಗಿದ್ದ ಎಂ.ಪಿ. ಮಹದೇವಯ್ಯರವರು ನನಗೆ ಸ್ಫೂರ್ತಿಯಾದರು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಗುರುಗಳು ಮತ್ತು ಮುಖ್ಯಸ್ಥರಾದ ಡಾ.ಜಿ.ಕರಿಯಪ್ಪನವರಿಗೂ ಹಾಗೂ ಸಹಾಯಕ ಪ್ರಾಧ್ಯಾಪಕರಾದ ಡಾ.ಕೆ.ಪ್ರಭು, ಶ್ರೀಮತಿ ಡಾ.ವಿ.ಶೋಭಾರವರಿಗೂ, ನಿವೃತ್ತ ಪ್ರಾಧ್ಯಾಪಕರಾದ ಹಾಗೂ ಗುರುಗಳಾದ ಪ್ರೊ. ಎಂ.ವಿ. ಕೃಷ್ಣಪ್ಪ, ಪ್ರೊ. ಎನ್.ಎಸ್. ರಂಗರಾಜು ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ವಿಭಾಗದ ಸಿಬ್ಬಂದಿ ವರ್ಗದವರಾದ ಶ್ರೀಮತಿ ಉಷಾರವರಿಗೂ, ವಿಭಾಗದ ಸಹಾಯಕರಾದ ಕಪನಯ್ಯ ಮತ್ತು ಶಿವರಾಜ್ ಅವರಿಗೂ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ತಂದೆಯವರಾದ ಶ್ರೀ. ಶಂಕರಯ್ಯ ಹಾಗೂ ತಾಯಿ ಪುಟ್ಟಸಿದ್ದಮ್ಮ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನನ್ನ ಇಷ್ಟೆಲ್ಲಾ ಸಾಧನೆಗೆ ಸಹಕಾರ ನೀಡಿದ ಸಹೋದರಿಯರಾದ ಮಲ್ಲಾಜಮ್ಮ w/o ಮಹದೇವಯ್ಯ, ನಂಜಮ್ಮಣ್ಣಿ w/o ನಿಂಗರಾಜು, ಸಹೋದರಿ ಮಹದೇವಮ್ಮ, ಸಹೋದರ ಚಿಕ್ಕಸಿದ್ದರಾಜು ಹಾಗೂ ಸಿದ್ಧಾರ್ಥಣ್ಣ ಮಾಜಿ ಆಧ್ಯಕ್ಷರು ಜಿಲ್ಲಾ ಪಂಚಾಯತ್ ಮೈಸೂರು, ಬಸವರಾಜು ಮಾದಾಪುರ ಮಾಜಿ ಉಪಾಧ್ಯಕ್ಷರು ತಿ.ನರಸೀಪುರ, ತುಂಬಲ ಪ್ರಕಾಶ್, ಇವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ತಿರುಮಕೂಡಲು ನರಸೀಪುರ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ನನಗೆ ಸೂಕ್ತ ಸಲಹೆ ನೀಡಿ ಸಹಕರಿಸಿದ ಪ್ರೊ. ಎಂ.ಪಿ. ಮಹದೇವಯ್ಯರವರಿಗೂ ಧನ್ಯವಾದಗಳು. ಗುರುಗಳಂತೆಯೇ ತಮ್ಮ ಅನುಭವಗಳನ್ನು ಹಂಚಿಕೊಂಡು ಸೂಕ್ತ ಮಾರ್ಗದರ್ಶನಗಳನ್ನು, ಸಲಹೆಗಳನ್ನು ನೀಡುತ್ತಿರುವ ವಿಭಾಗದ ಹಿರಿಯ ಸಂಶೋಧಕರು ಡಾ.ಬಿ.ಬಸವರಾಜು ತಗರಪುರ, ಡಾ.ಬಿ.ಸಿ.ಸುರೇಶ. ಡಾ.ಶೆಲ್ವಪಿಳ್ಳೆ ಅಯ್ಯಂಗಾರ್, ಡಾ.ಲೋಕೇಶ್. ಸಿ.ಇ. ವಿಶೇಷವಾಗಿ ಸಹಕರಿಸಿದ ಡಾ.ಹೆಚ್.ಎನ್. ಕಾಳಸ್ವಾಮಿ, ಡಾ.ಸಿ.ಸುರೇಶ ಹಾಗೂ ಕೆ.ಎಂ.ಪ್ರಕಾಶ್ ಇವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಂಶೋಧನಾ

ವಿದ್ಯಾರ್ಥಿಗಳಾದ ಎಸ್. ಪರಮೇಶಿ, ಶಿವಾನಂದ.ಎನ್, ಚಂದ್ರಯ್ಯ. ಉಮೇಶ.ಸಿ.ಜಿ, ಶಶಿಧರ,ಸಿ.ಎ. ಸುರೇಶ, ಇವರೆಲ್ಲರ ಸ್ನೇಹಕ್ಕೆ ನಾನು ಅಭಾರಿಯಾಗಿದ್ದೇನೆ.

ನನ್ನ ಸಂಶೋಧನಾ ಕಾರ್ಯಕ್ಕೆ ಗ್ರಂಥಗಳನ್ನು ಒದಗಿಸಿದ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಪಾಲಕರಿಗೂ ಮತ್ತು ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೂ, ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ನಿರ್ದೇಶನಾಲಯ ಇಲಾಖೆಯ ನಿರ್ದೇಶಕರು ಮತ್ತು ಗ್ರಂಥಾಲಯದವರಿಗೂ ನನ್ನ ವಂದನೆಗಳು, ಭಾರತೀಯ ಶಾಸನಶಾಸ್ತ್ರ ಇಲಾಖೆಯ ನಿರ್ದೇಶಕರಿಗೂ ಮತ್ತು ಸೂಪರಿಂಟೆಂಡ್ ಎಪಿಗ್ರಫಿಸ್ಟ್ ಡಾ.ಡಿ.ಎಂ.ನಾಗರಾಜು ಅವರಿಗೂ ಹಾಗೂ ಗ್ರಂಥಾಲಯದ ಗ್ರಂಥಪಾಲಕರಿಗೂ, ಮೈಸೂರು ಸಾರ್ವಜನಿಕ ಗ್ರಂಥಾಲಯ, ಸರಸ್ವತೀಪುರಂ. ಸಾರ್ವಜನಿಕ ಗ್ರಂಥಾಲಯ, ಐ.ಸಿ.ಎಚ್.ಆರ್, ಬೆಂಗಳೂರಿನ ಮಿಥಿಕ್ ಸೊಸೈಟಿಯ ಗ್ರಂಥಾಲಯದ ಸಿಬ್ಬಂದಿ ವರ್ಗದವರಿಗೂ ಅನಂತ ಧನ್ಯವಾದಗಳು.

ತಿರುಮಕೂಡಲು ನರಸೀಪುರ ತಾಲೂಕಿನಲ್ಲಿರುವ ದೇವಾಲಯಗಳ ಕ್ಷೇತ್ರಕಾರ್ಯ ಮಾಡುವಾಗ ಸಹಕಾರ ನೀಡಿದ ಎಲ್ಲಾ ಗ್ರಾಮಗಳ ಮುಖಂಡರಿಗೂ ಹಲವು ಮಾಹಿತಿಗಳನ್ನು ಒದಗಿಸಿ ದೇವಾಲಯಗಳ ಛಾಯಾಚಿತ್ರಗಳನ್ನು ತೆಗೆಯಲು ಅವಕಾಶ ಕಲ್ಪಿಸಿಕೊಟ್ಟಂತಹ ದೇವಾಲಯಗಳ ಅರ್ಚಕರಿಗೂ ಹಾಗೂ ಸಹಕಾರ ನೀಡಿದ ಸಮಸ್ತ ನಾಗರಿಕ ಬಂಧುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನಾ ಪ್ರೌಢಪ್ರಬಂಧವನ್ನು ಅಂದವಾಗಿ ಬೆರಳಚ್ಚು ಮಾಡಿಕೊಟ್ಟ ಗೆಳೆಯರಾದ ಸನತ್‌ಕುಮಾರ್, ಚಂದ್ರಶೇಖರ.ಎನ್ ಅವರಿಗೂ, ಮುಖಪುಟ ವಿನ್ಯಾಸವನ್ನು ರಚಿಸಿಕೊಟ್ಟ ಡಾ.ಎಚ್.ಎಂ.ಮಲ್ಲಿಕಾರ್ಜುನಸ್ವಾಮಿ ಅವರಿಗೂ ಕರಡು ತಿದ್ದುಪಡಿಯನ್ನು ಮಾಡಿಕೊಟ್ಟ ಉಮಾದೇವಿ ವಿ.ವಿ. ಮುದ್ರಣಾಲಯ, ಮೈಸೂರು ಅವರಿಗೂ, ಕೃತಿಯನ್ನು ಬೈಂಡಿಂಗ್ ಮಾಡಿಕೊಟ್ಟ ಮಧುರಾ ಎಂಟರ್‌ಪ್ರೈಸಸ್, ಸರಸ್ವತೀಪುರಂ, ಅವರಿಗೂ ನನ್ನ ಧನ್ಯವಾದಗಳು. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನನ್ನ ಪ್ರೌಢಪ್ರಬಂಧದ ರಚನೆಗೆ ಸಹಾಯ ಮಾಡಿ ಸಹಕಾರ ನೀಡಿದ ನನ್ನ ಸಹೃದಯಿ ಮಿತ್ರರಿಗೆ ಹಾಗೂ ಬಂಧು-ಬಳಗದವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಸ್ಥಳ; ಮೈಸೂರು (ಸಿದ್ದರಾಜು)
ದಿನಾಂಕ:

**ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ:ಒಂದು ವಿವರಣಾತ್ಮಕ ಅಧ್ಯಯನ**

**(ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ)**

**ಪರಿವಿಡಿ**

## ಸಂಕೇತಾಕ್ಷರಗಳು

| | | |
|---|---|---|
| **ಎಂ.ಎ.ಆರ್** | – | ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ |
| **ಎ.ಕ.ಸಂ.** | – | ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ |
| **ಎ.ಇ** | – | ಎಪಿಗ್ರಾಫಿಯಾ ಇಂಡಿಕಾ |
| **ಇ.ಆಂ** | – | ಇಂಡಿಯನ್ ಆಂಟಿಕ್ವೆರಿ |
| **ಕ.ಶಾ.ಸಾಂ.ಅ** | – | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| **ಕ್ವ್ಯೂ.ಜೆ.ಎಂ.ಎಸ್** | – | ಕ್ವಾರ್ಟರ್ಲಿಜರ್ನಲ್ಆಫ್ ಮಿಥಿಕ್ ಸೊಸೈಟಿ |
| **ತಿ.ನ** | – | ತಿರುಮಕೂಡಲು ನರಸೀಪುರ |
| **ಕ.ವಿ.ವಿ.ಕೋ** | – | ಕನ್ನಡ ವಿಷಯ ವಿಶ್ವಕೋಶ |
| **ತಿ. ನ. ಶಾ.ಸಂ** | – | ತಿರುಮಕೂಡಲು ನರಸೀಪುರ ಶಾಸನ ಸಂಖ್ಯೆ |
| **ಕ.ಸಾ.ಪ** | – | ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ |

# ಅಧ್ಯಾಯ–1

## ಪೀಠಿಕೆ

## ಭೌಗೋಳಿಕ ಲಕ್ಷಣಗಳು, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಇದುವರೆಗೂ ನಡೆದಿರುವ ಅಧ್ಯಯನಗಳು, ದೇವಾಲಯಗಳ ಉಗಮ ಮತ್ತು ವಿಕಾಸ

ಪ್ರಕೃತಿ ಸೌಂದರ್ಯದ ನೆಲೆವೀಡಾದ ಕರ್ನಾಟಕದಲ್ಲಿ ಕಂಗೊಳಿಸುವ ಮೈಸೂರು ಜಿಲ್ಲೆ ಭವ್ಯವಾದ ಇತಿಹಾಸ ಪರಂಪರೆಗಳಿಂದೊಡಗೂಡಿ ರಾಜ್ಯದಲ್ಲೇ ಒಂದು ಪ್ರಮುಖ ಸ್ಥಾನ ಪಡೆದಿದೆ. ಭಾರತೀಯ ಧರ್ಮ, ಸಂಸ್ಕೃತಿಗಳ ಸಾಮರಸ್ಯದ ಪ್ರತೀಕವಾಗಿರುವ ಈ ಜಿಲ್ಲೆಯಲ್ಲಿ ಹಿಂದೂ ಧರ್ಮದ ಎಲ್ಲಾ ಪ್ರಮುಖ ಶಾಖೆಗಳು ಬೆಳೆದಿವೆ. ವೈಭವದ ವಿಜಯನಗರ ಸಾಮ್ರಾಜ್ಯ ಪತನಗೊಂಡ ನಂತರ ಕನ್ನಡನಾಡಿನ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವ ಅನೇಕ ತಾಲೂಕುಗಳ ಪೈಕಿ ತಿರುಮಕೂಡಲು ನರಸೀಪುರವೂ ಒಂದಾಗಿದೆ.[1]

ತಿರುಮಕೂಡಲು ನರಸೀಪುರ ತಾಲೂಕು ಆಡಳಿತ ಕೇಂದ್ರ ಮತ್ತು ದೊಡ್ಡ ಪಟ್ಟಣ. ಮೈಸೂರು ನಗರದಿಂದ ಆಗ್ನೇಯಕ್ಕೆ ೩೦ಕಿ.ಮೀ. ದೂರದಲ್ಲಿ ಕಾವೇರಿ ಕಪಿಲಾ ನದಿಗಳ ಸಂಗಮದ ಬಳಿ ಬಲದಂಡೆಯ ಮೇಲಿದೆ. ಕ್ರಿ.ಶ. ೧೮೬೮ ರಿಂದ ಇದು ತಾಲೂಕು ಕೇಂದ್ರವಾಗಿ ಕ್ರಿ.ಶ. ೧೮೮೨ ರಲ್ಲಿ ಇದರ ಹೆಸರು ತಾಲೂಕಿಗೂ ಬಂತು. ಈ ತಾಲೂಕಿನ ವಿಸ್ತೀರ್ಣ ೫೯೪. ಚ.ಕಿ.ಮೀ. ಹಾಗೂ ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 2,79,156 ಯನ್ನು ಹೊಂದಿದೆ.[2]

ತಿರುಮಕೂಡಲು ಮತ್ತು ನರಸೀಪುರವನ್ನು ಸೇರಿಸುವ ಸೇತುವೆಯೊಂದನ್ನು ಕಪಿಲಾ ನದಿಗೆ ಅಡ್ಡಲಾಗಿ ಕಟ್ಟಲಾಗಿದೆ. ತಿರುಮಕೂಡಲಿನಿಂದ ಕಾವೇರಿಯ ಎಡದಂಡೆಗೂ ಒಂದು ಸೇತುವೆ ಇದೆ. ಊರುಗಳೊಡನೆ ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿರುವ ತಿರುಮಕೂಡಲು ನರಸೀಪುರ ಈ ಭಾಗಕ್ಕೆ ಮುಖ್ಯ ವ್ಯಾಪಾರ ಸ್ಥಳವಾಗಿದೆ, ಇಲ್ಲಿ ಪುರಸಭೆ, ಒಂದು ರೇಷ್ಮೆ ನೂಲಿನ ಕಾರ್ಖಾನೆಯೂ ಸಹ ಇದೆ.

ತಿರುಮಕೂಡಲು ನರಸೀಪುರಕ್ಕೆ ಈ ಹೆಸರು ಬಂದಿರುವುದು ಇಲ್ಲಿಯ ಗುಂಜಾ ನರಸಿಂಹಸ್ವಾಮಿ ದೇವಾಲಯದಿಂದಾಗಿ, ಊರಿನ ಉತ್ತರಕ್ಕೆ ನದಿಯ ದಂಡೆಯಲ್ಲಿ ಉತ್ತರಾಭಿ

ಮುಖವಾಗಿರುವ ಈ ದೇವಾಲಯ ವಿಜಯನಗರ ಕಾಲದಲ್ಲಿ ರಚನೆಯಾಗಿದೆ. ಇಲ್ಲಿ ದೊರೆತಿರುವ ಪ್ರಾಚೀನತಮ ಶಾಸನ ಕೃಷ್ಣದೇವರಾಯನ ಕಾಲದ್ದಾಗಿದ್ದು, ದೇವಾಲಯಕ್ಕೆ ನೀಡಿದ ದತ್ತಿಯ ವಿಚಾರವನ್ನು ತಿಳಿಸುತ್ತದೆ. ಮೂಗೂರು ಅರಸರು ಹಾಗೂ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಈ ದೇವಾಲಯವನ್ನು ಮತ್ತಷ್ಟು ವಿಸ್ತರಿಸಿದ್ದಾರೆ. ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಈ ದೇವಾಲಯ ಗರ್ಭಗೃಹ, ಮಂಟಪ, ಪ್ರಾಕಾರ, ಮಹದ್ವಾರ ಮತ್ತು ಗೋಪುರ ಇವುಗಳಿಂದ ಕೂಡಿದ ವಿಶಾಲ ಕಟ್ಟಡ. ಮಂಟಪದ ಮುಂದೆ ಬಲಿಪೀಠದ ಬಳಿ ಪರಸ್ಪರ ಎದುರಿಗಿರುವ ಕಂಬಗಳ ಮೇಲೆ ತುಂಬ ಅಲಂಕೃತವಾದ, ಅಂಜಲಿಬದ್ಧ ಮತ್ತು ಗಡ್ಡಧಾರಿಯಾದ ಎರಡು ಮೂರ್ತಿಗಳನ್ನು ಕೆತ್ತಿದೆ. ಇವು ಮೂಗೂರು ಅರಸರ ಹಾಗೂ ದೇವಾಲಯದ ಭಾಗವನ್ನು ಕಟ್ಟಿಸಿದ ಅವನ ಸೋದರರನ್ನು ಪ್ರತಿನಿಧಿಸುತ್ತವೆಂದು ಹೇಳಲಾಗಿದೆ. ಇದೇ ರೀತಿ ಮಹದ್ವಾರದ ಬಳಿ ಇರುವ ಮೂರ್ತಿಯೊಂದು ಗೋಪುರವನ್ನು ಕಟ್ಟಿಸಿದ ಇನ್ನೊಬ್ಬ ಮೂಗೂರು ಅರಸನನ್ನು ಪ್ರತಿನಿಧಿಸುತ್ತದೆ. ದೇವಾಲಯದ ಪ್ರಾಕಾರದೊಳಗೆ ರಾಮ, ಕೃಷ್ಣ, ವರದರಾಜ, ಅಂಡಾಳ್ ಮುಂತಾದ ಮೂರ್ತಿಗಳನ್ನೊಳಗೊಂಡ ಕೆಲವು ಚಿಕ್ಕ ಗುಡಿಗಳಿವೆ. ದೇವಾಲಯದ ಸುತ್ತ ಇರುವ ಮೇಲ್ಭಾಗದ ಕೈಪಿಡಿ ಗೋಡೆಯಲ್ಲಿ ವಿಷ್ಣುವಿನ ವಿವಿಧ ರೂಪ ಮತ್ತು ಅವತಾರಗಳ ಮೂರ್ತಿಗಳಿವೆ. ಕೆಲವು ಮೂರ್ತಿಗಳ ಕೆಳಗೆ ಹೆಸರುಗಳನ್ನೂ ಕೆತ್ತಿದೆ. ಕೃಷ್ಣನ ಲೀಲೆಗಳನ್ನು ವಿವರಿಸುವ ಮೂರ್ತಿಗಳೂ ಇಲ್ಲಿವೆ. ಕೆಲವು ವಿಚಿತ್ರ ಮೂರ್ತಿಗಳು ಅಲ್ಲಲ್ಲಿ ಕಾಣಸಿಗುತ್ತವೆ. ದಕ್ಷಿಣ ಹಾಗೂ ಪಶ್ಚಿಮದ ಕೈಪಿಡಿ ಗೋಡೆಯಲ್ಲಿ ಹಿರಣ್ಯಕಶಿಪುವಿನ ಸಂಹಾರ, ಯೋಗಾನರಸಿಂಹ, ಲಕ್ಷ್ಮೀನರಸಿಂಹ, ಅಷ್ಟಪಾಣಿ ನರಸಿಂಹ ಇತ್ಯಾದಿಯಾಗಿ ನರಸಿಂಹನ ಒಂಭತ್ತು ವಿವಿಧ ರೂಪಗಳನ್ನು ಚಿತ್ರಿಸಲಾಗಿದೆ.

ಮೂಲ ದೇವರಾದ ನರಸಿಂಹನ ಬಲಗೈಯ ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವೆ ಗುಂಜಾಸಸ್ಯದ ಕಾಂಡವೊಂದನ್ನು ಬಿಡಿಸಲಾಗಿದೆ. ಈ ಕ್ಷೇತ್ರ ಪಾವಿತ್ರ್ಯದಲ್ಲಿ "ಕಾಶಿಗಿಂತ ಒಂದು ಗುಂಜಿ ತೂಕ ಹೆಚ್ಚು" ಎಂಬ ಅಂಶವನ್ನು ಇದು ಸೂಚಿಸುತ್ತದೆಂಬ ನಂಬುಗೆ ಇದೆ. ಈ ದೇವಾಲಯದ ಎಡಭಾಗಕ್ಕೆ ಅನತಿ ದೂರದಲ್ಲಿ ಸೊಗಸಾದ ಜನಾರ್ಧನ ಮೂರ್ತಿಯುಳ್ಳ ಚಿಕ್ಕ ಗುಡಿಯೊಂದಿದೆ. ಅದರ ಪಶ್ಚಿಮಕ್ಕೆ ಕ್ರಿ.ಶ. 1855 ರಲ್ಲಿ ನಿರ್ಮಿತವಾದ ಪ್ರಹ್ಲಾದ ಮಂಟಪವಿದೆ.

ಊರಿನ ಪೂರ್ವಕ್ಕೆ ನದಿ ದಂಡೆಯಲ್ಲಿ ಮೂಲಸ್ಥಾನೇಶ್ವರ ಗುಡಿ ಇದೆ. ಇದು ಬಹುಶಃ ಕ್ರಿ.ಶ.1300ರ ರಚನೆಯಾಗಿದ್ದು, ಅನಂತರ 19ನೆಯ ಶತಮಾನದಲ್ಲಿ ಪುನರ್ನಿಮಿತವಾದ ದ್ರಾವಿಡ ಶೈಲಿಯ ಚಿಕ್ಕ ಗುಡಿಯಾಗಿದೆ.[3]

ತಿರುಮಕೂಡಲು ನರಸೀಪುರದ ಎದುರಿಗೆ ಕಾವೇರಿ ನದಿಯ ಎಡದಂಡೆಯ ಮೇಲೆ ಒಂದು ಪುರಾತನ ನಿವೇಶನವಿದೆ. ಇದನ್ನು ರಾಬರ್ಟ್‌ಬ್ರೂಸ್‌ಫೂಟ್‌ಕ್ರಿ.ಶ.19ನೆಯ ಶತಮಾನದ ಉತ್ತರಾರ್ಧದಲ್ಲಿ ಮೊಟ್ಟಮೊದಲಿಗೆ ಕಂಡುಹಿಡಿದರು. ಈ ಪ್ರಾಕ್ತನ ನೆಲೆಯನ್ನು ಎಂ.ಶೇಷಾದ್ರಿ ಅವರ ನೇತೃತ್ವದಲ್ಲಿ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಶೋಧನಾ ಇಲಾಖೆ ಕ್ರಿ.ಶ. 1959 ರಿಂದ ಕ್ರಿ.ಶ. 1965ರ ವರೆಗೆ 6 ವರ್ಷಗಳ ಕಾಲ ಉತ್ಖನನ ನಡೆಸಿತು. ಅದರ ಫಲವಾಗಿ ಕ್ರಿ.ಪೂ. 2000 ವರ್ಷಗಳಷ್ಟು ಹಿಂದೆ ಈ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದ ನವಶಿಲಾಯುಗ ಸಂಸ್ಕೃತಿಯಿಂದ ಆರಂಭಿಸಿ ಕಬ್ಬಿಣಯುಗ ಮತ್ತು ಇತಿಹಾಸಯುಗದ ಪ್ರಾರಂಭ ಹಂತವನ್ನೂ ಒಳಗೊಂಡಂತೆ ಕ್ರಿ.ಶ.200-300ರವರೆವಿಗೂ ಜನವಸತಿ ಇದ್ದ ವಿಷಯವಲ್ಲದೆ ಆ ಸಂಸ್ಕೃತಿಗಳ ಅನೇಕ ವಿವರಗಳೂ ತಿಳಿದುಬಂದವು.[4]

## ಭೌಗೋಳಿಕ ಲಕ್ಷಣಗಳು

ತಿರುಮಕೂಡಲು ನರಸೀಪುರ ತಾಲೂಕು ಮೈಸೂರು ಜಿಲ್ಲೆಯ ಏಳು ತಾಲೂಕುಗಳಲ್ಲಿ ಒಂದು. ತಾಲೂಕಿನ ಉತ್ತರಕ್ಕೆ ಮಂಡ್ಯ, ಮಳವಳ್ಳಿ, ಪೂರ್ವ ದಿಕ್ಕಿನಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲೂಕು, ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕು. ಆಗ್ನೇಯಕ್ಕೆ ಯಳಂದೂರು ತಾಲೂಕು ನೈಋತ್ಯಕ್ಕೆ ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕು ಹಾಗೂ ಪಶ್ಚಿಮಕ್ಕೆ ಮೈಸೂರು ತಾಲೂಕುಗಳಿವೆ.[5]

ತಿರುಮಕೂಡಲು ನರಸೀಪುರ ತಾಲೂಕಿನ ಒಟ್ಟು ವಿಸ್ತೀರ್ಣವು ಸುಮಾರು 599.21 ಚ.ಕಿ.ಮೀ. ಗಳಾಗಿದ್ದು[6], ಮೈಸೂರು ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಶೇ.10.5ರಷ್ಟಿದೆ. 2001ರ ಜನಗಣತಿಯಂತೆ ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 2,79,005 ರಲ್ಲಿ 1,42,167 ಪುರುಷರು ಹಾಗೂ 1.36,838 ಮಹಿಳೆಯರಿದ್ದರು. ಜನಸಂಖ್ಯಾ ದೃಷ್ಟಿಯಿಂದ ಮೈಸೂರು ಜಿಲ್ಲಾ ಮಟ್ಟದಲ್ಲಿ ಮೂರನೇ ಸ್ಥಾನದಲ್ಲಿದೆ.[7]

ಮೈಸೂರು ಜಿಲ್ಲೆಯ ಪೂರ್ವಭಾಗದಲ್ಲಿ 76°-46° ಮತ್ತು 77°-00° ಪೂರ್ವ ರೇಖಾಂಶ 12°-04° ಮತ್ತು 12°-23° ಉತ್ತರ ಅಕ್ಷಾಂಶಗಳ ನಡುವೆ, ಸಮುದ್ರ ಮಟ್ಟದಿಂದ ಸರಾಸರಿ 850 ಕಿ.ಮೀ ಎತ್ತರದಲ್ಲಿ ಈ ತಾಲೂಕು ಹರಡಿಕೊಂಡಿದೆ.[8]

ತಾಲೂಕಿನ ನರಸೀಪುರ-ಬನ್ನೂರು ರಸ್ತೆಯಲ್ಲಿ ಅತ್ತಹಳ್ಳಿಯಿಂದ ಉತ್ತರಕ್ಕೆ ಎರಡು ಕಿ.ಮೀ ದೂರದ ಬಿ.ಬೆಟ್ಟಹಳ್ಳಿ ಸಮೀಪವಿರುವ ಒಡ್ಗಲ್ ರಂಗನಾಥಸ್ವಾಮಿ ಬೆಟ್ಟವು, ಇತಿಹಾಸ ಪೂರ್ವಕಾಲದ ಅವಶೇಷಗಳನ್ನು ಹೊಂದಿದ್ದು, ಬೆಟ್ಟದ ಮೇಲೆ ರಂಗನಾಥಸ್ವಾಮಿ ದೇವಾಲಯವಿದೆ. ಈ ಬೆಟ್ಟದಿಂದ 5 ಕಿ.ಮೀ. ದೂರದಲ್ಲಿ ದಕ್ಷಿಣಕ್ಕಿರುವ ಉಕ್ಕಲಗೆರೆ ಮಲ್ಲಪ್ಪನ ಬೆಟ್ಟದ ಮೇಲೆ ಮಲ್ಲಿಕಾರ್ಜುನ ದೇವಾಲಯವಿದೆ. ತಾಲೂಕಿನ ವಾಯುವ್ಯ ಭಾಗದ ರಂಗಸಮುದ್ರ-ನರಸೀಪುರ ಮಾರ್ಗದಲ್ಲಿ, ಕಾವೇರಿ ಎಡದಂಡೆ ತುಂಬಲ ಗ್ರಾಮದ ವ್ಯಾಪ್ತಿಯಲ್ಲಿರುವ ಕಂಬದರಾಯನ ಬೆಟ್ಟದ ಮೇಲೆ ಕಂಬದರಾಯನ ದೇವಾಲಯದವಿದೆ. ತಾಲೂಕಿನ ಪೂರ್ವಭಾಗದಲ್ಲಿ ಸರಗೂರು-ತಲಕಾಡು ರಸ್ತೆಯಲ್ಲಿ ಬೆಟ್ಟಹಳ್ಳಿ ಬಳಿ ಕಾವೇರಿ ನದಿಯ ಎಡದಂಡೆಯ ಮೇಲೆ ಮುಡುಕುತೊರೆ ಬೆಟ್ಟ ಹಾಗೂ ಬೋಳುಬೆಟ್ಟಗಳಿವೆ.

ತಿರುಮಕೂಡಲು ತಾಲೂಕಿನ ಕ್ರಿ.ಶ. 1901-70ರವರೆಗಿನ ಅವಧಿಯಲ್ಲಿ ಸರಾಸರಿ 718 ಮಿ.ಮೀ.[9] ವಾರ್ಷಿಕ ವಾಡಿಕೆ ಮಳೆಯಾಗುತ್ತಿದ್ದು, ಜಿಲ್ಲಾ ಸರಾಸರಿ ಮಳೆ ಪ್ರಮಾಣ 782ಮಿ.ಮೀ.ಗಿಂತ ಕಡಿಮೆಯಿದೆ. ತಾಲೂಕಿನ ಹವಾಗುಣ ವರ್ಷದುದ್ದಕ್ಕೂ ಹಿತಕರವಾಗಿದ್ದು, ಭೂಕಂಪನ ಮುಕ್ತ ಪ್ರದೇಶವೆಂದೇ ಸಾಮಾನ್ಯವಾಗಿ ಪರಿಗಣಿಸಲಾಗಿದೆ. ಅರಣ್ಯ ಸಂಪನ್ಮೂಲ ದೃಷ್ಟಿಯಿಂದ ಮೈಸೂರು ಜಿಲ್ಲೆಯು ರಾಜ್ಯಮಟ್ಟದಲ್ಲಿ ಎರಡನೇ ಸ್ಥಾನದಲ್ಲಿದ್ದರೂ ತಾಲೂಕಿನಲ್ಲಿರುವ ಅರಣ್ಯ ಪ್ರಮಾಣವು ನಗಣ್ಯವೇ. ಕಾವೇರಿ-ಕಪಿಲಾ ನದಿಗಳಿಂದಾಗಿ ತಾಲೂಕಿನಲ್ಲಿ ಭತ್ತ, ಕಬ್ಬು ಪ್ರಮುಖ ಬೆಳೆಗಳಾಗಿದ್ದು, ರಾಗಿ, ಜೋಳ, ಹತ್ತಿ, ದ್ವಿದಳ ದಾನ್ಯಗಳಾದ ಅವರೆ, ಕಡಲೆ, ಹೆಸರುಕಾಳುಗಳನ್ನು ಬೆಳೆಯಲಾಗುತ್ತದೆ. ತೋಟಗಾರಿಕೆಯೂ ಸಾಕಷ್ಟು ಪ್ರಧಾನವಾಗಿದೆ. ತಾಲೂಕಿನಲ್ಲಿ ಪಶುಸಂಪನ್ಮೂಲವೂ ಸಮೃದ್ಧವಾಗಿದ್ದು, ಹೈನುಗಾರಿಕೆ, ಕೋಳಿ ಸಾಕಾಣೆ, ಮೀನುಗಾರಿಕೆಯಂತಹ ಉದ್ಯಮಗಳೂ ಪರಿಣಾಮಕಾರಿಯಾಗಿ ಬೆಳೆದಿವೆ.

**ಅಧ್ಯಯನದ ಉದ್ದೇಶಗಳು**

ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಸುಮಾರು ಏಳು ಶತಮಾನಗಳ ಕಾಲ ಆಡಳಿತ ನಡೆಸಿದ ಗಂಗ ಅರಸರ ರಾಜಧಾನಿ ಪಟ್ಟವಾಗಿದ್ದ ತಲಕಾಡು, ಚೋಳರ ಕಾಲದ ದೇವಾಲಯವಿರುವ ತಡಿಮಾಲಂಗಿ, ಹೊಯ್ಸಳರ ಕಾಲದ ವಿಶ್ವವಿಖ್ಯಾತ ದೇವಾಲಯಗಳಿರುವ ಸೋಮನಾಥಪುರ ಮುಂತಾದ ಚಾರಿತ್ರಿಕ ಮಹತ್ವದ ಸ್ಥಳಗಳ ಬಗ್ಗೆ ಈಗಾಗಲೇ ಅಧ್ಯಯನ ನಡೆದಿದ್ದು, ಕೆಲವು ಬಿಡಿಲೇಖನಗಳೂ ಸಹ ಪ್ರಕಟಗೊಂಡಿವೆ. ಆದರೆ ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಸಮಗ್ರವಾದ ಅಧ್ಯಯನ ನಡೆದಿರುವುದಿಲ್ಲ. ಹೀಗಾಗಿ ಇಡೀ ತಾಲೂಕಿನ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡು ಸಂಶೋಧನೆ ನಡೆಸಿ ಪ್ರೌಢ ಪ್ರಬಂಧವನ್ನು ರಚಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ತಿರುಮಕೂಡಲು ನರಸೀಪುರ ತಾಲೂಕಿನಾದ್ಯಂತ ಕಂಡುಬರುವ ಪ್ರಕಟಿತ ಮತ್ತು ಅಪ್ರಕಟಿತ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಹಾಗೂ ಬಿಡಿ ಶಿಲ್ಪಗಳ ಬಗ್ಗೆ ಸವಿವರವಾಗಿ ಮಾಹಿತಿ ಕಲೆ ಹಾಕುವುದು ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ**

ಮಾನವ ಸಮೂಹ ಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಒಂದು ತಾಲೂಕಿನ ಸಾಂಸ್ಕೃತಿಕ ಅಧ್ಯಯನವು ಮನುಷ್ಯನ ಸಮಗ್ರ ಜೀವನ ವಿಧಾನ, ವ್ಯವಹಾರಗಳನ್ನು ಒಳಗೊಳ್ಳುತ್ತಿದೆ. ಇಲ್ಲಿ ಪರಂಪರಾನುಗತವಾಗಿ ಮನುಷ್ಯನು ಅಭಿವ್ಯಕ್ತಿ ಹಾಗೂ ಅವರ ಎಲ್ಲಾ ಮೌಲ್ಯಗಳನ್ನು ಪರಿಶೀಲಿಸುವ ಪ್ರಮುಖ ವಿಷಯವಾಗಿದೆ. ಕರ್ನಾಟಕದಲ್ಲಿ ಇತ್ತೀಚಿನ ದಿನಗಳಲ್ಲಿ ಒಂದು ತಾಲೂಕಿನ ಸಮಗ್ರ ಅಧ್ಯಯನಗಳು ನಡೆಯುತ್ತಿರುವುದು ಕಂಡುಬಂದರೂ ಕೇವಲ ಬೆರಳಣಿಕೆಯಷ್ಟು ಮಾತ್ರ. ಈ ನಿಟ್ಟಿನಲ್ಲಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಜಿಲ್ಲೆಯೆಂದೇ ಪ್ರಸಿದ್ಧವಾದಂತಹ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕಿನಲ್ಲಿರುವ ಸಾಂಸ್ಕೃತಿಕ ಹಾಗೂ ಜೀವಂತವಾದ ಬದುಕಿನ ಅನನ್ಯತೆಯ ಅಂಶಗಳನ್ನು ಅರಿಯುವುದು ಮಹತ್ವವಾಗಿದೆ. ಪ್ರತಿಯೊಂದು ವಿಷಯವನ್ನು ಪ್ರತ್ಯೇಕವಾದ ಅಧ್ಯಯನಕ್ಕೆ ಒಳಪಡಿಸಿ ಕೊಂಡಿರುವ ವ್ಯಾಪ್ತಿಯಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಅಧಿಕೃತವಾದ ದಾಖಲೆಗಳ ಮತ್ತು

ಕ್ಷೇತ್ರಕಾರ್ಯದ ಮೂಲಕ ದೊರೆತಿರುವ ಮಾಹಿತಿಗಳನ್ನಾಧರಿಸಿದ ಅಧ್ಯಯನ ಮಾಡುವ ಉದ್ಧೇಶವನ್ನು ಹೊಂದಿದೆ.

**ಅಧ್ಯಯನದ ಸ್ವರೂಪ**

ಮೊದಲನೆಯ ಅಧ್ಯಾಯವಾದ ಪೀಠಿಕೆಯಲ್ಲಿ ಇದುವರೆಗೂ ಈ ನೆಲೆಯಲ್ಲಿನ ಅಧ್ಯಯನಗಳ ಸೂಕ್ಷ್ಮ ಪರಿಚಯವನ್ನು ಮಾಡುವುದರ ಮೂಲಕ, ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ತಿಳಿಸುವುದಲ್ಲದೇ ದೇವಾಲಯಗಳ ಉಗಮ ಮತ್ತು ವಿಕಾಸದ ಬಗ್ಗೆ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಉಮ್ಮತ್ತೂರು ಪಾಳೇಯಗಾರು ಮತ್ತಿತರ ಆಡಳಿತದಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ರಾಜಕೀಯ ವ್ಯವಸ್ಥೆಯ ಬಗ್ಗೆ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ಒಟ್ಟಾರೆ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡು ಸಂಶೋಧನಾತ್ಮಕ ಅಧ್ಯಯನ ಮಾಡುವುದಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ತಾಲೂಕಿನಾದ್ಯಂತ ಕಂಡುಬರುವ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಮತ್ತು ಇನ್ನಿತರ ಬಿಡಿಶಿಲ್ಪಗಳ ಬಗ್ಗೆ ಸವಿವರವಾಗಿ ತಿಳಸಲಾಗುವುದು.

ಹೀಗೆ ಈ ಅಧ್ಯಯನದ ಮಹಾಪ್ರಬಂಧವು ಹಲವು ಅಧ್ಯಾಯಗಳಲ್ಲಿ ವಿಸ್ತಾರತೆಯನ್ನು ಪಡೆದುಕೊಂಡಿದ್ದು, ಇದಕ್ಕೆ ಪೂರಕವಾಗಿ ವ್ಯಕ್ತಿಗಳಿಂದ ಸಂಗ್ರಹಿಸಿದ ಮಾಹಿತಿಗಳು, ಕ್ಷೇತ್ರ ಕಾರ್ಯ ಅನುಭವ, ಗ್ರಂಥಋಣ, ದೇವಾಲಯಗಳ ಛಾಯಾಚಿತ್ರಗಳು, ಮತ್ತು ಸ್ಮಾರಕ ಶಿಲ್ಪಗಳ ಛಾಯಾಚಿತ್ರಗಳನ್ನು ಅನುಬಂಧದಲ್ಲಿ ನಮೂದಿಸಲಾಗಿದೆ.

**ಇದುವರೆಗೂ ನಡೆದಿರುವ ಅಧ್ಯಯನಗಳು**

ಮೈಸೂರು ಜಿಲ್ಲೆಯ ಪೂರ್ವ ಭಾಗದಲ್ಲಿರುವ ತಿರುಮಕೂಡಲು ನರಸೀಪುರ ತಾಲೂಕು, ಕಾವೇರಿ, ಕಪಿಲ ನದಿಗಳಿಂದಾಗಿ ಬಹು ಹಿಂದಿನಿಂದಲೂ ಚಾರಿತ್ರಿಕ, ಧಾರ್ಮಿಕ

ಹಾಗೂ ಸಾಂಸ್ಕೃತಿಕ ಮಹತ್ವವನ್ನು ಹೊಂದಿದೆ. ತಾಲೂಕಿನಲ್ಲಿ ಹರಿಯುವ ಕಾವೇರಿಯ ದಡದಲ್ಲಿ ಶಿಲಾಯುಗದ ಮಾನವರು ವಾಸಿಸುತ್ತಿದ್ದುದ್ದಕ್ಕೆ ಬೆನಕನಹಳ್ಳಿ, ಹೆಮ್ಮಿಗೆ ಮುಂತಾದೆಡೆಯಲ್ಲಿ ದೊರೆತಿರುವ ಪುರಾತತ್ವ ಅವಶೇಷಗಳನ್ನು ಉದಾಹರಿಸಬಹುದಾಗಿದೆ. ಗಂಗರ ರಾಜಧಾನಿಯಾಗಿ ಮೆರೆದ ತಲಕಾಡು ಇತಿಹಾಸದುದ್ದಕ್ಕೂ ಆಡಳಿತ ಕೇಂದ್ರವಾಗಿ, ಧಾರ್ಮಿಕ ನೆಲೆಯಾಗಿ ಮಹತ್ವದ ಪಾತ್ರ ವಹಿಸಿದ್ದು, ಪ್ರತಿ ವರ್ಷ ಇಲ್ಲಿ ನಡೆಯುವ ಬಂಡರಸಮ್ಮನ ಜಾತ್ರೆ, ಸಾಮಾನ್ಯವಾಗಿ 12 ವರ್ಷಗಳಿಗೊಮ್ಮೆ ಜರುಗುವ ಪಂಚಲಿಂಗ ದರ್ಶನಗಳಿಂದಾಗಿ ಇಂದಿಗೂ ಧಾರ್ಮಿಕತೆಯನ್ನು ಸಾರುವಲ್ಲಿ ಯಶಸ್ವಿಯಾಗಿದೆ.

ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಕುರಿತು ಅಧ್ಯಯನಗಳು ನಡೆದಿದ್ದರೂ ತಾಲೂಕಿನಾದ್ಯಂತ ಕಂಡು ಬರುವ ಶೈವ, ವೈಷ್ಣವ ದೇವಾಲಯ, ಜೈನ ಬಸದಿಗಳ ಬಗ್ಗೆ ಸಮಗ್ರ ಅಧ್ಯಯನ ನಡೆದಿರುವುದಿಲ್ಲ.

ನನ್ನ ಅಧ್ಯಯನಕ್ಕೆ ಅನುವಾಗುವಂತಹ ಕೆಲವು ಬಿಡಿ ಲೇಖನಗಳು ಈ ಸಮಯದಲ್ಲಿ ಉಲ್ಲೇಖಾರ್ಹವಾಗಿದೆ.

ಮಹದೇವಯ್ಯ, ಎಂ.ಪಿ ಅವರ "ವಿಜಯನಗರ ಅರಸರ ಕಾಲದ ತಿರುಮಕೂಡಲು ನರಸೀಪುರ ತಾಲೂಕಿನ ಕೆಲವು ದೇವಾಲಯಗಳ ನೋಟ"

ಮಹದೇವಯ್ಯ ಎಂ.ಪಿ. ಅವರ "ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯ ಕೆಲವು ಅಂಶಗಳು" ಕೃತಿಯು ತಲಕಾಡಿನ ಗಂಗರ ಪ್ರಾಚೀನ ರಾಜಧಾನಿಯಾದ ಕೋಲಾರ ಹಾಗೂ ನಂತರದ ರಾಜಧಾನಿ ತಲಕಾಡಿಗೆ ಬದಲಾಯಿಸಿದುದರ ಬಗ್ಗೆ ಮಾಹಿತಿ ನೀಡುತ್ತದೆ. ತಲಕಾಡಿನ ಬಗ್ಗೆ ವಿವರಣೆಯನ್ನು ಹಾಗೂ ರಾಜನ ಸ್ಥಾನಮಾನದ ಬಗ್ಗೆ ಈ ಕೃತಿ ಮಾಹಿತಿ ನೀಡುತ್ತದೆ.

ನಿರ್ಮಲರಾಜ್ ಅವರ 'ತಿರುಮಕೂಡಲು ನರಸೀಪುರದ ಇತಿಹಾಸ ಮತ್ತು ವಾಸ್ತು ಶಿಲ್ಪ' ಎಂಬ ಲೇಖನಗಳು ಈ ತಾಲೂಕಿನ ಇತಿಹಾಸ ಮತ್ತು ದೇವಾಲಯಗಳ ವಾಸ್ತುಶಿಲ್ಪದ ಬಗ್ಗೆ ಬೆಳಕು ಚೆಲ್ಲುತ್ತವೆ.

ಕರಿಯಪ್ಪ. ಜಿ. ಅವರ "ಹೊಯ್ಸಳರ ಆಳ್ವಿಕೆಯಲ್ಲಿ ಜೈನರ ಕಲೆ ಮತ್ತು ವಾಸ್ತುಶಿಲ್ಪ" ಎಂಬ ಪಿಎಚ್.ಡಿ, ಪ್ರೌಢ ಪ್ರಬಂಧದಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ

ಮೂಗೂರಿನಲ್ಲಿ ಕಂಡು ಬರುವ ಆದಿನಾಥ ಬಸದಿಯ ಬಗ್ಗೆ ವಿವರಣೆ ನೀಡಿದ್ದಾರೆ. ಜೊತೆಗೆ ಹೊಯ್ಸಳರ ಕಾಲದಲ್ಲಿ ಜೈನರ ಕಲೆಯ ಆರಂಭ ಮತ್ತು ಬೆಳವಣಿಗೆಯ ಬಗ್ಗೆ ಸಂಪೂರ್ಣವಾದ ವಿವರಣೆ ನೀಡಿದ್ದಾರೆ.

ಶೆಟ್ಟರ್. ಎಸ್ ಅವರು "ಹೊಯ್ಸಳ ಟೆಂಪಲ್ಸ್ " ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ಬಗ್ಗೆ ಚರ್ಚಿಸಿದ್ದಾರೆ. ಈ ಗ್ರಂಥವು ತಿರುಮಕೂಡಲು ನರಸೀಪುರ ತಾಲೂಕಿನ ಕೆಲವು ದೇವಾಲಯಗಳ ಶಿಲ್ಪಗಳನ್ನು ಗುರುತಿಸುವಲ್ಲಿ ನೆರವಾಗಿದೆ.

ಗುರುರತ್ನಬಾಬು ಅವರ "ತಲಕಾಡಿನ ಗಂಗರಸರ ಸಾಂಸ್ಕೃತಿಕ ಪರಂಪರೆ" ಎಂಬ ಕೃತಿಯು ಗಂಗರಸರ ಕಲಾ ಸ್ಮಾರಕಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

ಎಪಿಗ್ರಾಫಿಯ ಕರ್ನಾಟಿಕ ಸಂಪುಟ 5ರಲ್ಲಿನ ಶಾಸನಗಳು ತಿರುಮಕೂಡಲು ನರಸೀಪುರ ತಾಲೂಕಿನ ಕೆಲವು ಶಾಸನ ಉಲ್ಲೇಖಿತ ದೇವಾಲಯಗಳು, ವೀರಗಲ್ಲು, ಮಾಸ್ತಿಗಲ್ಲು ಮತ್ತು ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಯುವಲ್ಲಿ ನೆರವಾಗಿದೆ.

ಹರ್ಲಾಪುರ. ಎಸ್. ಜಿ ಅವರು "ವಾಸ್ತು ಶಾಸ್ತ್ರ ಹಾಗೂ ಗೃಹ ನಿರ್ಮಾಣ" ಕೃತಿಯಲ್ಲಿ ದೇವಾಲಯಗಳ ಅಷ್ಟದಿಕ್ಕುಗಳು ಮತ್ತು ವಾಸ್ತುಶಾಸ್ತ್ರದ ಬಗ್ಗೆ ಚರ್ಚಿಸಿದ್ದಾರೆ.

ಸ್ವಾಮಿ ಹರ್ಷಾನಂದ ಅವರು "ನಮ್ಮ ದೇವಾಲಯಗಳು" ಎಂಬ ಕಿರು ಹೊತ್ತಿಗೆಯಲ್ಲಿ ದೇವಾಲಯಗಳ ನಿರ್ಮಾಣ, ಸಾಗಿ ಬಂದ ದಾರಿ ಮತ್ತು ನಿರ್ಮಾಣದ ಹಂತಗಳ ಬಗ್ಗೆ ವಿವರಿಸಿದ್ದಾರೆ.

ಶಾಸನ ನಿರ್ದೇಶನಾಲಯ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಮೈಸೂರು ಅವರು ಪ್ರಕಟಿಸಿದ "ಶಾಸನ ಶಾಸ್ತ್ರದ ಪರಿಚಯ" ಎಂಬ ಕೃತಿಯು ತಿರುಮಕೂಡಲು ನರಸೀಪುರ ತಾಲೂಕಿನ ಶಾಸನಗಳನ್ನು ಅಧ್ಯಯನ ಮಾಡುವಲ್ಲಿ ನೆರವಾಗಿದೆ.

ರಾಜೇಂದ್ರಪ್ಪ. ಎಸ್ ಅವರ ಕರ್ನಾಟಕ ಸರ್ಕಾರ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ 2010ರಲ್ಲಿ ಪ್ರಕಟಣೆ ಮಾಡಿದ ಗ್ಯಾಸೆಟಿಯರ್ ಕೃತಿಯು ತಿರುಮಕೂಡಲು ನರಸೀಪುರ ತಾಲೂಕಿನ ಪ್ರಮುಖ ದೇವಾಲಯಗಳ ಬಗ್ಗೆ ಮಾಹಿತಿ ನೀಡಿದೆ.

ಅಪರ್ಣ ಕೂ.ಸ ಅವರ "ದೇವಾಲಯ ವಾಸ್ತುಶಿಲ್ಪ ಪರಿಚಯ" ಎಂಬ ಕೃತಿಯು ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಭುವನೇಶ್ವರಿಗಳು ಮತ್ತು ದೇವಾಲಯಗಳ ಭಾಗಗಳನ್ನು ಗುರುತಿಸುವಲ್ಲಿ ಸಹಕಾರಿಯಾಗಿದೆ.

ಸರಸ್ವತಿ, ಎನ್. ಅವರ "ಹೊಯ್ಸಳರ ಇತಿಹಾಸ" ಕೃತಿಯು ತಿರುಮಕೂಡಲು ನರಸೀಪುರ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ರಚಿಸುವಲ್ಲಿ ನೆರವಾಗಿದೆ.

ದೇವರಕೊಂಡಾರೆಡ್ಡಿ ಅವರ "ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ" ಎಂಬ ಗ್ರಂಥದಲ್ಲಿ ಗಂಗರ ಕಾಲದ ದೇವಾಲಯಗಳ ಉಗಮ ಮತ್ತು ವಿಕಾಸವನ್ನು ವಿವರವಾಗಿ ಚರ್ಚಿಸಿದ್ದಾರೆ. ಈ ಗ್ರಂಥ ಸಂಪೂರ್ಣವಾಗಿ ಕ್ಷೇತ್ರಕಾರ್ಯವನ್ನು ಆಧರಿಸಿ ರಚಿತವಾದ ಕೃತಿ. ಈ ಕೃತಿಯಲ್ಲಿ ಗಂಗರ ಸಾಂಸ್ಕೃತಿಕ ಸಾಧನೆಗಳಿಗೆ ಒದಗಿದ ಪ್ರೇರಣೆ, ಪ್ರಭಾವವನ್ನು ಬಾಣರು ಮತ್ತು ನೊಳಂಬರ ದೇಗುಲ ವಾಸ್ತುವಿನ ಮೇಲೆ ಗಂಗರ ವಾಸ್ತುಶೈಲಿ ಬೀರಿದ ಪ್ರಭಾವವನ್ನು ಉದಾಹರಣೆಗಳ ಮೂಲಕ ಗಮನಕ್ಕೆ ತಂದಿದ್ದಾರೆ.

ಗೋಪಾಲ್, ಆರ್. ಅವರ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಅವರ ಸಂಪಾದಕತ್ವದಲ್ಲಿ 2010ರಲ್ಲಿ "ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ತಿರುಮಕೂಡಲು ನರಸೀಪುರ ತಾಲೂಕಿನ ಕೆಲವು ದೇವಾಲಯಗಳ ಶಾಸನಗಳು ಮತ್ತು ರಾಜಕೀಯ ಇತಿಹಾಸದ ಬಗ್ಗೆ ಕೆಲವು ಸಂಶೋಧನಾ ಲೇಖನಗಳು ವಿವರವಾದ ಮಾಹಿತಿಯನ್ನು ನೀಡಿವೆ.

ಮಹದೇವಸ್ವಾಮಿ. ಕೆ.ಎಂ. ಅವರ 'ಹೊಯ್ಸಳರ ಕಾಲದ ಮುಖ್ಯ ನಗರ ಕೇಂದ್ರಗಳು ಮತ್ತು ನಗರೀಕರಣ' ಎಂಬ ಕೃತಿಯಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ತಲಕಾಡಿನ ಐತಿಹಾಸಿಕ ಹಿನ್ನೆಲೆ, ಸ್ಥಳಪುರಾಣ ಮತ್ತು ದೇವಾಲಯಗಳ ಬಗ್ಗೆ ಕೆಲವು ಮಾಹಿತಿಗಳಿವೆ.

ಚಿದಾನಂದಮೂರ್ತಿ, ಎಂ. ರವರು ತಮ್ಮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಪ್ರೌಢಪ್ರಬಂಧದಲ್ಲಿ 'ಯುದ್ಧಕಲೆ ಮತ್ತು ಆತ್ಮಬಲಿಯ ಹಲವು ಪ್ರಕಾರಗಳು' ಎಂಬ ಅಧ್ಯಾಯಗಳಲ್ಲಿ ತಮ್ಮ ಉದ್ದೇಶ ಮತ್ತು ಅಧ್ಯಯನದ ಪರಿಮಿತಿಯಲ್ಲಿ ವೀರಗಲ್ಲುಗಳ ಬಗ್ಗೆ ಸಾಕಷ್ಟು ವಿಸ್ತಾರವಾದ ಚರ್ಚೆ ಮಾಡಿದ್ದಾರೆ. ಇದು ವೀರಗಲ್ಲುಗಳ ಪಾಠ ಮತ್ತು ಶಿಲ್ಪಗಳನ್ನು

ಗುರುತಿಸುವಲ್ಲಿ ಸಂಶೋಧಕರಿಗೆ ದಾರಿ ದೀಪವಾಗಿದೆ. ಇವರು ಬರೆದಿರುವ ಮತ್ತೊಂದು ಕಿರುಕೃತಿಯಾದ 'ವೀರಗಲ್ಲು ಮತ್ತು ಮಾಸ್ತಿಗಲ್ಲು' ಎಂಬುದು ಪರಿಶೀಲ ನಾರ್ಹವಾದುದು. ಇಲ್ಲಿ ವೀರಗಲ್ಲುಗಳ ವರ್ಗೀಕರಣವನ್ನು ಮೊದಲಿಗೆ ಪ್ರಸ್ತಾಪಿಸಲಾಗಿದೆ.

ಕಲ್ಬುರ್ಗಿ, ಎಂ.ಎಂ.ರವರು ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಆಶ್ರಯದಲ್ಲಿ 1978ರಲ್ಲಿ ನೀಡಿದ 'ಸಮಾಧಿ–ಬಲಿದಾನ–ವೀರಮರಣ–ಸ್ಮಾರಕಗಳು'ಎಂಬ ಹೆಸರಿನ ಉಪನ್ಯಾಸ 1980ರಲ್ಲಿ ಐ.ಬಿ.ಹೆಚ್. ಪ್ರಕಾಶನದಿಂದ ಕೃತಿ ರೂಪ ಪಡೆಯಿತು. ಇದರಲ್ಲಿ ವೀರಗಲ್ಲು, ಮಾಸ್ತಿಗಲ್ಲು ಹಾಗೂ ನಿಸಿಧಿ ಶಾಸನಗಳ ಬೆಳವಣಿಗೆಗೆ ಕಾರಣವನ್ನು ತಾತ್ವಿಕ ಹಿನ್ನೆಲೆಯೊಂದಿಗೆ ಚರ್ಚಿಸಲಾಗಿದೆ.

ಶೇಷಶಾಸ್ತ್ರಿ,ಆರ್.ರವರು ಪ್ರಕಟಿಸಿರುವ 'ಕರ್ನಾಟಕದ ವೀರಗಲ್ಲುಗಳು'ಎಂಬ ಪ್ರೌಢ ಪ್ರಬಂಧದಲ್ಲಿ ವೀರಗಲ್ಲುಗಳ ಉಗಮ, ವಿಕಾಸ, ವಿಂಗಡಣೆ, ವೀರಗಲ್ಲು ಶಿಲ್ಪ ನಿರೂಪಣಾ ತಂತ್ರ ಮುಂತಾದ ಅನೇಕ ವಿಚಾರಗಳನ್ನು ಕ್ಷೇತ್ರಕಾರ್ಯದ ಹಿನ್ನೆಲೆಯೊಂದಿಗೆ ಚರ್ಚಿಸಲಾಗಿದೆ. ಇದು ವೀರಗಲ್ಲುಗಳ ಬಗ್ಗೆ ವಿವರವಾಗಿ ವಿಶ್ಲೇಷಿಸುವ ಮಾದರಿ ಪ್ರಬಂಧವಾಗಿದ್ದು, ಸಂಶೋಧಕರಿಗೆ ಮಾರ್ಗದರ್ಶಿಯಾಗಿದೆ.

ಶೆಟ್ಟರ್,ಎಸ್. ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ 'ಮೆಮೊರಿಯಲ್ ಸ್ಟೋನ್ಸ್'ಎಂಬ ಇಂಗ್ಲೀಷ್ ಲೇಖನಗಳ ಸಂಪುಟವು ಕರ್ನಾಟಕವು ಸೇರಿದಂತೆ ಹಲವು ರಾಜ್ಯಗಳ ಸ್ಮಾರಕ ಶಿಲೆಗಳ ಉಗಮ, ಪ್ರಾಮುಖ್ಯತೆ, ವೈವಿಧ್ಯತೆಗಳ ಬಗ್ಗೆ ಚರ್ಚಿಸಲಾಗಿದೆ. ಇವರ ಇನ್ನೆರಡು ಕೃತಿಗಳಾದ 'ಇನ್‌ವೈಟಿಂಗ್ ಡೆತ್' ಮತ್ತು 'ಪರ್ಸೂಯಿಂಗ್ ಡೆತ್' ಎಂಬ ಕೃತಿಗಳಲ್ಲಿ ತಾತ್ವಿಕ ಹಿನ್ನೆಲೆಯಲ್ಲಿ ಮರಣ ಸ್ಮಾರಕಗಳ ಬಗ್ಗೆ ಚರ್ಚಿಸಲಾಗಿದೆ. ಮರಣ ಸ್ಮಾರಕಗಳನ್ನು ಗುರುತಿಸುವಲ್ಲಿ ಇವರ ಕೃತಿಗಳು ಸಂಶೋಧಕರಿಗೆ ಮಾರ್ಗದರ್ಶಿಯಾಗಿವೆ.

ಬಸವರಾಜ ಕಲ್ಗುಡಿಯವರ 'ಮಹಾಸತಿ ಆಚರಣೆ: ಒಂದು ಅಧ್ಯಯನ' ಎಂಬ ಕೃತಿಯಲ್ಲಿ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಮಹಾಸತಿ ಆಚರಣೆಗೆ ಸಂಬಂಧಿಸಿದ ಜಾನಪದ ಗೀತೆಗಳು ಮತ್ತು ಸ್ಥಳೀಯರ ನಂಬಿಕೆಗಳನ್ನು ಆಧರಿಸಿ ಮಹಾಸತಿ ಸಂಪ್ರದಾಯವನ್ನು ವಿವರಿಸಲಾಗಿದೆ.

ಪರಮಶಿವಮೂರ್ತಿ, ಡಿ.ವಿ.ಯವರು ತಮ್ಮ 'ಕನ್ನಡ ಶಾಸನಶಿಲ್ಪ'ಎಂಬ ನಿಬಂಧದಲ್ಲಿ 'ವೀರಶಾಸನ ಶಿಲ್ಪ ಮತ್ತು ಬಲಿದಾನ ಶಾಸನ ಶಿಲ್ಪ' ಎಂಬ ಅಧ್ಯಾಯಗಳಲ್ಲಿ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ವೀರಗಲ್ಲು ಶಿಲ್ಪಗಳು ಹಾಗೂ ಮಾಸ್ತಿಗಲ್ಲು ಶಿಲ್ಪಗಳ ವೈವಿಧ್ಯತೆ, ವಿಶೇಷತೆ ಮತ್ತು ವರ್ಗೀಕರಣದ ಬಗ್ಗೆ ವಿವರಿಸಿದ್ದಾರೆ.

ಹಿರೇಮಠ. ಬಿ.ಆರ್. ಅವರ 'ವೀರಗಲ್ಲುಗಳು' ಮತ್ತು ಚನ್ನಕ್ಕ ಎಲಿಗಾರ ಅವರ 'ಮಾಸ್ತಿಗಲ್ಲುಗಳು' ಹಾಗೂ ಎಂ.ಜಿ. ಮಂಜುನಾಥ್ ಅವರ 'ಮಾಸ್ತಿಕಲ್ಲು, ವೀರಗಲ್ಲು, ಮತ್ತು ನಿಸಿಧಿ ಶಾಸನಗಳು' ಎಂಬ ಕಿರುಕೃತಿಗಳು ಮಾಸ್ತಿಕಲ್ಲು, ವೀರಗಲ್ಲು, ಮತು ನಿಸಿಧಿ ಶಾಸನಗಳ ಬಗ್ಗೆ ಸರಳವಾಗಿ ಕಿರಿಯರಿಗೂ ಅರ್ಥವಾಗುವ ರೀತಿಯಲ್ಲಿ ವಿವರಿಸಿದೆ. ಇವು ಮಾಸ್ತಿಕಲ್ಲು, ವೀರಗಲ್ಲು ಮತ್ತು ನಿಸಿಧಿ ಶಾಸನಗಳನ್ನು ಗುರುತಿಸಲು ಮೂಲಭೂತವಾಗಿ ಸಂಶೋಧಕರಿಗೆ ಬೇಕಾದ ಮಾಹಿತಿಯನ್ನು ಒದಗಿಸುತ್ತವೆ.

ಎಪಿಗ್ರಾಫಿಯಾ ಕರ್ನಾಟಿಕ ಐದನೇ ಸಂಪುಟದಲ್ಲಿ ತಿರುಮಕೂಡಲು ನರಸೀಪುರ ತಾಲೂಕಗಳ ಶಾಸನ ಪಾಠವನ್ನು ಪ್ರಕಟಿಸಲಾಗಿದ್ದು, ಇದರಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ಹಿರಿಯೂರು, ಮೂಗೂರು, ಹಿಟುವಳ್ಳಿ, ಕಲಿಯೂರು, ದೊಡ್ಡನಹುಂಡಿ, ವಾಟಾಳು ಗ್ರಾಮಗಳಲ್ಲಿ 7 ಶಾಸನ ಸಹಿತ ವೀರಗಲ್ಲುಗಳು ದೊರೆತಿರುವುದು ಕಂಡುಬಂದಿದೆ.

## ದೇವಾಲಯದ ಉಗಮ ಮತ್ತು ವಿಕಾಸ

ದೇವಾಲಯಗಳನ್ನು ದೇವಸ್ಥಾನ, ಗುಡಿ, ದೇವಮಂದಿರ, ದೇವಗಾರ, ದೇವಳ, ದೇಗುಲ ಇತ್ಯಾದಿ ಹೆಸರುಗಳಿಂದು ಗುರುತಿಸಲಾಗುತ್ತದೆ. ದೇವಾಲಯಗಳ ವಿಕಾಸದಲ್ಲಿ ವಿವಿಧ ಹಂತಗಳನ್ನು ಗುರುತಿಸುವುದು ಸಾಧ್ಯವಾದರೂ ಅದು ಉಗಮಗೊಂಡ ಬಗೆಗೆ ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ದೇವಾಲಯಗಳು ಬೌದ್ಧ ಸ್ತೂಪಗಳಿಂದ ಉಗಮವಾಗಿವೆ, ವೇದಕಾಲೀನ ಯಜ್ಞವೇದಿಕೆಗಳಿಂದ ಬೆಳೆದು ಬಂದುವೇ ಅಥವಾ ಸಮಾಧಿ ಮಂದಿರಗಳಾಗಿ ಆರಂಭವಾದುವೇ, ಮುಂತಾದ ಹಲವಾರು ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಇನ್ನೂ ದೊರೆತಿಲ್ಲ. ಪ್ರಪಂಚದ ಪ್ರಾಚೀನ ನಾಗರೀಕತೆಗಳ ತೊಟ್ಟಿಲುಗಳೆಂದು ಕೆರೆಯಲಾಗುವ ಈಜಿಪ್ಟ್, ಚೀನಾ, ಮೆಸಪೊಟೋಮಿಯ ಮತ್ತು ಸಿಂಧೂ ನದಿಯ ಬಯಲಿನ ನಾಗರೀಕತೆಗಳಲ್ಲಿ ವಾಸಿಸುತ್ತಿದ್ದಂತಹ ಜನರಿಗೆ ದೇವತಾರಾಧನೆ ತಿಳಿದಿತ್ತು. ಮೆಸಪೊಟೋಮಿಯ ಮತ್ತು

ಈಜಿಪ್ಟ್‌ಗಳಲ್ಲಿ ಸೂರ್ಯ, ನದಿ, ಚಂದ್ರ ಮತ್ತಿತರ ದೇವರುಗಳನ್ನು ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ.

ಶಿಲಾಯುಗದ ಕಾಲದಲ್ಲಿ ದೇವರ ಕಲ್ಪನೆ ಇರಲಿಲ್ಲ. ಆದರೆ ತಮ್ಮ ಬದುಕಿಗೆ ಆಸರೆಯಾದ ಭಾವನೆಗಳ ಅಭಿವ್ಯಕ್ತಿಗೆ ಪ್ರಯತ್ನಿಸುತ್ತಾ ಹತ್ತು ಹಲವು ನಂಬಿಕೆಗಳನ್ನು ಬೆಳೆಸಿಕೊಳ್ಳುತ್ತಿದ್ದ ಕಾಲದಲ್ಲಿ ಆಹಾರದ ಸಮಸ್ಯೆಯನ್ನು ಬಗೆಹರಿಸುತ್ತಿದಂತಹ ಪ್ರಕೃತಿಯನ್ನು ಅವರು ಕೃತಜ್ಞತಾ ಭಾವದಿಂದ ಕಂಡರು ಮಿಂಚು, ಗುಡುಗು, ಸಿಡಿಲು, ಮೊಳೆತಬೀಜ, ಬೆಳೆದ ಗಿಡ, ಹೂ ಬಿಟ್ಟು ಹಣ್ಣು ನೀಡಿದ ಗಿಡ ಮರಗಳೆಲ್ಲವೂ ಪ್ರಾರಂಭದಲ್ಲಿ ಮನುಷ್ಯನ ಜೀವನದಲ್ಲಿ ವಿಸ್ಮಯವನ್ನುಂಟು ಮಾಡಿರಲೇಬೇಕು ಇಂತಹ ಪ್ರಾಕೃತಿಕ ವಸ್ತುಗಳು ಇದಕ್ಕೆ ಕಾರಣವಾದವು.[10] ಹೆಣ್ಣಿನ ಗರ್ಭಧಾರಣೆ, ಮಗುವಿನ ಜನನ ಮತ್ತು ಬೆಳವಣಿಗೆ ಮತ್ತಷ್ಟು ವಿಸ್ಮಯವನ್ನುಂಟು ಮಾಡಿರಬಹುದು. ಹುಟ್ಟು ಸಾವುಗಳು ಅವರಲ್ಲಿ ಕಾಣದ ಶಕ್ತಿಯ ಕೈವಾಡಗಳಂತೆ ಕಂಡಿರಬಹುದು. ಸ್ವಾಭಾವಿಕವಾಗಿ ಸಾವನ್ನಪ್ಪಿದಾಗ ಸತ್ತವರು ಮತ್ತೆ ಮರಳಿ ಬರುತ್ತಾರೆ ಎಂಬ ನಂಬಿಕೆ ಅಂದಿನ ಮಾನವನಲ್ಲಿ ಮೊಳಕೆಯೊಡೆದಿರಬೇಕು. ಹಾಗಾಗಿ ವ್ಯಕ್ತಿಯೊಬ್ಬ ಸತ್ತಾಗ ವ್ಯಕ್ತಿಯ ಮೃತ ದೇಹದ ಜೊತೆಗೆ ಅವನು ಉಪಯೋಗಿಸುತ್ತಿದ್ದ ಆಯುಧ, ಪಾತ್ರೆ, ಆಹಾರ ಧಾನ್ಯ ಇತ್ಯಾದಿ ವಸ್ತುಗಳನ್ನು ಗುಹೆಗಳಲ್ಲಿ ಇಡುವ ಪದ್ಧತಿ ಆರಂಭವಾಗಿರಬಹುದು. ಈ ರೀತಿಯ ಕಲ್ಲು ಗೂಡುಗಳೇ ಅನಂತರದಲ್ಲಿ ಬೃಹತ್‌ಶಿಲಾ ಗೋರಿಗಳಾಗಿ ಪರಿವರ್ತನೆಗೊಂಡು, ಆಧುನಿಕ ನಾಗರೀಕತೆಯ ಸಂದರ್ಭದಲ್ಲಿ ಬದಲಾವಣೆಗೊಂಡು ಈ ಬೃಹತ್ ಗೋರಿಗಳೇ ದೇವಾಲಯಗಳಾಗಿರಬಹುದು.[11]

ಸತ್ತವನು ಬದುಕಿ ಉಳಿದಿರುವವರ ಮೇಲೆ ಪ್ರಭಾವ ಬೀರಬಹುದು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಪಿತೃಪೂಜೆ ಆರಂಭವಾಗಿರಬೇಕು. ಮರಣ ಹೊಂದಿದ ಹಿರಿಯ ವ್ಯಕ್ತಿಯ ಮೇಲಿನ ಗೌರವವೇ ಪೂಜೆಯೆಂದು ತಿಳಿಯಬೇಕಾಗುತ್ತದೆ. ಹಾಗೆ ಪೂಜೆಗೊಂಡ ಪಿತೃವಿನ ಸಮಾಧಿ. ಆ ಸಮಾಧಿಯ ಮೇಲೆ ಗುರುತಿಗೆ ನೆಟ್ಟ ಕಲ್ಲು, ಬೆಳೆದ ಮರಗಳು ಪಿತೃವನ್ನು ಪ್ರತಿನಿಧಿಸುವ ಸಂಕೇತವಾಗಿ ಪೂಜೆಗೊಂಡಿರಬೇಕು. ಈ ಬಗೆಯ ಪೂಜೆ ಈಗಲೂ ಭಾರತೀಯ ಸಂಸ್ಕೃತಿಯಲ್ಲಿ ಉಳಿದುಬಂದಿದೆ. ವೇದಗಳ ಕಾಲದಲ್ಲಿ ಅಗ್ನೀಂದ್ರಿಯ ಎಂಬ ಸಮಾಧಿ ಮಂದಿರಗಳಿದ್ದವೆಂದು ತಿಳಿದುಬರುತ್ತದೆ.[12] ಆದರೆ ಇದರ ಸ್ವರೂಪವೇನೆಂದು ಖಚಿತವಾಗಿ

ಹೇಳಲು ಹೆಚ್ಚು ಆಧಾರಗಳಿಲ್ಲ. 'ಅಗ್ನೀಂದ್ರಿಯ'ಗಳನ್ನು ವೈದಿಕ ಸ್ತೂಪಗಳು ಎಂದು ಗುರುತಿಸಿ ಬೌದ್ಧ ಸ್ತೂಪಗಳಿಗೆ ಅಗ್ನೀಂದ್ರಿಯಗಳೇ ಮೂಲ ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[13] ಇಂಥ ಸಂಪ್ರದಾಯವೇ ದೇವಾಲಯದ ಉಗಮಕ್ಕೆ ನಾಂದಿಯಾಗಿರಬೇಕು ಎನ್ನಬಹುದು.

ಸಿಂಧೂ ಬಯಲಿನ ನಾಗರಿಕತೆ ಬಗೆಗೆ ಗಮನಿಸಿದಾಗ ಭಾರತದಲ್ಲಿ ಆ ವೇಳೆಗಾಗಲೇ ವಿಗ್ರಹಗಳ ರಚನೆ ಆರಂಭವಾಗಿರುವುದನ್ನು ಅಲ್ಲಿ ದೊರೆತಿರುವ ಹಲವಾರು ಮುದ್ರೆಗಳು ಸ್ಪಷ್ಟಪಡಿಸಿವೆ. ಸಿಂಧೂ ನದಿ ಬಯಲಿನ ಮೊಹೆಂಜೊದಾರೊವಿನಲ್ಲಿ ದೊರೆತಿರುವ ಮೂರು ತಲೆಯ ದೇವತೆಯನ್ನು ಜಾನ್ ಮಾರ್ಷಲ್ ಮತ್ತು ಮ್ಯಾಕೆ ಅವರು 'ಶಿವ' ಎಂದು ಗುರುತಿಸಿದ್ದಾರೆ. ಆದರೆ ಈ ಬಗ್ಗೆ ವಿದ್ವಾಂಸರುಗಳಲ್ಲಿ ಭಿನ್ನಾಭಿಪ್ರಾಯವಿದೆ. ಮಹಾಭಾರತದಲ್ಲಿ ತಿಳಿಸಿರುವ ಶಿವನ ಹಲವು ಲಕ್ಷಣಗಳನ್ನು ಇಲ್ಲಿ ಗುರುತಿಸಬಹುದಾದರೂ ಪ್ರಧಾನವಾಗಿ ವೃಷಭವೇ ಇಲ್ಲದಿರುವ ಕಾರಣ ಇದು 'ಪಶುಪತಿ' ಶಿವನಲ್ಲ ಎಂಬುದು ಹಲವಾರು ವಿದ್ವಾಂಸರ ಅಭಿಪ್ರಾಯ. ಇದು ಪೂಜೆಗೆ ಮೂಲ ಎನ್ನಬಹುದು. ಸಿಂಧೂನದಿಯ ಬಯಲಿನ ಮತ್ತು ವೇದಕಾಲಿನ ಜನರ ಸಾಮಾಜಿಕ ಸಮಾವೇಶದಿಂದ ದೇವಾಲಯಗಳ ನಿರ್ಮಾಣವಾಯಿತು ಎಂಬ ಅಭಿಪ್ರಾಯವನ್ನು ಸದಾಶಿವ ಅಂಬಾದಾಸ್ ದಾಂಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[14] ಋಗ್ವೇದದಲ್ಲಿ ದೇವತೆಗಳ ಉಲ್ಲೇಖವಿದ್ದರೂ ಅವರನ್ನು ಸ್ತುತಿಸುವ ಪ್ರಾರ್ಥಿಸುವ ವಿಷಯಗಳಿದ್ದರೂ ಎಲ್ಲೂ ಪ್ರತಿಮೆಗಳ ವಿಗ್ರಹಗಳ ಅಥವಾ ದೇವಾಲಯಗಳ ಉಲ್ಲೇಖವಿಲ್ಲ ಅಗ್ನಿ, ಯಮ, ವರುಣ, ರುದ್ರ, ವಿಷ್ಣು ಇತ್ಯಾದಿ ದೇವತೆಗಳನ್ನು ಶಾಂತಿ ಮತ್ತು ರಕ್ಷಣೆಗಾಗಿ ಸ್ತುತಿಸುತ್ತಿದ್ದ ಮತ್ತು ಯಾಗಯಜ್ಞಗಳ ಮೂಲಕ ಆರಾಧಿಸುತ್ತಿದ್ದ ವೇದಕಾಲಿನ ಸಂಸ್ಕೃತಿಯ ಜೊತೆಗೆ ಸಿಂಧೂನದಿಯ ಬಯಲಿನ ಜನರ ಪ್ರತಿಮಾ ಪೂಜೆಯ ಪದ್ಧತಿಯೂ ಸೇರಿ ದೇವತೆಗಳಿಗೆ ಪ್ರತಿಮಾ ಸ್ವರೂಪವಾಗಿರಬೇಕು ಇಂತಹ ಪ್ರತಿಮೆಗಳು ರಕ್ಷಣೆಗಾಗಿ ಪಡೆದಂತಹ ಕಟ್ಟಡಗಳ ದೇವಾಲಯಗಳು ಎನ್ನಿಸಿಕೊಂಡಿರಬಹುದು.

ಸಿಂಧೂ ನದಿ ಬಯಲಿನ ನಾಗರೀಕತೆಯ ಕಾಲದಲ್ಲಿನ ಮುದ್ರೆಗಳು ಹಾಗೂ ವೇದಗಳ ಕಾಲದ ಉಲ್ಲೇಖಗಳು ಕ್ರಮವಾಗಿ ಪ್ರತಿಮಾಪೂಜೆ ಹಾಗೂ ದೇವತಾ ಪೂಜೆಗಳು ಇದ್ದುದನ್ನು ಸ್ಪಷ್ಟಪಡಿಸುತ್ತವೆ. ಸಿಂಧೂ ಬಯಲಿನ ಜನರ ಪೂಜಾವಿಧಾನದ ಬಗೆಗೆ ಯಾವುದೇ ಖಚಿತವಾದ

ದಾಖಲೆಗಳಿಲ್ಲವಾದರೂ ವೇದಕಾಲದಲ್ಲಿ ಯಜ್ಞ, ಯಾಗಗಳು ಪೂಜಾವಿಧಾನವಾಗಿದ್ದವು. ಆ ಕಾಲದಲ್ಲಿ ದೇವಸ್ಥಾನಗಳು ಮರ ಇಟ್ಟಿಗೆಯಂತಹ ನಾಶವಾಗುವ ವಸ್ತುಗಳಿಂದ ನಿರ್ಮಿತವಾಗಿ ಕಾಲಾನಂತರದಲ್ಲಿ ನಶಿಸಿರುವ ಸಾಧ್ಯತೆಗಳನ್ನು ಅಲ್ಲಗೆಳೆಯುವಂತಿಲ್ಲ.[15] ಕೆಲವು ಇಟ್ಟಿಗೆ ದೇವಾಲಯಗಳನ್ನು ಕಲ್ಲಿನಿಂದ ಪುನರ್ ನಿರ್ಮಾಣ ಮಾಡಿರುವ ದಾಖಲೆಗಳಿವೆ.[16] ಪ್ರಾಚೀನ ಭಾರತದಲ್ಲಿ ಬಹು ಕಾಲದವರೆಗೆ ಮಾನವನು ವಾಸಿಸುವ ಮನೆಯನ್ನು, ಕಲ್ಲಿನಿಂದ ಕಟ್ಟುವುದನ್ನು ನಿಷೇಧಿಸಲಾಗಿತ್ತು. ಕೇವಲ ದೇವಾಲಯಗಳಿಗೆ ಮಾತ್ರ ಕಲ್ಲಿನ ಕಟ್ಟಡ ಕಟ್ಟುವುದು ಸೀಮಿತವಾಗಿತ್ತು. ಈ ಕಾರಣಗಳಿಂದಲೇ ಭಾರತೀಯ ಲೌಕಿಕ ವಾಸ್ತುಶಿಲ್ಪ ಮರವನ್ನು ಪ್ರಧಾನವಾಗಿ ಕಟ್ಟಡದ ರಚನೆಗೆ ಬಳಸಿಕೊಂಡಿದೆ. ಕಾಲಕಳೆದಂತೆ ರಾಜರು, ಚಕ್ರವರ್ತಿಗಳು ವಾಸಿಸುವ ಸ್ಥಳದ ಕಟ್ಟಡದ ರಚನೆಗೆ, ಪ್ರಮುಖ ಕಟ್ಟಡಗಳಿಗೆ ಕಲ್ಲಿನ ಬಳಕೆ ಆರಂಭವಾಯಿತು. ಆನಂತರ ಇತರ ಶಿಲ್ಪಗಳಲ್ಲಿಯೂ ಕ್ರಮವಾಗಿ ಕಲ್ಲು ಬಳಸುವುದು ರೂಢಿಗೆ ಬಂದಿತು.[17] ವಾಸ್ತುಶಾಸ್ತ್ರ ಅಥವಾ ಗೃಹವಾಸ್ತು ಶಿಲ್ಪ ಶಾಸ್ತ್ರದ ಒಂದು ಭಾಗ ಸಾಮಾನ್ಯವಾಗಿ ರಥಗಳ ನಿರ್ಮಾಣಕ್ಕೆ ರಥಶಿಲ್ಪ ಪ್ರಕಾರ–ಕೋಟೆಯ ನಿರ್ಮಾಣಕ್ಕೆ ದುರ್ಗಶಿಲ್ಪ ಮೂರ್ತಿಗಳ ನಿರ್ಮಾಣಕ್ಕೆ ಮೂರ್ತಿಶಿಲ್ಪ. ದೇವಶಿಲ್ಪಕ್ಕೆ ಜಗಶಿಲ್ಪ ಎಂತಲೂ ಕರೆಯುತ್ತಾರೆ. ದೇವತೆಗಳು ಹಾಗೂ ಮಾನವನು ವಾಸಿಸುವ ಸ್ಥಳವನ್ನು ವಾಸ್ತು ಎಂದು ಕರೆದಿದ್ದಾರೆ. ಈ ಸ್ಥಳವನ್ನು ಭೂಮಿ, ಪ್ರಸಾದ, ಯಾನ ಮತ್ತು ಶಯನಗಳೆಂದು ಕರೆಯುತ್ತಾರೆ. ವಾಸಿಸಲು ಯೋಗ್ಯವಾದ ಕಟ್ಟಡವನ್ನು ಪ್ರಸಾದ ಎಂದೂ ರಥ ಗಾಡಿ ಮುಂತಾದವನ್ನು ಯಾನ ಎಂದೂ ಮಂಚ ಹಾಗೂ ಇನ್ನಿತರ ಮಲಗುವ ಸಲಕರಣೆಗಳನ್ನು ಶಯನವೆಂತಲೂ ಕರೆಯುತ್ತಾರೆ.[18]

ಭಾರತದಲ್ಲಿ ಮೊಟ್ಟ ಮೊದಲು ಶಾಸ್ತ್ರಬದ್ಧವಾದ ದೇವಾಲಯಗಳ ನಿರ್ಮಾಣ ಯಾವಾಗ ಆಯಿತು ಎಂಬ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಕ್ರಿ.ಶ. ೩ ಅಥವಾ 4ನೆಯ ಶತಮಾನದಲ್ಲಿ ನಿರ್ಮಾಣವಾದ ಯಾವೊಂದು ಗುಡಿಯು ಈಗ ಉಳಿದಿಲ್ಲ. ಆದರೆ ಆ ಕಾಲಕ್ಕೆ ಮೊದಲು ಗುಡಿಗಳು ಇದ್ದಿರಬೇಕು. ಮೊದಲಿಗೆ ಗುಡಿಗಳನ್ನು ಗುಡಿಸಿಲಿನಂತೆ ಬಿದಿರು, ಮರ, ಮಣ್ಣು ಮುಂತಾದ ವಸ್ತುಗಳನ್ನು ಬಳಸಿ ಕಟ್ಟಿರಬಹುದು. ಆನಂತರದ ಕಾಲದಲ್ಲಿ ರಾಜರೂ ಶ್ರೀಮಂತರೂ ದೇವಾಲಯಗಳನ್ನು ಕಟ್ಟಿಸತೊಡಗಿದರು. ಅವರ ಉದ್ದೇಶ ದೇವಾಲಯಗಳ ನಿರ್ಮಾಣದಲ್ಲಿ ಯಾವ ಅಹಂಕಾರ, ಪ್ರತಿಷ್ಠೆ, ಕೀರ್ತಿಕಾಮನೆಗಳು ಆಗ ಇಲ್ಲದಿರಬಹುದು. ಅವರ ಉದ್ದೇಶ ಪೂಜೆಗೊಂದು ತಾಣ ಎಂಬಷ್ಟಕ್ಕೆ ಸೀಮಿತವಾಗಿತ್ತು. ಆನಂತರದಲ್ಲಿ ಅವು

ವಿಕಾಸಹೊಂದಿ ವಿಶಾಲವೂ ಆದವು.[19] ದೇವಾಲಯ ನಿರ್ಮಾಣ ಪರಂಪರೆ ಬೆಳೆಯಿತು. ನಗರಗಳ ನಿರ್ಮಾಣದ ಜೊತೆಗೆ ದೇವಾಲಯಗಳ ನಿರ್ಮಾಣವೂ ತಳುಕು ಹಾಕಿಕೊಂಡಿತ್ತು. ರಾಜರು, ನಗರ ಮುಖ್ಯಸ್ಥರು, ಅಧಿಕಾರಿ ವರ್ಗದವರು ತಮಗೆ ಅನುಕೂಲವಾದ ಕಡೆಯಲ್ಲಿ ಕೆರೆ ಕಟ್ಟೆಗಳ ನಿರ್ಮಾಣದ ಜೊತೆಗೆ ದೇವಾಲಯಗಳ ನಿರ್ಮಾಣವನ್ನು ಮಾಡಿದರು. ಅವುಗಳ ಪೋಷಣೆಗೆ, ಸಂರಕ್ಷಣೆಗೆ ದಾನದತ್ತಿಗಳನ್ನು ನೀಡಿದರು. ಕೆಲವೊಮ್ಮೆ ಬೇರೆಡೆಗಳಿಂದ ಮೂರ್ತಿಗಳನ್ನು ತಂದು ನಗರಗಳಲ್ಲಿ ಪ್ರತಿಷ್ಠಾಪನೆ ಮಾಡುತ್ತಿದ್ದುದೂ ಉಂಟು.

ಹೀಗೆ ಆರಂಭದಲ್ಲಿ ಪ್ರಕೃತಿ ಪೂಜೆಯ ರೂಪದಲ್ಲಿದ್ದು, ಆನಂತರ ಮಾತೃಪೂಜೆ,[20] ಪಿತೃಪೂಜೆ ಮತ್ತು ಸಮಾಧಿ ಪೂಜೆಗಳು ಬಳಕೆಗೆ ಬಂದು ಆಮೇಲೆ ಪ್ರತಿಮೆ, ಹಾಗೂ ವಿಗ್ರಹಗಳ ಕಲ್ಪನೆ ಬೆಳೆದು, ಪ್ರತಿಮೆ, ವಿಗ್ರಹದ ರಕ್ಷಣೆಗೆ ಕಟ್ಟಡಗಳು ನಿರ್ಮಾಣಗೊಂಡು ಇವೇ ದೇವಾಲಯ ಎಂಬ ಹೆಸರು ಪಡೆದವು ಎಂದು ಭಾವಿಸಿದರೆ ಉತ್ಪ್ರೇಕ್ಷೆಯಾಗಲಾರದು. ಒಟ್ಟಿನಲ್ಲಿ ದೇವತಾಪೂಜೆ ದೇವಾಲಯಗಳ ನಿರ್ಮಾಣಕ್ಕಿಂತ ಪ್ರಾಚೀನ ಎಂದು ಮಾತ್ರ ಹೇಳಬಹುದು. ಆದರೆ ದೇವಾಲಯಗಳ ಉಗಮ ಇನ್ನೂ ಮಬ್ಬಿನಲ್ಲಿಯೇ ಉಳಿದಿರುವ ವಿಚಾರವಾಗಿದೆ. ದೇವಾಲಯಗಳ ವಾಸ್ತುಶಿಲ್ಪವನ್ನು ಅಧ್ಯಯನ ಮಾಡಿರುವ ವಿದ್ವಾಂಸರ ಅಭಿಪ್ರಾಯಗಳಲ್ಲೂ ಕುರಿತು ಸಾಮರಸ್ಯವಿಲ್ಲ 'ಶುಲ್ಬಸೂತ್ರ' ಪ್ರಕಾರ ಯಜ್ಞವೇದಿಕೆ ಯಾಗ ಶಾಲೆಗಳೇ ದೇವಾಲಯ ವಾಸ್ತುಶಿಲ್ಪದ ಮೂಲ ಎಂಬುದು ಕೆಲವರ ವಾದ, ಬೌದ್ಧಸ್ತೂಪಗಳೇ ದೇವಾಲಯದ ವಾಸ್ತುವಿಗೆ ಆಧಾರ ಎಂಬುದು ಮತ್ತೇ ಕೆಲವರ ಅಭಿಪ್ರಾಯವಾಗಿದೆ.

ಕರ್ನಾಟಕದ ಇತಿಹಾಸವನ್ನು ಅಧ್ಯಯನ ಮಾಡಿದರೆ ಬಾದಾಮಿ ಚಾಳುಕ್ಯರ ಕಾಲದಲ್ಲಿ ವಾಸ್ತು ನಿರ್ಮಾಣ ಪ್ರಾರಂಭವಾಯಿತು ಎಂಬ ಅಂಶ ನಮಗೆ ತಿಳಿಯುತ್ತದೆ. ಚಾಳುಕ್ಯರು ನಿರ್ಮಾಣ ಮಾಡಿದ ದೇವಾಲಯಗಳಲ್ಲಿ ದ್ರಾವಿಡ ಮತ್ತು ನಾಗರ ವಾಸ್ತು ಶೈಲಿಯ ದೇವಾಲಯಗಳು ಒಟ್ಟೊಟ್ಟಿಗೆ ಒಂದೇ ಸ್ಥಳದಲ್ಲಿ ನಿರ್ಮಾಣವಾಗಿರುವುದು ವಿಶೇಷತೆ. ಚಾಳುಕ್ಯರು ನಾಗರ ಮತ್ತು ದ್ರಾವಿಡ ಶೈಲಿಗಳನ್ನು ಪೋಷಿಸಿದರಾದರೂ ಇವರ ಹೆಚ್ಚಿನ ಒಲವು ದ್ರಾವಿಡ ವಾಸ್ತುವಿನ ಕಡೆಯೇ ಇದ್ದಿತ್ತು. ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲು ಚಾಳುಕ್ಯರ ವಾಸ್ತುಶಿಲ್ಪಕ್ಕೆ 'ದೇವಾಲಯಗಳ ತೊಟ್ಟಿಲು' ಎಂದು ಗಂಗೂಲಿ, ಓ.ಸಿ. ಅವರು ಹೇಳಿದ್ದಾರೆ.[21] ಇವರ ಅನಂತರ ರಾಷ್ಟ್ರಕೂಟರ ಕಾಲದಲ್ಲಿಯೂ ದ್ರಾವಿಡ ವಾಸ್ತುಶೈಲಿಯ ಒಲವು ಇದ್ದುದ್ದು ಕಾಣಬರುತ್ತದೆ.

ದಕ್ಷಿಣದಲ್ಲಿ ಆಳುತ್ತಿದ್ದ ಗಂಗರು, ನೊಳಂಬರು ಸಹ ದ್ರಾವಿಡ ವಾಸ್ತು ಶೈಲಿಯನ್ನು ಸುಮಾರು ಎರಡು ಶತಮಾನಗಳ ಕಾಲ ಆಳುತ್ತಾ ಪೋಷಿಸಿದರು. ಉತ್ತರ ಕರ್ನಾಟಕದ ಅಂದರೆ ತುಂಗಭದ್ರೆಯ ಆಚೆಗೆ ದ್ರಾವಿಡ ವಾಸ್ತುವಿನಿಂದ ಪ್ರೇರಿತವಾದ ಹೆಚ್ಚು ವೈಭವೀಕೃತವಾದ ಕಲ್ಯಾಣಿ ಚಾಳುಕ್ಯರ ಶೈಲಿ ಬಳಕೆಯಲ್ಲಿತು. ಇವರ ವಾಸ್ತು ಶೈಲಿಯು ಹೆಚ್ಚು ವೈಭವಿಕರಿಸಲ್ಪಟ್ಟ ದ್ರಾವಿಡ ಶೈಲಿಯಾಯಿತು. ಇದಕ್ಕೆ ಕಾರಣ ಇವರು ಬಳಸಿದ ಶಿಲ್ಪ ಮಾಧ್ಯಮ ಸೋಪುಗಲ್ಲು.[22] ಈ ಕಲ್ಲಿನ ಮೃದುತ್ವ ಹೆಚ್ಚು ಸೂಕ್ಷ್ಮವಾದ ಕೆತ್ತನೆ ಮತ್ತು ಅಲಂಕರಣೆಗಳಿಗೆ ಕಾರಣವಾಯಿತು. ಇವರ ಕಾಲದಲ್ಲಿ ನಕ್ಷತ್ರಕಾರದ ತಳವಿನ್ಯಾಸ, ಕಡೆದ ಅಲಂಕೃತ ಕಂಬಗಳು ಮತ್ತು ಅನೇಕ ದ್ವಿಕೂಟ ಮತ್ತು ತ್ರಿಕೂಟ ದೇವಾಲಯಗಳು ನಿರ್ಮಾಣಗೊಂಡವು.[23] ಇಂಥ ರಚನೆಗಳಿಂದ ಚಾಳುಕ್ಯ ಶೈಲಿಗೆ ದ್ರಾವಿಡ ಶೈಲಿಯಲ್ಲಿ ಒಂದು ಪ್ರತ್ಯೇಕವಾದ ಸ್ಥಾನ ದೊರೆತಿತು.

ಹೊಯ್ಸಳರ ಕಾಲದಲ್ಲಿ ದಕ್ಷಿಣ ಕರ್ನಾಟಕದ ದ್ರಾವಿಡ ಶೈಲಿಯ ಪ್ರಭಾವ ಮತ್ತು ಉತ್ತರ ಕರ್ನಾಟಕದ ಕಲ್ಯಾಣಿ ಚಾಳುಕ್ಯರ ಶೈಲಿಯ ಪ್ರಭಾವಗಳೆರಡು ಪ್ರೇರಣೆಯಾದವು. ಪ್ರಾರಂಭದ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳನ್ನು ಕಣಶಿಲೆಯಲ್ಲಿ ನಿರ್ಮಿಸಲಾಯಿತು. ಕೆಲವು ದೇವಾಲಯಗಳನ್ನು ಗ್ರಾನೈಟ್ ಶಿಲೆಯಿಂದಲೂ ನಿರ್ಮಿಸಲಾಯಿತು. ಆನಂತರದ ಕಾಲದಲ್ಲಿ ಕಲ್ಯಾಣ ಚಾಳುಕ್ಯರ ಶೈಲಿಯಿಂದ ಪ್ರೇರಿತವಾದ ವೈಭವೀಕೃತ ದ್ರಾವಿಡ ಶೈಲಿ ಮತ್ತು ವೇಸರ ಶೈಲಿಯಲ್ಲಿ ದೇವಾಲಯಗಳು ನಿರ್ಮಾಣಗೊಂಡವು. ಹೊಯ್ಸಳರು ಆರಂಭದಲ್ಲಿ ಕಲ್ಯಾಣಿ ಚಾಳುಕ್ಯರ ಮಾಂಡಲೀಕರಾಗಿ ರಾಜಕೀಯ ಜೀವನವನ್ನು ಪ್ರಾರಂಭಿಸಿದವರು. ಆದುದರಿಂದ ಅವರ ಮಾದರಿಯನ್ನೇ ಅನುಸರಿಸುತ್ತಾ ವೇಸರ ಶೈಲಿಯನ್ನು ಬೆಳೆಸಿದರು. ಇವರು ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ದೇವಾಲಯಗಳನ್ನು ನಿರ್ಮಿಸಿದರು. ಶಿಲ್ಪಗಳ ಅದ್ಭುತ ಕೆತ್ತನೆ ನಕ್ಷತ್ರಾಕಾರದ ತಳವಿನ್ಯಾಸವನ್ನು ರಚಿಸುವುದರಲ್ಲಿ ಪ್ರಾಮುಖ್ಯತೆಯನ್ನು ಕೊಟ್ಟರು. ಇವರ ಆನಂತರದ ಕಾಲದಲ್ಲಿ ವಿಜಯನಗರದ ಅರಸರು ಗ್ರಾನೈಟ್ ಶಿಲೆಯನ್ನು ಬಳಸಿ ದ್ರಾವಿಡ ಶೈಲಿಯಲ್ಲಿ ದೇವಾಲಯ ನಿರ್ಮಾಣ ಮಾಡಿದರು. ಇವರು ಕಂಬಗಳಲ್ಲಿ ಶಿಲ್ಪಗಳನ್ನು ಕೆತ್ತುವುದು ಪ್ರಾಕಾರ ಮತ್ತು ಸುತ್ತಲೂ ಗುಡಿಗಳು ಹಾಗೂ ರಾಯಗೋಪುರಗಳನ್ನು ನಿರ್ಮಿಸಿದರು. ಇವರ ಕಾಲದ ಸಾಮಂತರು ಕೂಡ ಪ್ರಭುಗಳನ್ನೇ ಅನುಸರಿಸಿದರು.

## ಅಡಿ ಟಿಪ್ಪಣಿಗಳು

1. ಕನ್ನಡ ವಿಷಯ ವಿಶ್ವಕೋಶ, ಸಂಪುಟ-1, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು-2005, ಪುಟ ಸಂಖ್ಯೆ-1144
2. ಅದೇ, ಪುಟ ಸಂಖ್ಯೆ-1144
3. ಅದೇ, ಪುಟ ಸಂಖ್ಯೆ-1144
4. ಅದೇ, ಪುಟ ಸಂಖ್ಯೆ-1144, 1145
5. ರಾಮಕೃಷ್ಣ ಆರ್ ತಿರುಮಕೂಡಲು ನರಸೀಪುರ ತಾಲೂಕು ದರ್ಶನ, ಐಬಿಎಚ್ ಪ್ರಕಾಶನ, ಪು.ಸಂ.8
6. ಅದೇ, ಪು.ಸಂ. 8
7. ರಾಜೇಂದ್ರಪ್ಪ. ಎಸ್. ತಿರುಮಕೂಡಲು .ನರಸೀಪುರ ತಾಲೂಕು ಗ್ಯಾಸೆಟಿಯರ್ ಪು.ಸಂ.4
8. ಅದೇ, ಪು.ಸಂ. 4
9. ಅದೇ, ಪು.ಸಂ. 2
10. ಬಿ. ಸಿ. ಸುರೇಶ. ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ-ಅಪ್ರಕಟಿತ ಪ್ರೌಢ ಪ್ರಂಬಂಧ, ಮೈಸೂರು ವಿಶ್ವವಿದ್ಯಾ ನಿಲಯ-2009, ಪುಟ-11.
11. ವೆಂಟಕರಮಣಯ್ಯ ಎನ್. - ಆರಿಜನ್ ಆಫ್ ದಿ ಸೌತ್ ಇಂಡಿಯನ್ ಟೆಂಪಲ್ಸ್, ಪು.ಸಂ-2
12. ರಾಮಚಂದ್ರರಾವ್ ಎಸ್. ಕೆ. - ಭಾರತದ ದೇವಾಲಯ ನೆಲೆ ಹಿನ್ನೆಲೆ, ಪು. ಸಂ.-16
13. ಅದೇ ಪುಟ-06
14. ಬಿ.ಸಿ. ಸುರೇಶ-ಪೂರ್ವೋಕ್ತ, ಪುಟ ಸಂಖ್ಯೆ-13
15. ಪರ್ಸಿಬ್ರೌನ್-ಇಂಡಿಯನ್ ಆರ್ಕಿಟೆಕ್ಚರ್, ಪು. ಸಂ.3-4
16. ಬಿ.ಸಿ. ಸುರೇಶ-ಪೂರ್ವೋಕ್ತ, ಪುಟ ಸಂಖ್ಯೆ-13
17. ಅದೇ-ಪು.ಸಂ-13

18. ಅದೇ–ಪು. ಸಂ–14

19. ರಾಮಚಂದ್ರರಾವ್ ಎಸ್.ಕೆ–ಪೂರ್ವೋಕ್ತ, ಪುಟ ಸಂಖ್ಯೆ–41

20. ಬಿ.ಸಿ. ಸುರೇಶ–ಪೂರ್ವೋಕ್ತ, ಪು. ಸಂ–14

21. ಶಿವರಾಮ ಕಾರಂತ, ಕೆ–ಚಾಳುಕ್ಯ ವಾಸ್ತುಶಿಲ್ಪ, ಪು. ಸಂ–12

22. ಹರಿದಾಸ ಎಂ.ಎಚ್. ಲಕ್ಕುಂಡಿ–ಕಲೆಯ ಒಲೆ, ಪು.ಸಂ–25

23. ಅದೇ–ಪು.ಸಂ– 25–26

# ಅಧ್ಯಾಯ –2

## ರಾಜಕೀಯ ಇತಿಹಾಸ

ಕನ್ನಡ ನಾಡಿನ ಇತಿಹಾಸದಲ್ಲಿ ಮೈಸೂರು ಜಿಲ್ಲೆಗೆ ವಿಶಿಷ್ಟ ಸ್ಥಾನವಿದ್ದು, ಜಿಲ್ಲೆಯ ಇತಿಹಾಸದಲ್ಲಿ ತಿರುಮಕೂಡಲು ನರಸೀಪುರ ತಾಲೂಕಿನ ಪಾತ್ರ ಹಿರಿದಾದದ್ದು. ಇತಿಹಾಸ ಪೂರ್ವ ಕಾಲಕ್ಕೆ ಸಂಬಂಧಿಸಿದಂತೆ ತಾಲೂಕಿನ ನರಸೀಪುರ, ಹೆಮ್ಮಿಗೆ, ಮುತ್ತಲವಾಡಿ ಹಾಗೂ ತಲಕಾಡುಗಳಲ್ಲಿ ಪತ್ತೆಯಾಗಿರುವ ಮಾನವ ವಸತಿ ನೆಲೆಗಳು ಮಹತ್ವದ್ದಾಗಿದ್ದು, ಉತ್ಖನನಗಳೂ ನಡೆದು ಮಹತ್ವದ ಅಂಶಗಳು ಬೆಳಕು ಕಂಡಿವೆ. ರಾಜ್ಯದಲ್ಲೇ ಅತ್ಯಂತ ಹೆಚ್ಚು ಶಾಸನಗಳನ್ನು ಹೊಂದಿರುವ ಕೆಲವೇ ತಾಲೂಕುಗಳಲ್ಲಿ ನರಸೀಪುರವೂ ಒಂದಾಗಿದೆ. ಇಲ್ಲಿಂದ ಈವರೆಗೆ ತಲಕಾಡಿನ ಗಂಗರು, ತಂಜಾವೂರಿನ ಚೋಳರು, ದ್ವಾರಸಮುದ್ರದ ಹೊಯ್ಸಳರು, ವಿಜಯನಗರ ಅರಸರು, ಮೈಸೂರಿನ ಅರಸರು, ಹೈದರಾಲಿ–ಟಿಪ್ಪು, ಸ್ಥಳೀಯ ಸಾಮಂತರಾದ ಮೂಗೂರಿನ ಪ್ರಭುಗಳು, ಕಳಲೆ ಹಾಗೂ ಉಮ್ಮತ್ತೂರಿನ ಪ್ರಭುಗಳು, ಕಮೀಷನರು, ದಿವಾನರುಗಳ ಆಡಳಿತಾವಧಿಗೆ ಸೇರಿದ ಸುಮಾರು 325 ಶಾಸನಗಳು ವರದಿಯಾಗಿವೆ.[1] ಇವುಗಳ ನೆರವಿನಿಂದ ಆಯಾ ಕಾಲದ ಸಾಂಸ್ಕೃತಿಕ ಚಿತ್ರಣವನ್ನು ಪಡೆಯಬಹುದಾಗಿದೆ. ರಾಜ್ಯದಲ್ಲಿ ಲಭ್ಯವಿರುವ ಶಾಸನಗಳಲ್ಲೇ ತಿರುಮಕೂಡಲು ನರಸೀಪುರದ ಕ್ರಿ.ಶ. 1749ರ ತಾಮ್ರಶಾಸನವು ಅತಿ ದೀರ್ಘ ಶಾಸನವಾಗಿದೆ.[2] ಒಟ್ಟು 1390 ಸಾಲುಗಳುಳ್ಳ ಈ ಶಾಸನವನ್ನು ತಲಾ 45 ಸಾಲುಗಳನ್ನುಳ್ಳ 16 ತಾಮ್ರದ ಹಲಗೆಗಳ ಮೇಲೆ ಕನ್ನಡ ಭಾಷೆ ಹಾಗೂ ನಾಗರಿ ಲಿಪಿಯಲ್ಲಿ ರಚಿಸಲಾಗಿದೆ.[3] ಈ ಶಾಸನದಲ್ಲಿ ಮೈಸೂರು ಹಾಗೂ ಕಳಲೆ ಪ್ರಭುಗಳ ವಿವರವಾದ ವಂಶಾವಳಿ ಲಭಿಸುತ್ತದೆ. ಸ್ವಾತಂತ್ರ್ಯ ಚಳುವಳಿಯಲ್ಲೂ ತಾಲೂಕಿನ ಪಾತ್ರವಿದ್ದು, ಸ್ವಾತಂತ್ರ್ಯಾ ನಂತರದಲ್ಲಿ ಪ್ರಗತಿಪಥದಲ್ಲಿ ಈ ತಾಲೂಕು ಮುನ್ನಡೆಯುವ ಮೂಲಕ ವಿವಿಧ ರಂಗಗಳಲ್ಲಿ ಬೆಳವಣಿಗೆಯನ್ನು ಸಾಧಿಸುತ್ತಿರುವುದು ಗಮನಾರ್ಹವಾಗಿದೆ.

### ಇತಿಹಾಸಪೂರ್ವ ಕಾಲದ ಶಿಲಾಯುಧ ಸಂಸ್ಕೃತಿ

ಶಿಲಾಯುಧಗಳನ್ನೇ ಬಳಸುತ್ತಿದ್ದ ಶಿಲಾಯುಗದ ಮಾನವರ ಪ್ರಾಚೀನತೆಯನ್ನು ತಾಲೂಕಿನಲ್ಲಿ ಆದಿ ಹಳೆಶಿಲಾಯುಗದಷ್ಟು ಹಿಂದಕ್ಕೆ ಗುರುತಿಸಬಹುದಾಗಿದೆ. ಈ ಸಂಸ್ಕೃತಿಗೆ

ಸಂಬಂಧಿಸಿದ ಏಕೈಕ ನೆಲೆಯನ್ನು ನೆರೆಯ ನಂಜನಗೂಡು ತಾಲೂಕಿನ 'ಹೆಬ್ಯ' ಗ್ರಾಮದ ಬಳಿ ಪುರಾತತ್ವಜ್ಞರು ಕ್ರಿ.ಶ. 1964ರಷ್ಟು ಹಿಂದೆಯೇ ಪತ್ತೆಹಚ್ಚಿದ್ದಾರೆ. ಈ ನೆಲೆಯಲ್ಲಿ ಆದಿ ಹಳೆಶಿಲಾಯುಗಕ್ಕೆ ಸೇರಿದ ಕೈಗೊಡಲಿಯೂ ಪತ್ತೆಯಾಗಿದೆ. ಆದರೆ ಕಳೆದ ಶತಮಾನದಲ್ಲೇ ಭಾರತೀಯ ಪ್ರಾಗಿತಿಹಾಸ ಕ್ಷೇತ್ರದ ಪಿತಾಮಹನೆಂದೇ ಪರಿಗಣಿಸಲ್ಪಟ್ಟಿರುವ ರಾಬರ್ಟ್ ಬ್ರೂಸ್‌ಫೂಟ್, ತಿರುಮಕೂಡಲು ನರಸೀಪುರದ ನೆಲೆಯನ್ನು ಕ್ರಿ.ಶ. 1916ರಲ್ಲಿ ಶೋಧಿಸಿ ವರದಿ ಮಾಡಿದ್ದು ಮಹತ್ವದ ಬೆಳವಣಿಗೆಯಾಗಿತ್ತು. ಇದು ನವಶಿಲಾಯುಗದಷ್ಟು ಪ್ರಾಚೀನ ಅವಶೇಷಗಳನ್ನು ಒಳಗೊಂಡಿದ್ದರೂ, ಅದರ ಉತ್ಖನನ ನಡೆದದ್ದು, ಕ್ರಿ.ಶ. 1959-65ರ ಅವಧಿಯಲ್ಲಿ. ಆದರೆ ಅದಕ್ಕೂ ಹಿಂದಿನ ಮಧ್ಯ ಹಳೆಶಿಲಾಯುಗ ಸಂಸ್ಕೃತಿಯೊಂದಿಗೆ ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಇತಿಹಾಸಪೂರ್ವ ಕಾಲದ ಮಾನವ ಚಟುವಟಿಕೆಯ ಕುರುಹುಗಳು ಲಭಿಸಲಾರಂಭಿಸುತ್ತವೆ. (ಸುಮಾರು ಕ್ರಿ.ಪೂ.40,000-10,000) ಈ ಸಂಸ್ಕೃತಿಗೆ ಸೇರಿದ ವಿವಿಧ ಶಿಲಾಯುಧಗಳು ಕಾವೇರಿ ಬಲದಂಡೆಯಲ್ಲಿರುವ ಹೆಮ್ಮಿಗೆಯಲ್ಲಿ ದೊರೆತಿವೆ. 1963-64ರಲ್ಲಿ ರಾಜ್ಯದಲ್ಲಿ ಜರುಗಿದ ಪುರಾತತ್ವ ಸರ್ವೇಕ್ಷಣಾ ಸಂದರ್ಭದಲ್ಲಿ ಬೆಳಕಿಗೆ ಬಂದ ಈ ನೆಲೆಯಲ್ಲಿ ಪುರಾತತ್ವಜ್ಞರಾದ ಎಂ.ಹನುಮಂತರಾವ್ ಹಾಗೂ ಡಾ.ಎಸ್.ನಾಗರಾಜು 1974ರಲ್ಲಿ ಉತ್ಖನನ ನಡೆಸಿ ವರದಿಯನ್ನೂ ಪ್ರಕಟಿಸಿದ್ದಾರೆ. ಈ ನೆಲೆಯಲ್ಲಿ ಮಧ್ಯಶಿಲಾಯುಗ ಸಂಸ್ಕೃತಿಯ ಅವಶೇಷಗಳೊಂದಿಗೆ ಸೂಕ್ಷ್ಮಶಿಲಾಯುಗ (ಕ್ರಿ.ಪೂ.1,000-2,500) ನೂತನ ಶಿಲಾಯುಗ (ಕ್ರಿ.ಪೂ.2,500-1000) ಶಿಲಾ-ತಾಮ್ರ ಯುಗ (ಕ್ರಿ.ಪೂ.1300-800) ಹಾಗೂ ಇತಿಹಾಸ ಆರಂಭ ಕಾಲಕ್ಕೆ ಸಂಬಂಧಿಸಿದ ವಿವಿಧ ಉಪಕರಣಗಳು, ವಿವಿಧ ಬಗೆಯ ಮಡಕೆ ತುಣುಕುಗಳು, ತಾಮ್ರದ ಉಪಕರಣಗಳೂ ಲಭಿಸಿವೆ. ಬನ್ನೂರಿನಲ್ಲಿ ಶಿಲಾ-ತಾಮ್ರಯುಗ ಸಂಸ್ಕೃತಿಯ ಅವಶೇಷಗಳು ಪತ್ತೆಯಾಗಿವೆ. ತಾಲೂಕಿನಲ್ಲಿ ಇತಿಹಾಸಪೂರ್ವ ಕಾಲದ ಮಾನವ ಚಟುವಟಿಕೆಯು ನೂತನ ಶಿಲಾಯುಗ ಸಂಸ್ಕೃತಿಯೊಂದಿಗೆ ದೊಡ್ಡ ಪ್ರಮಾಣದಲ್ಲಿ ಕಾರ್ಯರೂಪಕ್ಕೆ ಬಂದ ಅಂಶವು ತಾಲೂಕಿನ ತಿ.ನರಸೀಪುರ, ಬೆನಕನಹಳ್ಳಿ, ಹೆಮ್ಮಿಗೆ, ಮುತ್ತಲವಾಡಿ ಹಾಗೂ ತಲಕಾಡು ನಿವೇಶನಗಳಲ್ಲಿ ಲಭಿಸಿರುವ ಅವಶೇಷಗಳಿಂದ ಸ್ಪಷ್ಟವಾಗುತ್ತದೆ. ಹೆಮ್ಮಿಗೆ ಉತ್ಖನನದ ವರದಿಯೂ ಕ್ರಿ.ಶ. 1974ರಲ್ಲಿ ಪ್ರಕಟವಾಗಿದೆ. ಮುತ್ತಲವಾಡಿ ನೆಲೆಯ ಉತ್ಖನನವನ್ನೂ ಪುರಾತತ್ವಜ್ಞರು ಬಹಳ ಹಿಂದೆಯೇ ಪೂರ್ಣಗೊಳಿಸಿದ್ದು, ತಲಕಾಡು ನಿವೇಶನದ ಉತ್ಖನನವನ್ನು ಕ್ರಿ.ಶ. 1993-94ರಲ್ಲಿ ನಡೆಸಿ

ವರದಿಯನ್ನೂ ಪ್ರಕಟಿಸಲಾಗಿದೆ. ಈ ಎಲ್ಲಾ ನೆಲೆಗಳ ಉತ್ಖನನದಿಂದಾಗಿ, ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಮಹತ್ವದ ಅಂಶಗಳು ಬೆಳಕಿಗೆ ಬಂದಿವೆ.

ತಿರುಮಕೂಡಲು ನರಸೀಪುರದ ತಲಕಾಡು ಹಾಗೂ ಹೆಮ್ಮಿಗೆಯ ನೆಲೆಗಳಲ್ಲೂ ಈ ಸಂಸ್ಕೃತಿಗೆ ಸೇರಿದ ಜನರು ಬಳಸುತ್ತಿದ್ದ ಬಗೆಬಗೆಯ ಮಡಕೆಯ ತುಣುಕುಗಳು ಹೇರಳವಾಗಿ ದೊರೆತಿವೆ. ಮಿಗಿಲಾಗಿ ಕಪ್ಪುಬಣ್ಣದಿಂದ ಸಿಂಗರಿಸಿದ ಕೆಂಪುವರ್ಣದ ಮಡಕೆ, ಸಮನಾಂತರ ಅಲಗುಳ್ಳ ಶಿಲಾ ಅಲಗು, ಚರ್ಟ್‌ಯುಕ್ತ ತಿರುಳುಳ್ಳ, ಹೊಳಪುಳ್ಳ ಕೊಡಲಿ, ಬೂದುಬಣ್ಣದ ಒರಟು ಕುಂಭ ಹಾಗೂ ಪ್ರಾಣಿಗಳ ಮೂಳೆಗಳೂ ಇಲ್ಲಿ ಹೇರಳವಾಗಿ ದೊರೆತಿವೆ. ಈ ವಸತಿ ನೆಲೆಯ ಸಮಾಧಿಯೊಂದರಲ್ಲಿ ತಲೆದಿಂಬಿನಾಕಾರದ ಇಟ್ಟಿಗೆಯೂ ಲಭಿಸಿದೆ. ಎಮ್ಮೆಯೊಂದರ ಮೂಳೆಯ ಪಳಯುಳಿಕೆಯೂ ಪತ್ತೆಯಾಗಿದೆ. ಅಲ್ಲದೇ ಇಲ್ಲಿ ದೊರೆತಿರುವ ಮಾನವ ಅಸ್ಥಿಪಂಜರವೊಂದರಿಂದ ಶಿಲಾತಾಮ್ರಯುಗದ ಸಂದರ್ಭದಲ್ಲಿ ಮೆಡಿಟರೇನಿಯನ್ ಮೂಲದ ಮಾನವರು, ತೆಕ್ಕಲಕೋಟೆ ಹಾಗೂ ಪಿಕ್ಲಿಹಾಳಗಳಲ್ಲಿದ್ದಂತೆ ಇಲ್ಲೂ ವಾಸಿಸುತ್ತಿದ್ದ ಅಂಶ ತಿಳದು ಬರುತ್ತದೆ. ಕಾವೇರಿಯ ಎಡದಂಡೆಯ ಮೇಲಿರುವ ಮುತ್ತಲವಾಡಿಯಲ್ಲಿ, ಬರಿಗೈಯಲ್ಲಿ ತಯಾರಿಸಿದ ಕಂದುಬಣ್ಣದ ಮಡಕೆ, ಉಜ್ಜಿ ನಯಗೊಳಿಸಿದ ಕೊಡಲಿ, ಸುತ್ತಿಗೆ ಮುಂತಾದ ಶಿಲಾಯುಧಗಳು ದೊರೆತಿವೆ.[4] ಈ ನೆಲೆಯಲ್ಲೂ ತಲೆದಿಂಬು ಪತ್ತೆಯಾಗಿದೆ. ಈ ನೆಲೆಗಳಲ್ಲಿ ಲಭಿಸಿರುವ ಅವಶೇಷಗಳನ್ನು ಆಧರಿಸಿ, ರೇಡಿಯೋ ಕಾರ್ಬನ್ ಕಾಲನಿರ್ಣಯ ವಿಧಾನದ ಮೂಲಕ ನವಶಿಲಾಯುಗ ಮಾನವರ ಕಾಲವನ್ನು ಸುಮಾರು ಕ್ರಿ.ಪೂ.೧೯೦೦-೯೦೦ ಎಂದು ವಿದ್ವಾಂಸರು ಈಗಾಗಲೇ ನಿರ್ಧರಿಸಿದ್ದಾರೆ.

ಈ ಸಂಸ್ಕೃತಿಯ ಮುಂದಿನ ಹಂತವಾದ ಬೃಹತ್ ಶಿಲಾಯುಗ (ಕಬ್ಬಿಣಯುಗ) ಸಂಸ್ಕೃತಿಗೆ (ಕ್ರಿ.ಪೂ. ೧೨೦೦-೨೫೦) ಸೇರಿದ ಅವಶೇಷಗಳು ತಾಲೂಕಿನ ತಿರುಮಕೂಡಲು ನರಸೀಪುರ, ಬನ್ನೂರು, ಮುತ್ತಲವಾಡಿ ಹಾಗೂ ಕಾವೇರಿಪುರಗಳಲ್ಲಿ ಪತ್ತೆಯಾಗಿವೆ. ಅದರಲ್ಲೂ ತಿರುಮಕೂಡಲು ನರಸೀಪುರ, ಬನ್ನೂರು ಹಾಗೂ ಕಾವೇರಿಪುರ ನಿವೇಶನಗಳು ಈ ಸಂಸ್ಕೃತಿಗೆ ಸೇರಿದ ವಸತಿ ನೆಲೆಗಳಾಗಿವೆ. ಈ ನೆಲೆಗಳಲ್ಲಿ ಕಪ್ಪು, ಕೆಂಪು ವರ್ಣದ ಮಡಕೆಯ ಚೂರುಗಳು ದೊರೆತಿವೆ. ಬನ್ನೂರಿನಲ್ಲಿ ಪತ್ತೆಯಾಗಿರುವ ಮಡಕೆಯ ಚೂರುಗಳ ಮೇಲೆ ಗೀರುಗಳು ಕಂಡುಬಂದಿವೆ. ಮುತ್ತಲವಾಡಿ ನೆಲೆಯಲ್ಲಿ ಈ ಬಗೆಯ ಮಡಕೆಯ ಚೂರುಗಳ ಜೊತೆಗೆ ವಿವಿಧ ಶಿಲಾಯುಧಗಳೂ ದೊರೆತಿವೆ. ತಿರುಮಕೂಡಲು ನರಸೀಪುರದಲ್ಲಿ ಪತ್ತೆಯಾಗಿರುವ ಕಪ್ಪುವರ್ಣ

ಲೇಪಿತ ಕೆಂಪುವರ್ಣದ ಮಡಕೆಯ ಚೂರುಗಳು ಸಾವಲಗಾ ಮಡಕೆಯ ಮಾದರಿಯನ್ನು ಹೋಲುತ್ತವೆಂದು ಭಾವಿಸಲಾಗಿದ್ದು, ಇದರ ಕಾಲವನ್ನು ಕ್ರಿ.ಪೂ.1300–800 ಎಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಕ್ರಿ.ಪೂ.3ನೇ ಶತಮಾನದವರೆಗೂ ಬೃಹತ್ ಶಿಲಾಯುಗ ಸಂಸ್ಕೃತಿಯು ತಿರುಮಕೂಡಲು ನರಸೀಪುರ ಪರಿಸರದಲ್ಲಿ ಅಸ್ತಿತ್ವದಲ್ಲಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇದರ ಮುಂದಿನ ಹಂತವಾದ ಇತಿಹಾಸ ಆರಂಭ ಕಾಲಕ್ಕೆ (ಕ್ರಿ.ಶ.1–3ನೆಯ ಶತಮಾನ) ಸೇರಿದ ಅವಶೇಷಗಳು ತಾಲೂಕಿನ ತಿರುಮಕೂಡಲು ನರಸೀಪುರ, ಹೆಮ್ಮಿಗೆ, ಬನ್ನೂರು ಹಾಗೂ ತಲಕಾಡಿನ ನಿವೇಶನಗಳಲ್ಲಿ ಪತ್ತೆಯಾಗಿವೆ. ಈ ಸಾಂಸ್ಕೃತಿಕ ಹಂತಕ್ಕೆ ಸೇರಿದ ಸ್ತರಗಳಲ್ಲಿ ಕೆಂಪುವರ್ಣ ಲೇಪನದ ಮೇಲೆ ಬಿಳಿಯ ವರ್ಣದಲ್ಲಿ ಚಿತ್ರಿಸಲ್ಪಟ್ಟಿರುವ ಮಡಕೆಯ ತುಣುಕುಗಳು ಅಧಿಕ ಪ್ರಮಾಣದಲ್ಲಿ ದೊರೆತಿವೆ. ಅಲ್ಲದೆ ತಲಕಾಡಿನ ನಿವೇಶನದಲ್ಲಿ ಇವುಗಳ ಜೊತೆಗೆ ರೋಮನ್ ನಾಣ್ಯದ ಅಚ್ಚು ಲಭಿಸಿರುವುದು ಉಲ್ಲೇಖಾರ್ಹ. ಇದು ಆ ದಿನಗಳಲ್ಲಿ ಈ ಪ್ರದೇಶವೂ ರೋಮನ್ ಸಂಪರ್ಕವನ್ನು ಹೊಂದಿದ್ದ ಅಂಶವನ್ನು ಸೂಚಿಸುವಂತಿದೆ.

## ಪೌರಾಣಿಕ ಹಿನ್ನೆಲೆ

ತಿರುಮಕೂಡಲು ನರಸೀಪುರದ ಸಂಗಮ ಸ್ಥಳದಲ್ಲಿ ಹಿಂದೆ ಅಗಸ್ತ್ಯಮುನಿಗಳ ಆಶ್ರಮವಿತ್ತೆಂದು ಹೇಳಲಾಗುತ್ತದೆ. ನೆರೆಯ ಗರ್ಗೇಶ್ವರಿಯು ಗಾರ್ಗೇಯಮುನಿಗಳ ಆಶ್ರಮವಿದ್ದ ಸ್ಥಳವೆಂದು ಐತಿಹ್ಯವಿದೆ. ಸೋಮನಾಥಪುರವು ವಿಶಿಷ್ಠ ಮಹರ್ಷಿಗಳ ಆಶ್ರಮವಿದ್ದ ಸ್ಥಳ ಎಂದು 16ನೆಯ ಶತಮಾನದ ಶಾಸನವೊಂದು ದಾಖಲಿಸಿದೆ. ತಿರುಮಕೂಡಲಿನ ಅಗಸ್ತ್ಯೇಶ್ವರ ಲಿಂಗದ ಪ್ರತಿಷ್ಠಾನ ಸಂದರ್ಭದಲ್ಲಿ ಅಗಸ್ತ್ಯಮುನಿಗಳ ಸೂಚನೆಯಂತೆ ಉತ್ತರದಿಂದ ಶಿವಲಿಂಗವನ್ನು ತರಲು ಹೋದ ಹನುಮಂತನು ಬರುವಲ್ಲಿ ವಿಳಂಭವಾದಾಗ ಅಗಸ್ತ್ಯರು ಮರಳಿನ ಲಿಂಗವನ್ನೇ ಪ್ರತಿಷ್ಠಾಪಿಸಿ ಆರಾಧಿಸಿದರಂತೆ, ಇದರಿಂದ ಕೋಪಗೊಂಡ ಹನುಮಂತನು ಆ ಶಿವಲಿಂಗವನ್ನು ಸ್ಥಳಾಂತರಿಸಲು ಯತ್ನಿಸಿದಾಗ ಶಿವಲಿಂಗ ಮುಕ್ಕಾಯಿತು. ಆದರೆ ಹನುಮಂತ ತಂದಿದ್ದ ಶಿವಲಿಂಗವನ್ನು ಸಮೀಪದಲ್ಲೇ ಪ್ರತಿಷ್ಠಾಪಿಸಲಾಯಿತ್ತೆಂದು ಹೇಳಲಾಗುತ್ತದೆ. ತಲಕಾಡು ಪಟ್ಟಣಕ್ಕೆ ತಲ ಮತ್ತು ಕಾಡ ಎಂಬ ಸೋದರರಿಂದಾಗಿ ಆ ಹೆಸರು ಬಂದಿದೆ ಎಂದು ಹೇಳ ಲಾಗುತ್ತದೆ. ಇಲ್ಲಿ ಋಷಿಮುನಿಗಳು ಗಜರೂಪದಲ್ಲಿ ಶಾಪವಿಮೋಚನೆಗಾಗಿ ಸಂಚರಿಸು ತ್ತಿದ್ದುದರಿಂದ ಅದಕ್ಕೆ ಗಜಾರಣ್ಯ ಎಂಬ ಹೆಸರೂ ಇತ್ತೆಂದು ತಿಳಿದುಬರುತ್ತದೆ. ತಾಲೂಕು ಕೇಂದ್ರ

ನರಸೀಪುರದಲ್ಲಿರುವ ಗುಂಜಾನರಸಿಂಹಸ್ವಾಮಿಯಿಂದಾಗಿ ಆ ಪಟ್ಟಣವು ಕಾಶಿಗಿಂತ ಒಂದು ಗುಲಗಂಜಿಯಷ್ಟು ಹೆಚ್ಚು ಪಾವಿತ್ರ್ಯತೆಯನ್ನು ಹೊಂದಿರುವ ಪುಣ್ಯ ಕ್ಷೇತ್ರವೆಂದು ಪರಿಗಣಿಸ ಲಾಗುತ್ತದೆ.

**ಇತಿಹಾಸ ಕಾಲ**

ರಾಜ್ಯದಲ್ಲಿ ಇತಿಹಾಸ ಕಾಲದ ಆರಂಭವು ಮೌರ್ಯ ಚಕ್ರವರ್ತಿ ಅಶೋಕ ನೊಂದಿಗೆ ಅರಂಭವಾಗುತ್ತದೆ. ರಾಜ್ಯದ ಮಸ್ಕಿ, ಸನ್ನತಿ, ಕೊಪ್ಪಳ, ಪಾಲ್ಕಿಗುಂಡು, ಜಟಿಂಗ ರಾಮೇಶ್ವರ ಮುಂತಾದೆಡೆ ದೊರೆತಿರುವ ಅಶೋಕನ ಪ್ರಾಕೃತ ಶಾಸನಗಳೂ ಸೇರಿದಂತೆ ಮೌರ್ಯರ ಕಾಲದ ಅವಶೇಷಗಳು ಕರ್ನಾಟಕದಲ್ಲಿ ಲಭಿಸಿವೆ. ಅಲ್ಲದೆ ಮಹಿಷಾಮಂಡಲಕ್ಕೆ ಬೌದ್ಧಭಿಕ್ಕುಗಳು ಧರ್ಮಪ್ರಸಾರಕ್ಕೆ ಬಂದಿದ್ದರೆಂಬ ಅಭಿಪ್ರಾಯವೂ ಇದೆ. ಆದರೂ ತಲಕಾಡಿನ ಗಂಗರ ಆಡಳಿತದೊಂದಿಗೆ ತಾಲೂಕಿನ ಇತಿಹಾಸವು ಸುಮಾರು ನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಆರಂಭಗೊಳ್ಳುತ್ತದೆ.

**ತಲಕಾಡಿನ ಗಂಗರು**

ಕರ್ನಾಟಕವನ್ನು ಆಳ್ವಿಕೆ ಮಾಡಿದ ಅರಸು ಮನೆತನಗಳಲ್ಲಿ ಗಂಗರಿಗೆ ವಿಶಿಷ್ಟ ಸ್ಥಾನವಿದೆ. ಗಂಗರ ಆಡಳಿತದ ಪ್ರದೇಶ ಹಾಗೂ ಅದಕ್ಕೆ ಹೊಂದಿಕೊಂಡಂತೆ ಕರ್ನಾಟಕದ ದಕ್ಷಿಣ ಭಾಗ, ನೆರೆಯ ತಮಿಳುನಾಡು ರಾಜ್ಯದ ಪಶ್ಚಿಮ ಭಾಗಗಳ ಮೇಲೆ ತಮ್ಮ ಪ್ರಭುತ್ವವನ್ನು ಸುಮಾರು ಏಳು ಶತಮಾನಗಳ ಕಾಲ ಸ್ಥಾಪಿಸಿದ್ದ ಇವರು ಆರಂಭದಲ್ಲಿ ಕುವಲಾಲ (ಕೋಲಾರ)ದಿಂದ ರಾಜ್ಯಭಾರ ನಡೆಸುತ್ತಿದ್ದರೆಂದು ಹೇಳಲಾಗುತ್ತದೆ. ಮುಂದೆ ಇವರು ರಾಜಧಾನಿಯನ್ನು ತಲಕಾಡಿಗೆ ಸ್ಥಳಾಂತರಿಸಿಕೊಂಡರು. ಈ ತಲಕಾಡು ಎಂಬುದು ತಲ+ಕಾಡು ಎಂಬುದರಿಂದ ಬಂದಿತ್ತೆಂಬುದು ಸ್ಥಳಪುರಾಣಗಳಿಂದ ತಿಳಿದುಬರುತ್ತದೆ. ಆದರೆ ಶಾಸನಗಳಲ್ಲಿ ತಲ್ಕೈಕಾಡು, ತಳಕಾಡು ಮುಂತಾದ ಹೆಸರುಗಳನ್ನೊಳಗೊಂಡಿದೆ. ತಲ್ಕೈ ಎಂಬ ಮಂಗಳ ಸಮೂಹದಿಂದ ಕೂಡಿದ್ದ ಕಾಡು ಎಂಬ ಅರ್ಥವನ್ನು ತಿಳಸಿದ್ದಾರೆ. ಅದರೊಂದಿಗೆ ಈ ತಾಲೂಕು ಪ್ರದೇಶವೂ ಗಂಗ ಸಾಮ್ರಾಜ್ಯದ ಗಂಗವಾಡಿ ೯೬,೦೦೦ದ ತಿರುಳುನಾಡಾಗಿ ಪರಿಣಮಿಸಿತು. 'ಮದಗಜ' ಇವರ ರಾಜ ಲಾಂಛನವಾಗಿತ್ತು.

## ತಲಕಾಡಿನ ಆಡಳಿತ

ತಲಕಾಡು ಪಟ್ಟಣದ ಆಡಳಿತವು ಒಬ್ಬ 'ಸ್ಥಾನಪತಿ'ಯ ಹತೋಟಿಯಲ್ಲಿದ್ದಿತು. ಕ್ರಿ.ಶ. 933 ರಿಂದ 1334ರವರೆಗೆ ತಲಕಾಡಿನ ಪೌರ ವ್ಯವಸ್ಥೆಯಲ್ಲಿ ನಾಲ್ಕು "ಪಟ್ಟಣಸ್ವಾಮಿ"ಗಳು 25 ಸದಸ್ಯರನ್ನೊಳಗೊಂಡ ಮಂಡಲಿ, ಪ್ರಜೆ, ಗೌಡರು ಸಭೆಗೆ ಸೇರಿದ "ಮಹಾನಗರ" ಅಥವಾ "ಪುರಸಭೆ" ಏಳು ಪುರಗಳು ಮತ್ತು ಪಂಚ ಮಠವನ್ನೊಳಗೊಂಡ ತಲಕಾಡು ಪಟ್ಟಣದ ಅಧಿಕಾರಿ ಒಬ್ಬ ಸ್ಥಾನಪತಿ ಸೇರಿದ್ದರು.[5]

ಕ್ರಿ.ಶ. 1306ರಲ್ಲಿ ಕುಂದಾಪುರದಲ್ಲಿ ಇಬ್ಬರು ಧಣಿಗಳು 'ನಾಯಕರು' ಇತರರೊಡಗೂಡಿ ಅದೇ ಗ್ರಾಮದ ಒಂದು ನಿವೇಶನವನ್ನು ಕೊಂಡು ಅದನ್ನು ದಾನ ಮಾಡಿದರು.[6]

1. 'ನಗರ' ಅಥವಾ ಆ ಸ್ಥಳದ ವಿವಿಧ ಶ್ರೇಣಿಗಳು
2. ಹಲವು ಸಂದರ್ಭಗಳಲ್ಲಿ 'ಪ್ರಜೆಗಳು'
3. 'ಪುರಗಳು' ಮತ್ತು 'ಬ್ರಹ್ಮಪುರಿಗಳು'
4. 'ಮಠಗಳು'
5. 'ಕಾರ್ಯನಿರ್ವಾಹಕ ಮಂಡಳಿ'
6. 'ಪೌರಸಭಾಧಿಕಾರಿಗಳು'

## ಗ್ರಾಮಾಡಳಿತ

ಹಳ್ಳಿಯು ಒಂದು ಚಿಕ್ಕ ಆಡಳಿತ ಘಟಕವಾಗಿತ್ತು. ಹಳ್ಳಿಯ ಆಡಳಿತದಲ್ಲಿ ಗಾವುಂಡನ ಪಾತ್ರ ಪ್ರಮುಖವಾಗಿತ್ತು. ಇವನನ್ನು 'ಹೆಗ್ಗಡೆ' ಎಂದು ಸಹ ಕರೆಯಲಾಗುತ್ತಿತ್ತು. ಇವನು ಸರ್ಕಾರ ಹಾಗೂ ಜನರನ್ನು ಪ್ರತಿನಿಧಿಸುತ್ತಿದ್ದನು. ಇವನು ರಾಜನಿಂದ ಅಥವಾ ಗ್ರಾಮಸಭೆಯಿಂದ ನೇಮಕಗೊಳ್ಳುತ್ತಿದ್ದನು. ಅವನಿಗೆ ಸಂಭಾವನೆಯನ್ನು ಗೇಣಿರಹಿತ ಇನಾಮ್ ಭೂಮಿ ಎಂಬ ರೂಪದಲ್ಲಿ ಕೊಡಲಾಗುತ್ತಿತ್ತು.[7] ಇವನು ಹಳ್ಳಿಯನ್ನು ಭೂಮಿಯನ್ನು ಕೊಳ್ಳುವ ಮತ್ತು ಮಾರುವ ವ್ಯವಹಾರದಲ್ಲಿ ಶುಲ್ಕವನ್ನು ಪಡೆಯುತ್ತಿದ್ದನು.[8] ಇವನು ಆ ಗ್ರಾಮದ

ನ್ಯಾಯಾಧೀಶನಾಗಿ ಸಣ್ಣ ಅಪರಾಧಗಳ ಕೇಸನ್ನು ತೀರ್ಮನಿಸುವ ಅಧಿಕಾರ ಹೊಂದಿದ್ದನು. ಸಾರ್ವಜನಿಕ ಕೆಲಸ ಕಾರ್ಯ ಸೇವೆಗಳನ್ನು ಮಾಡುವುದರಲ್ಲಿ ಪ್ರಮುಖನಾಗಿದ್ದನು. ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸುವುದು, ನೀರಿನ ತೊಂಬೆಗಳನ್ನು ನಿರ್ಮಿಸುವುದು,[9] ದೇವಸ್ಥಾನಗಳನ್ನು ನಿರ್ಮಿಸುವುದು ಇವೇ ಮುಂತಾದ ಕಾರ್ಯಗಳನ್ನು ಗಾವುಂಡನು ನಿರ್ವಹಿಸುತ್ತಿದ್ದನು.[10]

## ಗ್ರಾಮಸಭೆ

## ಗ್ರಾಮಸಭೆಯ ರಚನೆ

ಗ್ರಾಮಸಭೆಯು ಅದರ ಸದಸ್ಯರ ಸಂಖ್ಯೆಯಿಂದ ರಚಿಸಲ್ಪಡುತ್ತಿತ್ತು. ಈ ಅಭ್ಯಾಸವು ಕರ್ನಾಟಕದಲ್ಲಿ ಹೊಯ್ಸಳರ ಹಿಂದಿನ ಕಾಲದಲ್ಲಿ ಆಚರಣೆಯಲ್ಲಿತ್ತು. ಉದಾಹರಣೆಗೆ ಬಾಲ್ಗುಳಿಯ ಐವತ್ತು ಎಂದು ಕಂಡು ಬರುವುದು. ಇದು ಬಾಲ್ಗುಳಿಯ ಐವತ್ತು ಮಹಾಜನರು ಎಂದು ಅರ್ಥವಾಗುತ್ತದೆ.[11] ಕ್ರಿ.ಶ.1261ರಲ್ಲಿ ಕುಡಿಕುರದ 300, ರಾಜದಾನಿಯಾದ ಬಾರಹ ಕನ್ಯಾಪುರ ದಲ್ಲಿ ಸೇರಿ ಸುವರ್ಣದಾನ ಮುಂತಾದವುಗಳನ್ನು ಮಾಡಿದರು.[12] ಈ ಸಂಖ್ಯೆಯು ಗ್ರಾಮಸಭೆ ಯನ್ನು ಸೂಚಿಸುವುದಲ್ಲದೆ ಆ ಗ್ರಾಮದಲ್ಲಿ ನೆಲೆಸಿದ್ದ ಸಂಸಾರಗಳ ಸಂಖ್ಯೆಯನ್ನು ತಿಳಿಸುತ್ತದೆ. ಸಿರುವುರ ಗ್ರಾಮದಲ್ಲಿ ಕ್ರಿ.ಶ. 1005ರಲ್ಲಿ ಐವತ್ತೊಕ್ಕಲು ಕ್ರಿ.ಶ. 1138ರಲ್ಲು ಇದ್ದವು.[13] ಗ್ರಾಮಗಳು ಸಹ ತಮ್ಮದೇ ಆದ ಸಭೆಗಳನ್ನು ಹೊಂದಿದ್ದವು. ನಗರಗಳು ಮತ್ತು ನಾಡುಗಳು ಎಂಬ ಎರಡು ಪ್ರಕಾರಗಳಲ್ಲಿ ಇದ್ದಂತೆ ಗ್ರಾಮಗಳು ಸಹ ಸಭೆಗಳನ್ನು ಹೊಂದಿದ್ದವು. ಇವುಗಳನ್ನು ಒಕ್ಕಲ, ಪ್ರಜೆ 18 ಸಮಯಸ್ ಹಾಗೂ ಚಾಗವೆ ಎಂಬುದಾಗಿ ಕರೆಯಲ್ಪಡುತ್ತಿತ್ತು.

ಕ್ರಿ.ಶ. 1278ರ ಶಾಸನದ ಪ್ರಕಾರ ಗಾಡಿಹಳ್ಳಿ (ಕೋಲಾರ) ಜಿಲ್ಲೆಯ ಸಮಸ್ತ ಪ್ರಜೆಗೌಡರನ್ನು ಬಲಾರ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ. 1267ರಲ್ಲಿ ಹದಿನೆಂಟು ಸಮಯ ವ್ಯಾಪಾರಸ್ಥರು ಒಳಗೂಡಿ ಗವರೇಶ್ವರ ದೇವಾಸ್ಥಾನ ಕಟ್ಟಲು ಭೂಮಿಯನ್ನು ಅನುದಾನವಾಗಿ ಬಿಡುಗಡೆ ಮಾಡಿದರು.[14] ಕ್ರಿ.ಶ., 1280ರ ಹರಿಹರ ಎಂಬ ಸ್ಥಳದ ಶಾಸನದ ಪ್ರಕಾರವು ಒಡೆನೆಟ್ಟು ಸಮಯವು ಅಖಂಡ ಜನಸಂಖ್ಯೆಕ್ಕಾಗಿ ಎಂದು ಹೆಸರಿಸಿದೆ.[15] ಚೌಗವೆಯು ಸಂಪೂರ್ಣ ಗ್ರಾಮದಿಂದ ಬೇರೆಯಾಗಿತ್ತು. ದೀಕ್ಷಿತ್‌ರವರ ಪ್ರಕಾರ ನಾಲ್ಕು ಗ್ರಾಮಗಳು ಸೇರಿದ ಮೇಲೆ ಸಭೆಯಾಗಿ ತನ್ನದೇ ಗ್ರಾಮ ಸಭೆಯು ವ್ಯವಹರಿಸುತ್ತಿತ್ತು.

ಕ್ರಿ.ಶ.1255ರಲ್ಲಿ ಭೂ ಕೊಡುಗೆಯನ್ನು ಮುಖ್ಯಸ್ಥನ ಮತ್ತು ಎರಡು ಮುತ್ತಣ್ಣ ಹೊಸವರು ಮತ್ತು ಹಳ್ಳಿಗಳ ಪ್ರತಿನಿಧಿ ಚೌಗವೆ ಇನ್ನು ಮುಂತಾದವರ ಸಮಕ್ಷಮದಲ್ಲಿ ಕೊಡುಗೆಯನ್ನು ಕೊಡಲಾಗುತ್ತಿತ್ತು. ಇಲ್ಲಿ ನಾಲ್ಕು ಗ್ರಾಮಸಭೆಗಳಿಗೆ ಕೊಡ ಮಾಡಲ್ಪಟ್ಟ ಭೂಮಿ ಅನುದಾನದ ಬಿಡುಗಡೆಯ ಬಗ್ಗೆ ನಿದರ್ಶನಗಳು ದೊರಕಿವೆ. ಆ ನಾಲ್ಕು ಗ್ರಾಮಗಳೆಂದರೆ ಪುರುಷೋತ್ತಮ, ದೇವನಿಂದ ಪದ್ಮನಾಭಪುರದ ಮಹಾಜನತೆಗೆ, ಮದ್ದೂರು ಮಹಾಜನತೆಗೆ, ದೊಡ್ಡ ಅರಸಿನಕೆರೆ, ಮಂಡ್ಯ ಮತ್ತು ಮಲ್ಲಿಕಾರ್ಜುನಪುರ[16] ಈ ಗ್ರಾಮ ಸಭೆಗಳು ಗ್ರಾಮಾಡಳಿತವನ್ನು ನೋಡಿಕೊಳ್ಳುತ್ತಿದ್ದಲ್ಲದೆ ದೇವಾಲಯಗಳು, ಹುಲ್ಲುಗಾವಲುಗಳು, ಕೆರೆ, ರಸ್ತೆಗಳು ಮುಂತಾದವುಗಳ ಮೇಲ್ವಿಚಾರಣೆ ಮತ್ತು ದುರಸ್ತಿ ಕಾರ್ಯಗಳನ್ನು ಗ್ರಾಮಸಭೆಗಳು ನಿರ್ವಹಿಸುತ್ತಿದ್ದವು.[17]

## ನಗರಾಡಳಿತ

ಸಾಮಾನ್ಯವಾಗಿ ನಾಡು, ನಗರ ಮತ್ತು ಹಳ್ಳಿಗಳನ್ನು ಒಳಗೊಂಡಿತ್ತು. ಪ್ರಾರಂಭದಲ್ಲಿ ಹಳ್ಳಿಗಳನ್ನು ನಗರಗಳಾಗಿ ಪರಿವರ್ತಿಸುವುದರಲ್ಲಿ ಹಳ್ಳಿಯ ನಾಯಕರ ಪಾತ್ರ ಬಹು ಮುಖ್ಯವಾಗಿತ್ತು. ಹಳ್ಳಿಯ ದೊಡ್ಡ ವ್ಯಕ್ತಿ (ಪ್ರಭು) ಮತ್ತು ಮೊಗುರು ಇಲ್ಲಿ ವಾಸಿಸುವವರು. ಪರಸ್ಪರ ಒಪ್ಪಿಕೊಂಡು ಹಳ್ಳಿಯನ್ನು ನಗರವನ್ನಾಗಿ ಪರಿವರ್ತಿಸುತ್ತಿದ್ದರು. ಯಾರು ಮನೆಗಳನ್ನು ಹಳ್ಳಿಯನ್ನು ನಗರ ಪ್ರದೇಶದಲ್ಲಿ ಕಟ್ಟುತ್ತಾರೋ ಅವರಿಗೆ ಪ್ರಾರಂಭದ ಮೊದಲ ವರ್ಷದಿಂದಲೇ ತೆರಿಗೆ ವಿನಾಯಿತಿ ಇರುತ್ತಿತು. ಆದರೆ ಪರಸ್ಥಳದವರು ಮನೆಯನ್ನು ನಗರ ಪ್ರದೇಶದಲ್ಲಿ ಕಟ್ಟಿದರೆ ತೆರಿಗೆ ವಿನಾಯಿತಿ ಎರಡನೇ ವರ್ಷದಿಂದ ಲಭಿಸುತ್ತಿತ್ತು.[18]

ಕೆಲವು ವೇಳೆ ಗ್ರಾಮದ ಒಬ್ಬ ವ್ಯಕ್ತಿ ಗ್ರಾಮಗಳನ್ನು ನಗರಗಳನ್ನಾಗಿ ಮಾರ್ಪಡಿಸುವ ಕೆಲಸವನ್ನು ಕೈಗೊಂಡರೆ ಆ ಊರಿನ ಗ್ರಾಮದ ವ್ಯಕ್ತಿಗಳು ಅವನಿಗೆ ಬೆಂಬಲವನ್ನು ಕೊಡುತ್ತಿದ್ದರು. ಈ ಕೆಲಸಕ್ಕೆ ಆ ವ್ಯಕ್ತಿಗೆ ಸಂಭಾವನೆಯನ್ನು ಕೊಡಲಾಗುತ್ತಿತ್ತು. ಕ್ರಿ.ಶ. 1251ರಲ್ಲಿ ಮಲ್ಲಶೆಟ್ಟಿ ಎಂಬ ಬಳೆಗಾರನ ಪ್ರಯತ್ನದಿಂದ ಗ್ರಾಮ ನಗರವಾಗಿ ಪರಿವರ್ತನೆಯಾಯಿತು. ಈ ಕೆಲಸಕ್ಕಾಗಿ ಮಲ್ಲಶೆಟ್ಟಿಗೆ ಗ್ರಾಮದ ಪ್ರಮುಖ ವ್ಯಕ್ತಿಯಿಂದ ಮತ್ತು ಆ ಗ್ರಾಮದ ಜನತೆಯಿಂದ ವಿಶೇಷ ದಾನವನ್ನು ಕೊಡಲಾಯಿತು. ಇದೇ ಅಲ್ಲದೆ ಅವನಿಗೆ ಒಂದು ನಿರ್ಧಿಷ್ಟ ತೆರಿಗೆಯನ್ನು ಕೊಡಲು ಎಲ್ಲರು ಒಪ್ಪಿದರು.[19]

ಪಟ್ಟಣದಸ್ವಾಮಿ ನಗರವನ್ನು ಸ್ಥಾಪಿಸುತ್ತಿದ್ದನು ಹಾಗೂ ಪ್ರಾಧಿಕಾರದ ಮುಖ್ಯ ಕಾರ್ಯಕರ್ತನಾಗಿದ್ದನು. ಅವನು ಸಾಮಾನ್ಯವಾಗಿ ದೊಡ್ಡ ವ್ಯಾಪಾರಗಾರನಾಗಿದ್ದನು. ಅವನ ಕಾರ್ಯಗಳು ಊರಿನ ಗೌಡನ ಕಾರ್ಯಗಳಿಗೆ ಸಾಮ್ಯವಿರುತ್ತಿತ್ತು. ಅವರು ಸರ್ಕಾರದ ಹಾಗೂ ಗ್ರಾಮದ ಜನರ ವಿಶ್ವಾಸಗಳಿಸಿ ಕೊಂಡಿದ್ದರು. ಅವರು ಊರಿಗೆ ಬೇಕಾಗುವ ಅನುದಾನವನ್ನು ಕೊಡುವ ಕರ್ತವ್ಯವನ್ನು ಸಹ ಹೊಂದಿದ್ದರು. ಪಟ್ಟಣಸ್ವಾಮಿ ಸಂಕರರು ಹೊರಗಿನ ಊರಿನಿಂದ ಬರುವ ಬ್ರಾಹ್ಮಣರಿಗೆ ದಾನ ದತ್ತಿಯನ್ನು ಕೊಡುವ ಕಾಯಕವನ್ನು ಸಹ ಮಾಡುತ್ತಿದ್ದರು. ಅವರು ಗ್ರಾಮದ ಜನರ ಕುಂದು ಕೊರತೆಗಳಿಗೆ ಸ್ಪಂದಿಸುತ್ತಿದ್ದರು, ಮತ್ತು ಜನರ ಸಮಸ್ಯೆಗಳನ್ನು ನಿವಾರಿಸುವ ಹಾಗೂ ಆಡಳಿತ ಮಾಡುವ ಅಧಿಕಾರವನ್ನು ಸಹ ಹೊಂದಿದ್ದರು.

ನಗರದಲ್ಲಿ ಪಟ್ಟಣ ಸ್ವಾಮಿಯಲ್ಲದೆ ಇತರ ಅಧಿಕಾರಿಗಳಿರುತ್ತಿದ್ದರು. ಅವರುಗಳೆಂದರೆ ಹೆಗ್ಗಡೆಗಳು ಹಾಗೂ ಸ್ಥಾನಪತಿಗಳು. ಕ್ರಿ.ಶ.1277ರಲ್ಲಿ ಬೇಲೂರಿನಲ್ಲಿ ಸರ್ಕಾರಿ ನೌಕರರನ್ನು 'ಅಧಿಕಾರಿ' ಎಂದು ಕರೆಯಲಾಗುತ್ತಿತ್ತು.[20] ಆದರೆ ಇವರನ್ನು ತಲಕಾಡಿನಲ್ಲಿ ಸ್ಥಾನಪತಿಗಳೆಂದು ಕರೆಯಲಾಗುತ್ತಿತ್ತು.[21]

ನಗರ ಸಭೆಗೆ ಒಳಪಡಿಸುವ ಹಳ್ಳಿ, ಪಟ್ಟಣಗಳನ್ನು 'ನಗರ' ಎಂದು ಕರೆಯಲಾಗುತ್ತಿತ್ತು. ಕಾಲಕ್ರಮೇಣ ಗ್ರಾಮಗಳು ಪಟ್ಟಣ ಆದಂತೆ ಹಳೆಯ ಶಿಕ್ಷಣ ಸಂಸ್ಥೆಗಳು ಹೊಸ ಸಂಘಟನೆ ಗಳೊಂದಿಗೆ ರೂಪುಗೊಂಡವು. ಹೀಗೆ ತಲಕಾಡಿನ ಹಿಂದಿನ ಪ್ರಜೆಗೌಡರು ಅಥವಾ ಮುಖ್ಯ ವ್ಯಕ್ತಿ ಹಾಗೂ ವಾಸಿಸುವ ಜನರು ಹೊಸ ಮೇಯರುಗಳು ಮತ್ತು ನಗರ ಸಭೆಗಳಿಂದ ಆಳಲ್ಪಡುತ್ತಿದ್ದರು.[22] ನಗರ ಸಭೆಯು ದೊಡ್ಡ ವ್ಯಾಪಾರಸ್ಥರಿಂದ ಬ್ರಹ್ಮಪುರಿಯ ಮಹಾಜನರಿಂದ ಹಾಗೂ ಪುರಾದ ಪ್ರತಿನಿಧಿಗಳಿಂದ ರಚಿಸಲ್ಪಟ್ಟಿತು.[23]

ನಗರ ವಾರ್ಡ್ ಎಂಬುದಾಗಿ ವಿಭಾಗವಾಗಿತ್ತು. 'ಪ್ರಭು' ಎಂಬುವನು ವಾರ್ಡಿನ ಮುಖ್ಯಸ್ಥನಾಗಿದ್ದನು. ಕೆಲವು ವೇಳೆ ನಡೆಯುವ ಸಭೆಗೆ ಜನರೆಲ್ಲರು ಹಾಜರಾಗಬೇಕಾಗಿತ್ತು. ಕ್ರಿ.ಶ. 1266ರ ಮಾಹಿತಿಯ ಪ್ರಕಾರ ಎಲ್ಲ ವರ್ಗದವರು ಅಂದರೆ ಗಾವುಂಡರು, ವ್ಯಾಪಾರಸ್ಥರು, ಸ್ಥಾನಿಕರು 'ಯಳಂದೂರು'ನವರಾಗಿದ್ದರು. ಇವರಲ್ಲಿ ದಾನದತ್ತಿಗಳನ್ನು ಕೊಡುವ ವಾಡಿಕೆ ಇತ್ತು. ಹುಲಿಯೊಂದಿಗೆ ಧೈರ್ಯದಿಂದ ಹೋರಾಡಿದ್ದಕ್ಕಾಗಿ ಒಬ್ಬ ವ್ಯಕ್ತಿಗೆ ಇಂತಹ ಕೊಡುಗೆ ಯನ್ನು ನೀಡಲಾಗಿತ್ತು.[24]

ತಲಕಾಡಿನ ಗಂಗರು ತಿ.ನರಸೀಪುರ ಸಾಂಸ್ಕೃತಿಕ ವಲಯಕ್ಕೆ ನೀಡಿರುವ ಕೊಡುಗೆಗಳ ಬಗ್ಗೆ ಇಲ್ಲಿ ಸಿಕ್ಕಿರುವ ಗಂಗರ 15 ಶಾಸನಗಳು ಹಾಗೂ ವಿವಿಧ ಸ್ಮಾರಕಗಳು ಮಾಹಿತಿಗಳನ್ನು ನೀಡುತ್ತವೆ.[25] ಕ್ರಿ.ಶ. 935ರ ಶಾಸನದಿಂದ ಆಗ ತಲಕಾಡು ಎಂದು ಕರೆಯಲಾಗುತ್ತಿದ್ದ ತಲಕಾಡಿನ ಆಡಳಿತವನ್ನು ಮಹಾನಗರವೆಂಬ ಒಂದು ಸಂಘವು ನಡೆಸುತ್ತಿತ್ತೆಂದು ತಿಳಿದುಬರುತ್ತದೆ.[26] ಗಂಗರ ಮೂಲಕ್ಕೆ ಸಂಬಂಧಿಸಿದಂತೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಸುಮಾರು ಕ್ರಿ.ಶ. 10–11ನೆಯ ಶತಮಾನಕ್ಕೆ ಸೇರಿದ ಶಾಸನಗಳು, ಹೊರಗಿನಿಂದ ಬಂದ ಗಂಗ ಸೋದರರಿಗೆ ಜೈನಯತಿ ಸಿಂಹನಂದಿಯ ಆಶೀರ್ವಾದದಿಂದಾಗಿ ರಾಜ್ಯ ಸ್ಥಾಪಿಸಲು ಸಾಧ್ಯವಾಯಿತೆಂದು ದಾಖಲಿಸುತ್ತವೆ. ಆದರೆ ಅವು ಸಮಕಾಲೀನ ದಾಖಲೆಗಳಲ್ಲವೆಂಬ ಕಾರಣದಿಂದ ಈ ಅಭಿಪ್ರಾಯವನ್ನು ಎಸ್. ಶ್ರೀಕಂಠಶಾಸ್ತ್ರಿ, ಬಿ. ಷೇಕ್ಅಲಿ ಮುಂತಾದ ವಿದ್ವಾಂಸರು ಅಲ್ಲೆಗಳೆದಿದ್ದಾರೆ. ಇತ್ತೀಚಿನ ಅಧ್ಯಯನಗಳು ಅವರು ಸ್ಥಳೀಯರಿದ್ದು, ಗಂಗಡಿಕಾರ ಒಕ್ಕಲಿಗ ಜನಾಂಗಕ್ಕೆ ಸೇರಿದವರೆಂಬ ಆಭಿಪ್ರಾಯವನ್ನು ಮತ್ತಷ್ಟು ಗಟ್ಟಿಗೊಳಿಸಿವೆ.

ದಡಿಗ ಹಾಗೂ ಮಾಧವ ಸೋದರರಿಂದ ಸ್ಥಾಪಿಸಲ್ಪಟ್ಟ ಗಂಗರಾಜ್ಯವನ್ನು ಸುಮಾರು ಎಂಟನೆಯ ಶತಮಾನದ ಆರಂಭಿಕ ದಶಕಗಳವರೆಗೆ ಗಂಗ ಮನೆತನಕ್ಕೆ ಸೇರಿದ ಮಾಧವ, ಒಂದನೆಯ ಹರಿವರ್ಮ (ಇವನ ಕಾಲದಲ್ಲಿ ತಲಕಾಡು ಅವರ ಎರಡನೆಯ ರಾಜಧಾನಿಯಾಗಿತ್ತೆಂಬ ಅಭಿಪ್ರಾಯವಿದೆ.), ಇಮ್ಮಡಿ ಮಾಧವ, ವಿಷ್ಣುಗೋಪ, ಮುಮ್ಮಡಿ ಮಾಧವ, ಅವನೀತ, ದುರ್ವಿನೀತ, (ತಲಕಾಡೇ ಇವರ ರಾಜಧಾನಿಯಾಯಿತು) ಮುಷ್ಕರ, ಪೊಲವೀರ, ಶ್ರೀ ವಿಕ್ರಮ, ಭೂ ವಿಕ್ರಮ ಹಾಗೂ ಒಂದನೆಯ ಶಿವಮಾರ ಸುಮಾರು 46 ವರ್ಷಗಳ ಕಾಲ ಆಳ್ವಿಕೆ ನಡೆಸಿದರು.[27] ಈ ಅರಸರ ಆಳ್ವಿಕೆಯನ್ನು ನಾಡಿನ ವಿವಿಧ ಭಾಗದಲ್ಲಿ ದೊರೆತಿರುವ ಶಾಸನಗಳು ಖಚಿತಪಡಿಸುತ್ತವೆ. ಆದರೆ ಈ ಅರಸರ ಆಡಳಿತಕ್ಕೆ ಸಂಬಂಧಿಸಿದ ಶಾಸನಗಳು ತಾಲೂಕಿನಲ್ಲಿ ಲಭಿಸಿಲ್ಲ. ಬದಲಾಗಿ ಶ್ರೀಪುರುಷನ ಗಂಗ ವಂಶದ ಅತ್ಯುತ್ತಮ ಅರಸ. ಈತನ ಆಡಳಿತಕ್ಕೆ ಸಂಬಂಧಿಸಿದಂತೆ ದೊರೆತಿರುವ ಶಾಸನಗಳೇ ತಾಲೂಕಿನಲ್ಲಿ ದೊರೆತಿರುವ ಪ್ರಾಚೀನ ಗಂಗ ಶಾಸನಗಳಾಗಿವೆ. ಇವುಗಳಲ್ಲಿ ತಲಕಾಡಿನ ಕ್ರಿ.ಶ. 726ರ ಶಾಸನ, ಶ್ರೀಪುರುಷನ ಆಳ್ವಿಕೆಯ ಮೊದಲ ವರ್ಷದಲ್ಲಿ ನೀಡಲ್ಪಟ್ಟಿದ್ದು, ಕಾರ್ತಿಕ ಹುಣ್ಣಿಮೆಯೆಂದು ತಲೈಕಾಡ ಇಪ್ಪತ್ತೈದರವರೆಗೆ ಸಿಂಧರಸ, ದೇಚಸತ್ತಿಯರಸ ಹಾಗೂ ಇತರರ ಕೋರಿಕೆಯಂತೆ ಪರಮಗೋಳನ ಮಗನಾದ ಅರಕೇಸರಿಯು ಕೆಲವು ತೆರಿಗೆಗಳನ್ನು ಮನ್ನಾ ಮಾಡಿದ

ಅಂಶವನ್ನು ದಾಖಲಿಸುತ್ತದೆ. ಇದೇ ಅರಸನಿಗೆ ಸೇರಿದ ಬನ್ನೂರಿನ ಶಾಸನ ಅಪ್ರಕಟಿತಗೊಂಡಿದ್ದರೂ, ಕಮ್ಮಾರರು ಈ ಶಾಸನವನ್ನು ಬರೆದರೆಂದು ಉಲ್ಲೇಖಿಸುತ್ತದೆ. ಆಲಗೂಡಿನ ಸಿದ್ಧೇಶ್ವರಗುಡಿ ಪರಿಸರದಲ್ಲಿರುವ ಶಾಸನ, ಭೂದಾನ ಬಿಟ್ಟಿರುವುದನ್ನು ದಾಖಲಿಸಿರುವಂತೆ ತೋರುತ್ತದೆ. ಹೆಮ್ಮಿಗೆಯ ಶಾಸನ, ಅರಸಿಯ ಕೋರಿಕೆಯಂತೆ ಪೆರ್ಮಾನಡಿಗಳು ಪೆಮ್ಮೊಗೆಯ ಪತ್ತೊಂದಿ (ಭೂ ಉತ್ಪನ್ನದ 1/10 ಭಾಗ)ಯನ್ನು ದಾನ ಬಿಟ್ಟಿದ್ದನ್ನು ದಾಖಲಿಸುತ್ತದೆ. ಅದೇ ಊರಲ್ಲಿರುವ ಇನ್ನೊಂದು ಶಾಸನ. ಸೊಲಗೆ ಭೂಮಿಯನ್ನು ದಾನಬಿಟ್ಟ ಅಂಶವನ್ನು ದಾಖಲಿಸಿರುವಂತೆ ತೋರುತ್ತದೆ. ಶ್ರೀಪುರುಷನ ಆಳ್ವಿಕೆಯಲ್ಲಿ ರಾಜಧಾನಿಯನ್ನು ತಲಕಾಡಿನಿಂದ ಮಾನ್ಯಪುರ (ಮಣ್ಣೆ, ನೆಲಮಂಗಲ ತಾಲೂಕು)ಕ್ಕೆ ವರ್ಗಾಯಿಸುವ ಮೂಲಕ, ರಾಷ್ಟ್ರಕೂಟರ ದಾಳಿಯನ್ನು ನಿಯಂತ್ರಿಸಲು ಯತ್ನಿಸಲಾಯಿತು. ಬಾದಾಮಿ ಚಾಲುಕ್ಯರ ಸಮೀಪವರ್ತಿಗಳಾಗಿದ್ದ ಗಂಗರು ರಾಷ್ಟ್ರಕೂಟರ ಕಡುವಿರೋಧಿಗಳಾಗಿ ಸುಮಾರು ವರ್ಷಗಳ ಕಾಲ ರಾಷ್ಟ್ರಕೂಟರ ವಿರುದ್ಧ ಹೋರಾಟ ಮುಂದುವರಿಸಬೇಕಾಗಿ ಬಂತು.

ಶ್ರೀಪುರುಷನ ನಂತರ ಗಂಗ ಸಿಂಹಾಸನವನ್ನು ಏರಿದ ಇಮ್ಮಡಿ ಸೈಗೊಟ್ಟ ಶಿವಮಾರ ರಾಷ್ಟ್ರಕೂಟರ ಅಂತಃಕಲಹದಲ್ಲಿ ಭಾಗವಹಿಸುವಲ್ಲಿ ತಪ್ಪು ಲೆಕ್ಕಾಚಾರ ಹಾಕಿ ಸೆರೆಮನೆ ಸೇರಬೇಕಾಯಿತು. ಈ ಅವಧಿಯಲ್ಲಿ ಗಂಗವಾಡಿಯು ಸ್ವಲ್ಪ ಕಾಲ ರಾಷ್ಟ್ರಕೂಟರ ವಶದಲ್ಲಿತ್ತು. ಇವನು ಸೆರೆಮನೆಯಲ್ಲಿದ್ದಾಗ ಅವನ ಮಗನಾದ ಮಾರಸಿಂಹನು ಗಂಗವಾಡಿಯನ್ನು ಆಳಿದಂತೆ ತೋರುತ್ತದೆ. ಆದರೆ ರಾಷ್ಟ್ರಕೂಟ ರಾಜಕುಮಾರ ಕಂಬನು ಗಂಗವಾಡಿಯ ಪ್ರಾಂತ್ಯಾಧಿಕಾರಿಯಾಗಿದ್ದನು. ಇಮ್ಮಡಿ ಶಿವಮಾರನ ಕಾಲಕ್ಕೆ ಸೇರಿದ ವಿಜಯಪುರದ ಶಾಸನ, ಕಳಲೆ ನಾಡನ್ನು ಮಣಲೆಯರಸನು ಆಳುತ್ತಿದ್ದಾಗ, ಕಿರುಪೆನ್ನಗರದ (ವಿಜಯಪುರ) ಹನ್ನೀರ್ವರಿಗೆ ಪತ್ತೊನ್ದಿ (ದಶವಂದ)ಯನ್ನು ದಾನಬಿಟ್ಟ ಅಂಶವನ್ನು ದಾಖಲಿಸುತ್ತಾ, ಸಾಂದರ್ಭಿಕವಾಗಿ ಮೂಳೂರು (ಮುಳ್ಳೂರು) ಗ್ರಾಮವನ್ನು ಉಲ್ಲೇಖಿಸುತ್ತದೆ.[28]

ಇಮ್ಮಡಿ ಶಿವಮಾರನ ನಂತರ ಅಧಿಕಾರಕ್ಕೆ ಬಂದ ಒಂದನೆಯ ರಾಚಮಲ್ಲನು ನೊಳಂಬರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದು, ಇವನು ತಲಕಾಡಿನಿಂದ ರಾಜ್ಯಭಾರ ನಡೆಸಿದರೆ, ಅವನ ದಾಯಾದಿ ಒಂದನೆಯ ಪೃಥ್ವಿಪತಿಯು, ಪರುವಿ (ಅನಂತಪುರ ಜಿಲ್ಲೆ)ಯಿಂದ ಗಂಗಶಾಖೆಯೊಂದರ ರಾಜನಾಗಿ ರಾಜ್ಯಭಾರ ಮಾಡಲಾರಂಭಿಸಿದನು. ಒಂದನೆಯ ರಾಚಮಲ್ಲನ ಕಾಲಕ್ಕೆ ಸೇರಿದ ಆಲಗೂಡಿನ ಶಾಸನದಿಂದ, ಗೋವಿಂದರಸನ

ಪೆರ್ಗಡಿಯಾದ ಚಾಮುಂಡಯ್ಯನು ಕೆರೆ ನಿರ್ಮಿಸಿ, ತೂಬನ್ನು ಅಳವಡಿಸಿದ ಅಂಶ ತಿಳಿಸುತ್ತದೆ. ಇವನ ಉತ್ತರಾಧಿಕಾರಿಯಾದ ಒಂದನೆಯ ಎರೆಯಪ್ಪ ನೀತಿಮಾರ್ಗನ ಆಡಳಿತಾವಧಿಯಲ್ಲಿ ಗಂಗ–ರಾಷ್ಟ್ರಕೂಟರ ದ್ವೇಷ ಅಂತ್ಯಗೊಂಡು ಅವರುಗಳ ನಡುವೆ ವೈವಾಹಿಕ ಸಂಬಂಧ ಏರ್ಪಟ್ಟಿತು.[29] ಇದರೊಂದಿಗೆ ಗಂಗರು ರಾಷ್ಟ್ರಕೂಟರ ನಿಷ್ಠಾವಂತ ಸಾಮಂತರಾದರು. ಬನ್ನೂರಿನಲ್ಲಿರುವ ಎರಡು ಶಾಸನಗಳು ಸುಮಾರು ೯ನೆಯ ಶತಮಾನಕ್ಕೆ ಸೇರಿದ್ದು, ಅವುಗಳಲ್ಲೊಂದು ಬನ್ನಿಯೂರು ಸಾವಿರ ಪೂರ್ವಜನರ ಸಮ್ಮುಖದಲ್ಲಿ ಎಪ್ಪತ್ತುಗುಳ ಗದ್ದೆಯನ್ನು ಚಾಮಯ್ಯನಿಗೆ ಭಟ್ಟವೃತ್ತಿಯಾಗಿ ದಾನಬಿಟ್ಟ ಅಂಶವನ್ನು ದಾಖಲಿಸಿದರೆ, ಇನ್ನೊಂದು ಶಾಸನ ಬಹಳ ಹಾಳಾಗಿದೆ. ಇವನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ರಾಚಮಲ್ಲನ ಆಳ್ವಿಕೆಯಲ್ಲಿ ಅವನ ಮಗನಾದ ಯುವರಾಜ ಇಮ್ಮಡಿ ಎರೆಗಂಗನು ನೊಳಂಬ ಮಹೇಂದ್ರನನ್ನು ಕೊಂದು ನೊಳಂಬಾಂತಕ ಪೆರ್ಮಾನಡಿ ಎಂಬ ಬಿರುದನ್ನು ಧರಿಸಿದ ಅಂಶ ದೊಡ್ಡಬಾಗಿಲನ ವೀರಗಲ್ಲು ಶಾಸನದಿಂದ ವೇದ್ಯವಾಗುತ್ತಿದ್ದು, ಅದರಲ್ಲಿ ನೊಳಂಬ ವಿಕ್ರಮಾದಿತ್ಯ, ಉದಯಾದಿತ್ಯರ ಉಲ್ಲೇಖವಿದ್ದು, ಕಲ್ನಾಟಾಗಿ ಭೂದಾನ ಬಿಟ್ಟ ಅಂಶವನ್ನೂ ದಾಖಲಿಸುತ್ತದೆ. ಇಮ್ಮಡಿ ರಾಚಮಲ್ಲನ ಅಧಿಕಾರ ಆರಂಭದ ದಿನಗಳಲ್ಲಿ (ಸು. ಕ್ರಿ.ಶ. ೮೭೦) ನೀಡಲ್ಪಟ್ಟಿರುವ ದೊಡ್ಡಹುಂಡಿ ವೀರಗಲ್ಲು ಶಾಸನ(ಈಗ ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿದೆ). ಒಂದನೆಯ ಎರೆಗಂಗ ನೀತಿಮಾರ್ಗನು ಗತಿಸಿದಾಗ ಅವನ ಮನೆಮಗನಾದ ಅಗರಯ್ಯನು ಸತ್ತ ಅರಸನಿಗೆ ಕೀಲ್ಗುಂಟೆಯಾಗಿ ತನ್ನ ದೇಹವನ್ನು ಒಪ್ಪಿಸಿದ ಸಂದರ್ಭದಲ್ಲಿ, ಇಮ್ಮಡಿ ರಾಚಮಲ್ಲನು ಗಂಗವಾಡಿಯ ಕಪ್ಪಳ್ಳಿ ಗ್ರಾಮವನ್ನು ಕಲ್ನಾಡಾಗಿ ದಾನ ಬಿಟ್ಟ ಅಂಶವನ್ನು ದಾಖಲಿಸುತ್ತದೆ. ಅಲ್ಲದೆ ಈ ಶಾಸನ ಅರಸನನ್ನು ಕುವಲಾಲಪುರವೇಶ್ವರ, ನಂದಿಗಿರಿನಾಥನೆಂದೂ ಹೊಗಳಿರುವುದು ಉಲ್ಲೇಖಾರ್ಹ. ಈ ಶಾಸನ ಶಿಲ್ಪವು ಒಂದು ಅಪೂರ್ವ ದಾಖಲೆಯಾಗಿದ್ದು, ಮರಣಶಯ್ಯೆಯಲ್ಲಿರುವ ಅರಸ, ಬಲಬದಿಯಲ್ಲಿ ನಿಂತಿರುವ ಸೇವಕ ಅಗರಯ್ಯ, ಅರಸನ ಎಡಬದಿಯಲ್ಲಿರುವ ರಾಜಕುಮಾರ ಇಮ್ಮಡಿ ರಾಚಮಲ್ಲರ ಉಬ್ಬು ಶಿಲ್ಪಕೆತ್ತನೆಯನ್ನೂ ಒಳಗೊಂಡಿದೆ.

ಇಮ್ಮಡಿ ರಾಚಮಲ್ಲನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ಎರಗಂಗ ನೀತಿಮಾರ್ಗನ ಕಾಲಕ್ಕೆ ಸೇರಿದ ದೊಡ್ಡಬಾಗಿಲು ಶಾಸನವನ್ನು ಈಗಾಗಲೇ ಗಮನಿಸ ಲಾಗಿದೆ. ಇವನ ನಂತರ ಅಧಿಕಾರಕ್ಕೆ ಬಂದ ನರಸಿಂಹನ ಅಲ್ಪಾವಧಿಯ ಆಡಳಿತದ ನಂತರ ಮುಮ್ಮಡಿ ರಾಚಮಲ್ಲ

ಸಿಂಹಾಸನವನ್ನೇರಿದನು. ಇವನ ಕಾಲಕ್ಕೆ ಸೇರಿದ ಕ್ರಿ.ಶ. 935ರ ತಲಕಾಡು ಶಾಸನದಿಂದ ತಲಕಾಡಿನ ಮಹಾಜನರು, ಮಂಚವಯ್ಯ ಸೇರಿದಂತೆ ಇಪ್ಪತ್ತೈದು ಪಟ್ಟಣ ವಸಂತರು ಕೆರೆಯ ದುರಸ್ತಿಗೆಂದು ದ್ರವ್ಯವನ್ನು ನೀಡಿ ಬಿತ್ತುವಾಡದ ಹಕ್ಕನ್ನು ಪಡೆದ ಅಂಶವನ್ನು ದಾಖಲಿಸಿದೆ. ಇವನನ್ನು ಪದಚ್ಯುತಗೊಳಿಸಿ ಅಧಿಕಾರಕ್ಕೆ ಬಂದ ಅವನ ಸೋದರ ಇಮ್ಮಡಿ ಬೂತುಗನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಬಂಧು, ಹಿತೈಷಿ ಹಾಗೂ ಸೇನಾನಿಯಾಗಿದ್ದು, ರಾಷ್ಟ್ರಕೂಟ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ದುಡಿದು, ಚಕ್ರವರ್ತಿಯಿಂದ ಮನ್ನಣೆ ಗಳಿಸಿದ ಅಂಶ, ಅವನ ಆತಕೂರು (ಮದ್ದೂರು ತಾ.) ಶಾಸನದಿಂದ ವೇದ್ಯವಾಗುತ್ತದೆ. ಇವನ ನಂತರ ಅವನ ಹಿರಿಯ ಮಗ ಮರುಳದೇವ ಅಲ್ಪಕಾಲ ರಾಜ್ಯಭಾರ ಮಾಡಿದನು. ಆದರೆ ಈ ಅರಸರ ಶಾಸನಗಳು ಈ ತಾಲೂಕಿನಲ್ಲಿ ಲಭಿಸಿಲ್ಲ.[30]

ಆನಂತರ ಬಂದ ಮುಮ್ಮಡಿ ಮಾರಸಿಂಹನು ರಾಷ್ಟ್ರಕೂಟ ಸಾಮ್ರಾಜ್ಯದ ಸಂರಕ್ಷಣೆಯಲ್ಲೇ ಸಾವನ್ನಪ್ಪಿದನು. ಇವನ ಆಡಳಿತದ ಆರನೆಯ ವರ್ಷದಲ್ಲಿ ನೀಡಲ್ಪಟ್ಟಿರುವ ಬಸವನಹಳ್ಳಿಯ ಶಾಸನ, ಎರೆಯಂಗೇಶ್ವರ ದೇವರ ಪೂಜೆ ಸುಣ್ಣ-ಸೋದೆ ಸೇವೆಗಳಿಗೆಂದು ಎರಡು ಖಂಡುಗ ನೀರ್ಮಣ್ಣು, ಎರಡು ಖಂಡುಗ ಮಡುವಿನ ಮಣ್ಣು ಭೂಮಿಯನ್ನು ಖರೀದಿಸಿ ಸ್ಥಾನಿಕರಾದ ಶ್ರೀಕಂಠಪಂಡಿತ ಭಟಾರರಿಗೆ ನೀಡಿದ್ದನ್ನು ದಾಖಲಿಸುತ್ತದೆ. ಅಲ್ಲದೆ ಕೆರೆಯ ಬಿತ್ತುವಟ್ಟವನ್ನು ಕೊಡದೆ ಉಣ್ಣುವುದು ದ್ರೋಹವೆಂದು ಎಚ್ಚರಿಸುತ್ತಾ, ಈ ಶಾಸನ ಬರೆದಾತ ಲಕುಲೀಶಬಟಾರನೆಂಬ ಅಂಶವನ್ನು ಹೇಳುತ್ತದೆ. ಮಾರಸಿಂಹನ ನಂತರ ಅಧಿಕಾರಕ್ಕೆ ಬಂದ ಗೋವಿಂದರನ ಅಲ್ಪಾವಧಿ ಆಡಳಿತದ ಬೆನ್ನಲ್ಲೇ ಸಿಂಹಾಸನವನ್ನೇರಿದ ನಾಲ್ಕನೆಯ ರಾಚಮಲ್ಲ ಹಾಗೂ ರಕ್ಕಸಗಂಗರ ಅಧಿಕಾರಾವಧಿಯಲ್ಲಿ ತಮಿಳುನಾಡಿನ ಚೋಳರು ಗಂಗವಾಡಿಯ ಮೇಲೆ ಧಾಳಿ ಮಾಡಿ ತಲಕಾಡು ಸೇರಿದಂತೆ, ಗಂಗವಾಡಿ 96,000 ಪ್ರಾಂತ್ಯವನ್ನು ಹಂತಹಂತವಾಗಿ ಕ್ರಿ.ಶ.1006ರ ವೇಳೆಗೆ ವಶಪಡಿಸಿಕೊಂಡಿದ್ದ ಅಂಶ ಅವರ ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ.[31] ಸುಮಾರು 10ನೆಯ ಶತಮಾನಕ್ಕೆ ಸೇರಿದ ತಲಕಾಡಿನ ಶಾಸನ ಪೆರ್ಮಾನಡಿ ಹಾಗೂ ನೊಳಂಬರಾಜರನ್ನು ಹೆಸರಿಸಿದರೆ, ಆಲಗೂಡಿನ ಕೆರೆದಂಡೆಯ ಮೇಲಿರುವ ಶಾಸನ, ದಂಡನಾಯಕ ಗೋವಿಂದಯ್ಯನ ಇಬ್ಬರು ಮಕ್ಕಳಾದ ಮಹಾಬಲಯ್ಯ ಹಾಗೂ ಈಶ್ವರಯ್ಯ ಹಾಗೂ ಮೊಮ್ಮಗ ಚಾವುಂಡರ ಬಗ್ಗೆ ಉತ್ಪ್ರೇಕ್ಷೆಯಿಂದ ಕೂಡಿದ ವರ್ಣನೆಯನ್ನು ಹೊಂದಿದೆ. ಅಲ್ಲೇ ಇರುವ ಕ್ರಿ.ಶ. 992ರ ಇನ್ನೊಂದು ಶಾಸನ, ಏಚಗಾವುಂಡ ಬಿಟ್ಟ ದತ್ತಿಯನ್ನು

ದಾಖಲಿಸಿರುವಂತೆ ತೋರುತ್ತದೆ. ಕಲಿಯೂರಿನ ಗೋಪಾಲಸ್ವಾಮಿ ಗುಡಿಯ ಬಳಿ ಬಿದ್ದಿರುವ 1006ರ ಶಾಸನವನ್ನು ಅಪ್ರಮೇಯ ವಿಜಯಸ್ತಂಭವೆಂದು ಆ ಶಾಸನದಲ್ಲೇ ಕರೆಯಲಾಗಿದೆ.[32] ಈ ಶಾಸನದ ಪ್ರಕಾರ ಕೊತ್ತಮಂಗಲದ ಒಡೆಯನಾದ ಅಪ್ರಮೇಯನು ಒಂದನೆಯ ರಾಜರಾಜ ಚೋಳನ ದಂಡನಾಯಕನಿದ್ದು, ಕಲಿಯೂರಿನಲ್ಲಿ ನಡೆದ ಸಂಗ್ರಾಮದಲ್ಲಿ ಪೊಯ್ಸಳ, ಗೋಯಿಗ, ಬೂತುಗ, ಸೇನವಾರ, ನೊಳಂಬರಚಂದಿರ, ಪೊನ್ನ, ನನ್ನಿಗ, ಬಿರುಗ ನಾಗವರ್ಮ, ನರಗ, ಸಿರಿಗ, ಮುಂತಾದವರನ್ನು ಸೋಲಿಸಿ, ಅನೇಕರನ್ನು ಕೊಂದು ಜಯಸ್ತಂಭವನ್ನು ನಿಲ್ಲಿಸಿದನೆಂದು ಗೊತ್ತಾಗುತ್ತದೆ. ತತ್ಪರಿಣಾಮವಾಗಿ ಗಂಗರಾಜ್ಯವು ಪತನಗೊಂಡು ಚೋಳರ ಆಳ್ವಿಕೆಗೆ ಗಂಗವಾಡಿಯು ಒಳಪಟ್ಟಿತು.

**ಚೋಳರು**

ತಿರುಮಕೂಡಲು ನರಸೀಪುರ ಸಾಂಸ್ಕೃತಿಕ ವಲಯದೊಡನೆ ಚೋಳರು ಸಂಪರ್ಕವನ್ನು ಪಡೆದುಕೊಂಡಿದ್ದರಿಂದ ಕೆಲವು ವಿಶಿಷ್ಟ ರಾಜಕೀಯ ಮತ್ತು ಸಾಂಸ್ಕೃತಿಕ ಬದಲಾವಣೆಗಳು ಕಾಣಿಸಿಕೊಂಡ ಬಗ್ಗೆ ಚೋಳರ ಶಾಸನಗಳು ಹಾಗೂ ಸ್ಮಾರಕಗಳು ನಮಗೆ ಮಾಹಿತಿಗಳನ್ನು ಒದಗಿಸುತ್ತವೆ.[33] ಒಂದನೆಯ ರಾಜರಾಜ ಚೋಳನಿಂದ ಆರಂಭಗೊಂಡು ಒಂದನೆಯ ಕುಲೋತ್ತುಂಗ ಚೋಳ ಆಡಳಿತಾವಧಿಯವರೆಗೆ, ಸುಮಾರು ಒಂದು ಶತಮಾನಕ್ಕೂ ಹೆಚ್ಚು ಕಾಲ ಮೈಸೂರು ಜಿಲ್ಲೆಯೂ ಸೇರಿದಂತೆ ದಕ್ಷಿಣ ಕರ್ನಾಟಕದ ಬಹುಭಾಗ ಚೋಳರ ಸಾಮ್ರಾಜ್ಯಕ್ಕೊಳಪಟ್ಟಿತ್ತು. ಗಂಗರ ರಾಜಧಾನಿ ತಲಕಾಡಿಗೆ ಚೋಳರ ಒಂದನೆಯ ರಾಜರಾಜನ ಹೆಸರಲ್ಲಿ 'ರಾಜರಾಜಪುರ' ಎಂದು ಪುನರ್ ನಾಮಕರಣ ಮಾಡಲಾಯಿತು. ಆದರೆ ಹೊಯ್ಸಳ ವಿಷ್ಣುವರ್ಧನನ ಯಶಸ್ಸಿನಿಂದಾಗಿ ಚೋಳರು ಸುಮಾರು ಕ್ರಿ.ಶ.1114–16ರಲ್ಲಿ ಗಂಗವಾಡಿಯಿಂದ ಕಾಲ್ತೆಗೆದರಾದರೂ ಮುಮ್ಮಡಿ ರಾಜೇಂದ್ರ ಹಾಗೂ ರಾಜಾಧಿರಾಜ ಚೋಳರ ಕಾಲದ ಶಾಸನಗಳು ಇದೇ ತಾಲೂಕಿನಲ್ಲಿ ಲಭಿಸಿರುವುದು ಉಲ್ಲೇಖಾರ್ಹ. ಈವರೆಗೆ ಚೋಳರ ಆಳ್ವಿಕೆಯನ್ನು ಸೂಚಿಸುವ 27 ಶಾಸನಗಳು ತಾಲೂಕಿನಲ್ಲಿ ಪತ್ತೆಯಾಗಿದ್ದು, ಅವುಗಳ ನೆರವಿನಿಂದ ಈ ಭಾಗದ ಮೇಲೆ ಉಂಟಾಗಿರಬಹುದಾದ ಚೋಳರ ಪ್ರಭಾವವನ್ನು ಅರಿಯಬಹುದಾಗಿದೆ.

ಚೋಳರ ಕಾಲದಲ್ಲಿ ಕೆಲವು ಪ್ರಾಂತ್ಯಗಳಲ್ಲಿ ಕನ್ನಡ ಲಿಪಿಯಲ್ಲಿ ತಮಿಳು ಶಾಸನಗಳನ್ನು ಕೆತ್ತಿರುವುದು ಕಂಡುಬಂದಿದ್ದು, ತಿರುಮಕೂಡಲು ನರಸೀಪುರ ತಾಲೂಕಿನ ಬನ್ನೂರಿನಲ್ಲಿ

ಕೋಲಾರಮ್ಮ ದೇವಾಲಯದಲ್ಲಿ ಕಾಣಬಹುದಾಗಿದೆ.[34] ಒಂದನೆಯ ರಾಜರಾಜನ ಕಾಲಕ್ಕೆ ಸೇರಿದ ತಾಲೂಕಿನ ನಾಲ್ಕು ಶಾಸನಗಳಲ್ಲಿ ಬನ್ನೂರಿನ ೨೨೩ರ ಹನುಮಂತೇಶ್ವರ ದೇವಾಲಯದ ಕನ್ನಡ ಶಾಸನವು ರಾಜರಾಜನ ಆಳ್ವಿಕೆಯ ಎಂಟನೆಯ ವರ್ಷಕ್ಕೆ ಸೇರಿದೆ. ಈ ಶಾಸನದಿಂದ ಅರಸನಿಗೆ 'ತಿರುಮಗಳ್‌ಪೋಲ' ಎಂಬ ಬಿರುದಿರುವ ಅಂಶ ತಿಳಿಯಬಹುದು. ಅಲ್ಲಿನ ಶ್ರೀಕೊಯಿಲ್ ಎರಡು ಖಂಡುಗ ಹೊಲ, ಮೂರು ಖಂಡುಗ ಗದ್ದೆಯನ್ನು ಮಹಾಜನರು ದಾನ ನೀಡಿ ಪೂಜಾ ವ್ಯವಸ್ಥೆಯನ್ನು ರೂಪಿಸಿದ ಅಂಶ ಸ್ಪಷ್ಟವಾಗುತ್ತದೆ. ತಡಿಮಾಲಂಗಿಯ ಜನಾರ್ಧನ ದೇವಾಲಯದ ತಳಪಾಯದ ಮೇಲಿರುವ ಕ್ರಿ.ಶ. 1004ರ ತಮಿಳು ಶಾಸನ ಕೆಲವು ಸ್ಥಳೀಯ ಗಾವುಂಡರು ಮಾಲಂಗಿಯಲ್ಲಿ ಭೂಮಿಯೊಂದನ್ನು 100 ಕಳಂಜು ಹೊನ್ನಿಗೆ ಮಾರಿದ್ದನ್ನು ದಾಖಲಿಸಿದ್ದು, ಆ ಹಣವನ್ನು ರವಿಕುಲ ಮಾಣಿಕ್ಯ ಎಣ್ಣಗರಾಳ್ವಾರ್ ದೇವಾಲಯದ ಭಂಡಾರದಿಂದ ಪಾವತಿಸಲಾಗಿತ್ತು. ಒಂದನೆಯ ರಾಜರಾಜನಿಗೆ 'ರವಿಕುಲಮಾಣಿಕ್ಯ' ಎಂಬ ಬಿರುದಿದ್ದು, ಆ ಹೆಸರಲ್ಲೇ ದೇವಾಲಯವೊಂದನ್ನು ತಡಿಮಾಲಂಗಿಯಲ್ಲಿ ಬಹುಶಃ ಅರಸನೇ ನಿರ್ಮಿಸಿದ್ದಿರಬೇಕೆಂದು ಇದರಿಂದ ತರ್ಕಿಸಬಹುದಾಗಿದೆ. ಅಲ್ಲದೆ ಈ ದೇವರ ಭಂಡಾರಕ್ಕೆ ಅರಸನ ಅಕ್ಕಪೆರಿಯ ಕುಂದವ್ವೆಯು ತನ್ನ ಭಂಡಾರದಿಂದ ನಗದು ದತ್ತಿ ನೀಡಿದ್ದನ್ನೂ ದಾಖಲಿಸಿದೆ. ಒಂದನೆಯ ರಾಜರಾಜನಿಗೆ ಕುಂದವ್ವೆ ಎಂಬ ಹೆಸರಿನ ಮಗಳಿದ್ದುದರಿಂದ ಇವಳನ್ನು ಪೆರಿಯ ಕುಂದವ್ವೆ ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ಇಲ್ಲಿ ಉಲ್ಲೇಖಿತಗೊಂಡಿರುವ 100 ಕಲಂಜು ಹೊನ್ನನ್ನು, ತುಲೈನಿರೈ ಸೆಂಪೊನ್ ಎಂದು ಕರೆಯಲಾಗಿದ್ದು, ಅದು ನಿಶ್ಚಿತ ತೂಕ ಮುದ್ರೆಗಳನ್ನೊಳಗೊಂಡ ಶುದ್ಧ ಚಿನ್ನದ ನಾಣ್ಯವೆಂಬುದನ್ನು ಸೂಚಿಸುತ್ತದೆ. ಇದೇ ದೇವಾಲಯದಲ್ಲಿರುವ ಇನ್ನೊಂದು ಶಾಸನ ಕೂಡ ಮರದೂರಿನ ಸಭೆಯವರು ಕಾಸುಗಳ ಲೆಕ್ಕದಲ್ಲಿ ತೂಗಿದ 100 ಕಲಂಜು ಹೊನ್ನಿಗೆ ಭೂಮಿಯನ್ನು ಮಾರಿದ ಅಂಶವನ್ನು ದಾಖಲಿಸಿದ್ದು, ದೇವಾಲಯಕ್ಕೆ ಬಿಟ್ಟಿದ್ದ ಈ ದತ್ತಿಯನ್ನು ನಗರ್ತರು ನೋಡಿಕೊಳ್ಳಬೇಕಾಗಿತ್ತು. ಇದೇ ಅರಸನ ಆಳ್ವಿಕೆಗೆ ಸೇರಿದ 1006ರ ಕಲಿಯೂರು ಶಾಸನ ಗಂಗರನ್ನು ಸೋಲಿಸಿ, ತಲಕಾಡನ್ನು ವಶಪಡಿಸಿಕೊಂಡಿದ್ದ ಚೋಳರನ್ನು ಹೊರಗಟ್ಟಲು ಮುನ್ನುಗ್ಗಿಬಂದ ಹೊಯ್ಸಳ, ನೊಳಂಬ, ಸಾಮಂತರ, ಸೇನವಾರ ಮುಂತಾದವರನ್ನೊಳಗೊಂಡ ಸಾಮಂತರ ಒಕ್ಕೂಟವನ್ನು, ರಾಜರಾಜನ ಪಾದಪಂಕಜಭ್ರಮರನಾಗಿದ್ದು ಹಲವಾರು ಯೋಧರನ್ನು ಕೊಂದು ದಿಗ್ವಿಜಯಿಯಾದ ತೆಲ್ಲಿಕುಲದ ಅಪ್ರಮೇಯ ದಂಡನಾಯಕನು ಸದೆಬಡಿದು ಈ ಜಯಸ್ತಂಭವನ್ನು ನಿಲ್ಲಿಸಿದನೆಂದು ಶಾಸನದಲ್ಲಿ ದಾಖಲಿಸಲಾಗಿದೆ.

ಒಂದನೆಯ ರಾಜರಾಜನ ನಂತರ ಅಧಿಕಾರಕ್ಕೆ ಬಂದ ಒಂದನೆಯ ರಾಜೇಂದ್ರಚೋಳ (1012–1044) ನ ಕಾಲದ ನಾಲ್ಕು ಶಾಸನಗಳಲ್ಲಿ ಮೂರು ತಡಿಮಾಲಂಗಿಯಲ್ಲಿವೆ. ಈ ಅರಸನ ವಿಜಯಪುರದ 1018ರ ಶಾಸನ, ರಾಜೇಂದ್ರ ಚೋಳನು ಎಡತೊರೆನಾಡು, ಬನವಾಸಿ, ಕೊಳ್ಳಿಪಾಕೆಗಳನ್ನು ಜಯಿಸಿದ್ದ ಅಂಶವನ್ನು ದಾಖಲಿಸಿರುವುದು ಉಲ್ಲೇಖಾರ್ಹವಾಗಿದ್ದು, ಬೆಡಿಯಣ್ಣನ ಭೂದಾನವನ್ನೂ ಒಳಗೊಂಡಿದೆ. ಜನಾರ್ಧನ ದೇವಾಲಯದ ತಳಪಾದಿ ಕಲ್ಲಿನ ಮೇಲಿರುವ 1022ರ ಶಾಸನದಿಂದ ಕುರವನ್ ಉಲಗಳಂದಾನ್ (ಭೂಮಿಯನ್ನಳೆವವನು) ಎಂದು ಕರೆಯಲಾದ ರಾಜೇಂದ್ರಚೋಳ ಜಯಮೂರನಾಡಳ್ವಾನ್ ಎಂಬ ಸೇನಾನಿಯು ರವಿಕುಲಮಾಣಿಕ್ಯ ದೇವಾಲಯಕ್ಕೆ ಬಿಟ್ಟ ಸುವರ್ಣದಾನವನ್ನು ತಿಳಿಸುತ್ತದೆ.[35] ಒಂದನೆಯ ರಾಜರಾಜನ ಆಳ್ವಿಕೆಯ 16ನೆಯ ವರ್ಷದಲ್ಲಿ ಆರಂಭಗೊಂಡ ಭೂಮೋಜಣಿ ಕಾರ್ಯವನ್ನು ಈತನು ಯಶಸ್ವಿಯಾಗಿ ಪೂರೈಸಿದ್ದರಿಂದ ಅವನಿಗೆ ಉಲಗಂಅಳಂದಾನ್ (ಭೂಮಿ ಅಳೆದವನು) ಎಂದು ಕರೆದಿರುವುದು ಉಲ್ಲೇಖಾರ್ಹವಾಗಿದೆ. ಅಲ್ಲದೇ ಇದೇ ಶಾಸನ, ಅರಸನ ಆಳ್ವಿಕೆಯ ಹದಿನಾಲ್ಕನೆಯ ವರ್ಷಕ್ಕೆ ಸೇರಿದ್ದು, ಮುಡಿಗೊಂಡ ಚೋಳಮಂಡಲಕ್ಕೆ ಸೇರಿದ ಗಂಗೈಕೊಂಡ ಚೋಳವಳನಾಡೊಳಗಣ ಇಡ್ಯೈನಾಡಿನಲ್ಲಿದ್ದ ಜನನಾಥಪುರ (ಮಾಯಿಲಂಗೆಯ)ದ ರವಿಕುಲಮಾಣಿಕ್ಯ ದೇವಾಲಯದ ನಂದಾದೀಪಸೇವೆ ಹಾಗೂ ತಿರುವೆಳಕ್ಕು ಉತ್ಸವಗಳನ್ನು ನಡೆಸಲು ಎರಡು ಮಾಡೈ ನೀಡಿದ್ದನ್ನು ದಾಖಲಿಸುತ್ತದೆ. 'ಗಂಗೈಕೊಂಡ ಚೋಳ' ಎಂಬುದು ಒಂದನೆಯ ರಾಜೇಂದ್ರಚೋಳನ ಬಿರುದುಗಳಲ್ಲಿ ಒಂದಾಗಿದ್ದು, ಅದನ್ನೇ ಒಂದು ನಾಡಿಗೆ ಹೆಸರಾಗಿ ಇಡಲಾಯಿತು. ಅದೇ ಗುಡಿಯಲ್ಲಿರುವ ಇನ್ನೊಂದು ಶಾಸನದಲ್ಲಿ ಒಂದನೆಯ ರಾಜೇಂದ್ರನು ಉತ್ತಮಚೋಳನೆಂದು ಬಿರುದಾಂಕಿತನಾಗಿದ್ದು, ಅವನ ಅಧಿಕಾರಿಯಾದ ವಿಚ್ಚಾದಿ ಅರೈನನು ರವಿಕುಲಮಾಣಿಕ್ಯ ದೇವರಿಗೆ, ಮಾಡೈಗೆ ತಿಂಗಳಿಗೆ ಒಂದು ಕುನ್ಫಿಯಂತೆ ಮುಕ್ಕಾಲು ಹೊನ್ನು, ಮೂರು ಮಂಜಾಡಿ ಬಡ್ಡಿ ತರುವ ಮೂರು ಮುಡಿಗೊಂಡಚೋಳನ್ ಮಾಡೈ ನಾಣ್ಯಗಳನ್ನು ದತ್ತಿಬಿಟ್ಟ ಉಲ್ಲೇಖವಿದೆ. ಇದರಿಂದ ಒಂದು ಹೊನ್ನಿಗೆ 20 ಮಂಜಾಡಿಗಳು, ಒಂದು ಮಂಜಾಡಿಗೆ 2 ಕುನ್ಫಿಗಳು ಸಮನಾಗಿದ್ದ ಅಂಶ ಸ್ಪಷ್ಟವಾಗುತ್ತದೆ. ಈ ದಾನದ ನಿರ್ವಹಣೆಯನ್ನು ತಡಿಮಾಲಂಗಿಯ ನಗರುತ್ತರುಗಳಿಗೆ ವಹಿಸಿಕೊಡಲಾಗಿತ್ತು. ತಡಿ ಮಾಲಂಗಿಯ ಮಲ್ಲಿಕಾರ್ಜುನ ದೇವಾಲಯದ ತಳಪಾದಿಕಲ್ಲಿನ ಮೇಲಿರುವ ಕ್ರಿ.ಶ. 1044ರ ಇನ್ನೊಂದು ಶಾಸನ, ಜನನಾಥಪುರದ ನಗರ್ತರು ತಮ್ಮೂರ ಶು(ಸಿ)ದ್ಧಮಲ್ಲೇಶ್ವರ ಮಹಾದೇವರ ಪೂಜಾವಿಧಿಗಳಿಗೆಂದು ಭೂದಾನ ನೀಡಿದ ಅಂಶವನ್ನು ದಾಖಲಿಸಿದೆ.

ಇವನ ನಂತರ ಅಧಿಕಾರಕ್ಕೆ ಬಂದ ಒಂದನೆಯ ರಾಜಾಧಿರಾಜನ ಕಾಲಕ್ಕೆ ಸೇರಿದ ಶಾಸನಗಳು ತಾಲೂಕಿನಲ್ಲಿಲ್ಲ. ಮುಂದೆ ಚೋಳ ಸಿಂಹಾಸನವನ್ನು ಏರಿದ ಇಮ್ಮಡಿ ರಾಜೇಂದ್ರಚೋಳನು ಕಲ್ಯಾಣದ ಚಾಲುಕ್ಯ ಅರಸ ಒಂದನೆಯ ಸೋಮೇಶ್ವರನನ್ನು ಸೋಲಿಸಿ, ಯುದ್ಧರಂಗದಿಂದ ಹಿಮ್ಮೆಟ್ಟುವಂತೆ ಮಾಡಿದನೆಂಬ ಅಂಶವನ್ನು ಅನೇಕ ಚೋಳ ಶಾಸನಗಳು ದಾಖಲಿಸಿವೆ. ಇವನ ಆಳ್ವಿಕೆಗೆ ಸೇರಿದ ತಡಿಮಾಲಂಗಿಯ ಶಾಸನದಲ್ಲು ರಾಜೇಂದ್ರಚೋಳನು ಕೊಪ್ಪದಲ್ಲಿ ಅಹವಮಲ್ಲನನ್ನು ಸೋಲಿಸಿ, ಚಾಳುಕ್ಯ ಆನೆಗಳನ್ನು ಸದೆಬಡಿದು ರಟ್ಟಪಾಡಿ ಏಳೂವರೆ ಲಕ್ಷ ಪ್ರದೇಶವನ್ನು ಜಯಿಸಿ, ಕೊಲ್ಲಾಪುರದಲ್ಲಿ ವಿಜಯಸ್ತಂಭವನ್ನು ನಿಲ್ಲಿಸಿದ ಅಂಶವು ಉತ್ಪ್ರೇಕ್ಷಿಸಲ್ಪಟ್ಟಿದೆ. ಇವನ ನಂತರದ ಚೋಳ ಅರಸರಲ್ಲಿ ಒಂದನೆಯ ಕುಲೋತ್ತುಂಗನ ಕಾಲದ ಐದು ಶಾಸನಗಳು ತಾಲೂಕಿನಲ್ಲಿವೆ. ಅವುಗಳಲ್ಲಿ ದೊಡ್ಡಬಾಗಿಲು, ತಲಕಾಡು ಹಾಗೂ ತಡಿಮಾಲಂಗಿಯ ಶಾಸನಗಳು ಬಹಳ ಹಾಳಾಗಿದ್ದು, ಅರಸನ ಉಲ್ಲೇಖ ಹಾಗೂ ಆಳ್ವಿಕೆಯ ವರ್ಷವಿರುವ ಭಾಗವಷ್ಟೆ ಉಳಿದಿವೆ. ಈ ಎಲ್ಲಾ ಶಾಸನಗಳ ಭಾಷೆ ತಮಿಳಾಗಿದ್ದು, ಗ್ರಂಥಲಿಪಿಯಲ್ಲಿವೆ. ಮುಂದೆ ಸುಮಾರು ಕ್ರಿ.ಶ.1116ರಲ್ಲಿ ಹೊಯ್ಸಳ ವಿಷ್ಣುವರ್ಧನನು ಚೋಳರನ್ನು ತಲಕಾಡಿನಿಂದ ಹೊರದಬ್ಬುವಲ್ಲಿ ಯಶಸ್ವಿಯಾಗಿ, ಹೊಯ್ಸಳರ ಆಳ್ವಿಕೆಗೆ ಗಂಗವಾಡಿ ಪ್ರದೇಶವು ಒಳಪಟ್ಟಿತು. ನರಸೀಪುರದ ಕ್ರಿ.ಶ. 1260ರ ತಾಮ್ರ ಶಾಸನವು, ಚೋಳ ಮುಮ್ಮಡಿ ರಾಜೇಂದ್ರನ ಆಳ್ವಿಕೆಗೆ ಸೇರಿದ ಕೋಲಾರ ಜಿಲ್ಲೆಯ ಕೈವಾರನಾಡಿನ ಕೊಳತ್ತೂರು ಗ್ರಾಮದಲ್ಲಿ ಭೂದಾನ ಬಿಟ್ಟ ಅಂಶವನ್ನು ದಾಖಲಿಸಿದ್ದು, ಈ ಶಾಸನಕ್ಕೂ ನರಸೀಪುರ ತಾಲೂಕಿಗೂ ಏನೇನೂ ಸಂಬಂಧವಿಲ್ಲ.

ಕ್ರಿ.ಶ.1006ರಲ್ಲಿ ಕಂಡುಬಂದ ದಾಖಲೆಯ ಪ್ರಕಾರ ಅಪ್ರಮೇಯನೆಂಬ ಚೋಳ ದಂಡನಾಯಕನು ಹೊಯ್ಸಳ ರಾಜನೊಬ್ಬನನ್ನು ಸೋಲಿಸಿದನೆಂಬ ಸಂಗತಿ ತಿಳಿದು ಬರುತ್ತದೆ. ಈ ಚೋಳ ದಂಡನಾಯಕನು ಸೋಲಿಸಿದ ಹೊಯ್ಸಳ ದೊರೆ 1022ರವರೆಗೆ ಆಳಿದ ಒಂದನೇ ವಿನಿಯಾದಿತ್ಯನೆಂದು ಪರಿಗಣಿಸಲಾಗಿದೆ.

ವಿಷ್ಣುವರ್ಧನನ 'ತಲಕಾಡುಗೊಂಡ' ಎಂಬ ಬಿರುದು ಮೊಟ್ಟ ಮೊದಲನೆಯ ಬಾರಿಗೆ ಕ್ರಿ.ಶ.1115ರ ಕೆಲವು ದಾಖಲೆಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅಲ್ಲಿಂದೀಚೆಗೆ ಚೋಳರ ಬಗ್ಗೆ ಯಾವ ದಾಖಲೆಯು ಕಂಡುಬರದೆ ಇರುವುದರಿಂದ ಅವರ ಪ್ರಾಬಲ್ಯ ಕುಂದಿತ್ತೆಂದು ಸ್ಥಿರವಾಗಿ ತಿಳಿದುಬರುತ್ತದೆ. ಚೋಳರನ್ನು ಸೋಲಿಸಿ 'ವೀರಗಂಗ' ಎಂಬ ಬಿರುದನ್ನು ಪಡೆದು

ಗಂಗವಾಡಿಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ ಮೇಲೆಯೇ 'ತಲಕಾಡುಗೊಂಡ' ಭುಜಬಲ ವೀರಗಂಗ ಹೊಯ್ಸಳ ದೇವ ಎಂಬ ಬಿರುದುಗಳು ಪ್ರಾಪ್ತವಾದವು. ಆದ್ದರಿಂದ ತಲಕಾಡು ಯುದ್ಧವು ಕ್ರಿ.ಶ.1114ರಲ್ಲಿಯೇ ನಡೆದಿರಬೇಕೆಂಬ ವಿಷಯದಲ್ಲಿ ಸಂಶಯ ಪಡಬೇಕಾಗಿಲ್ಲ. ಅದೇ ವರ್ಷ ಬೇಲೂರಿನಲ್ಲಿ ವಿಜಯನಾರಾಯಣ ದೇವಸ್ಥಾನ ನಿರ್ಮಾಣ ಕಾರ್ಯವನ್ನು ವಿಷ್ಣುವರ್ಧನನು ಪ್ರಾರಂಭಿಸಿದನು.

## ಹೊಯ್ಸಳರು

ಚೋಳರ ನಂತರ ತಿರುಮಕೂಡಲು ನರಸೀಪುರವು ಕರ್ನಾಟಕ ಇತಿಹಾಸದಲ್ಲಿ ಹೊಯ್ಸಳರ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆಯಿತು.[36] ಸುಮಾರು ಮೂರು ಶತಮಾನಗಳ ಕಾಲ ರಾಜ್ಯಭಾರ ನಡೆಸಿದ ಹೊಯ್ಸಳರ ಉಲ್ಲೇಖವಿರುವ ಮೊದಲ ಶಾಸನ, ತಾಲೂಕಿನ ಕಲಿಯೂರಿನಲ್ಲಿದೆ. ಕಲಿಯೂರಿನ ಕ್ರಿ.ಶ.1006ರ ಶಾಸನದಲ್ಲಿ ಚೋಳ ದಂಡನಾಯಕ ಅಪ್ರಮೇಯನ ಕೈಯಲ್ಲಿ ಸೋತ ಗಂಗ ಸಾಮಂತರಲ್ಲಿ ಒಬ್ಬನಾದ ಹೊಯ್ಸಳನ ಉಲ್ಲೇಖವೂ ಇದೆ. ಅಲ್ಲಿಂದ ಸುಮಾರು ಒಂದು ಶತಮಾನಕ್ಕೂ ಸ್ವಲ್ಪ ಹೆಚ್ಚು ಕಾಲ ಚೋಳರ ಆಳ್ವಿಕೆಗೆ ಒಳಪಟ್ಟಿತ್ತು. ಗಂಗವಾಡಿಯನ್ನು ಹೊಯ್ಸಳ ವಿಷ್ಣುವರ್ಧನನು ಕ್ರಿ.ಶ.1114–16ರಲ್ಲಿ ವಶಪಡಿಸಿ ಕೊಂಡನು. ಆವರೆಗೆ ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು, ವಿಷ್ಣುವರ್ಧನನ ಸೇನಾದಂಡನಾಯಕ ಗಂಗರಾಜನು ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದನು.[37] ದಿಗ್ವಿಜಯ ದಿಂದ ಸ್ವತಂತ್ರರಾಗಲು ಯತ್ನಿಸಿದರಾದರೂ ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನೆದುರು ಅದು ವಿಫಲವಾಯಿತು. ವಿಷ್ಣುವರ್ಧನನ ಆಳ್ವಿಕೆಗೆ ಸೇರಿದ್ದ ತೇದಿಯುಳ್ಳ ಶಾಸನಗಳು ತಲಕಾಡು, ಬನ್ನೂರುಗಳಿಂದಲೂ ಹಾಗೂ ಎರಡು ತೇದಿರಹಿತ ಶಾಸನಗಳು ತಲಕಾಡಿನಿಂದಲೂ ವರದಿಯಾಗಿವೆ. ತಲಕಾಡಿನ ಶಾಸನದಿಂದ, ಚೋಳರ ದಂಡನಾಯಕ ಆದಿಯಮ್ಮನೂ ಸೇರಿದಂತೆ ಚೋಳ ಸೈನ್ಯವನ್ನು ಸಂಪೂರ್ಣ ಸೋಲಿಸಿ ತಲಕಾಡುಗೊಂಡ ಮುಂತಾದ ಬಿರುದುಗಳನ್ನು ಧರಿಸಿದ ವಿಷ್ಣುವರ್ಧನನು ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ನಿರ್ಮಿಸಿ, ಅದರ ಪೂಜಾವಿಧಿ ತಿರುವಿಡಿಯಾಟಕ್ಕೆಂದು ಕುಕ್ಕೂರು, ಕಿರುವಿಣ್ಣಾಗರ, ಒಡಪ್ಪಟ್ಟಿ ಹಾಗೂ ವಾಗಿಯೂರು ಗ್ರಾಮಗಳನ್ನು ಸರ್ವಮಾನ್ಯವಾಗಿ ದತ್ತಿಬಿಟ್ಟ ಅಂಶ ವೇದ್ಯವಾಗುತ್ತದೆ. ಅಲ್ಲದೆ ಹೊಯ್ಸಳರ ಮೂಲಕ್ಕೆ ಸಂಬಂಧಿಸಿದಂತೆ, ಪೌರಾಣಿಕ

ವಿವರಣೆಯನ್ನು ನೀಡುವ ಈ ಶಾಸನದಲ್ಲಿ ವಿಷ್ಣುವರ್ಧನನ ಮಗ ನರಸಿಂಹ, ಸೊಸೆ ಏಚಲಾದೇವಿ ಹಾಗೂ ಮೊಮ್ಮಗ ವೀರಬಲ್ಲಾಳರ ಉಲ್ಲೇಖವೂ ಇದೆ. ಇದರಿಂದ ಈ ಶಾಸನವನ್ನು ಇಮ್ಮಡಿ ಬಲ್ಲಾಳನ ಆಳ್ವಿಕೆಯ ಸಂದರ್ಭದಲ್ಲಿ (ಕ್ರಿ.ಶ. 1173) ನೀಡಲಾಗಿದೆಯೆಂದು ಬಿ.ಆರ್.ಗೋಪಾಲ್ ಅಭಿಪ್ರಾಯಪಡುತ್ತಾರೆ.

ವಿಷ್ಣುವರ್ಧನನ ಆಡಳಿತಕ್ಕೆ ಸೇರಿದ ಬನ್ನೂರಿನ ಕ್ರಿ.ಶ.1135ರ ಶಾಸನ, ಜಿನನಾಥ ಚತುರ್ವೇದಿಮಂಗಲ ಎಂಬ ಅಭಿದಾನವನ್ನು ಹೊಂದಿದ್ದ ಬನ್ನಿಯೂರಿ (ಬನ್ನೂರು)ನ 1700 ಮಹಾಜನರ ಸಮ್ಮುಖದಲ್ಲಿ ಬೆಳ್ವಲ ನಾಡಿನ ಬಾದಾಮಿಯ ನರಸಿಂಹದೇವನು ವಿಷ್ಣು ಹಾಗೂ ಜನಾರ್ಧನ ದೇವರ ನಂದಾದೀಪಕ್ಕೆಂದು ತಲಾ ಮೂರ್ಮೂರು ಗದ್ಯಾಣವನ್ನೂ, ಮಹಾಜನರು ನಡೆಸುತ್ತಿದ್ದ ಸಂಜೆಮಠದ ಅಗ್ಗಿಷ್ಟಿಕೆಗೆ ನಾಲ್ಕು ಗದ್ಯಾಣವನ್ನೂ ಹಾಗೂ ಉಭಯ ಪರ್ವಗಳಲ್ಲಿ ನಡೆಯುವ ಸೌಪರ್ಣದ ತಾಂಬೂಲ ಸೇವೆಗೆಂದು ಎರಡು ಗದ್ಯಾಣ (ಎಲ್ಲಾ ಸೇರಿ ಒಟ್ಟು 12)ಗಳಿಂದ ತಿಂಗಳಿಗೆ ಗದ್ಯಾಣಕ್ಕೆ ಹಾಗ ಬಡ್ಡಿಯಂತೆ ಬರುವ 12 ಹಾಗಗಳನ್ನು ಬಳಸಿಕೊಳ್ಳಲೆಂದು ಕೊಟ್ಟ 12 ಗದ್ಯಾಣಗಳ ಪುದುವೊಟ್ಟಿನ ಬಗ್ಗೆ ತಿಳಿಸುತ್ತದೆ. ಇದರಿಂದ ಸಂಜೆಮಠದಲ್ಲಿ ಶಿಕ್ಷಣ ಸೇವೆ ಲಭ್ಯವಿದ್ದು, ಅದನ್ನು ಊರ ಮಹಾಜನರೇ ನಿರ್ವಹಿಸುತ್ತಿದ್ದ ಅಂಶ ವೇದ್ಯವಾಗುತ್ತದೆ. ವಿಷ್ಣುವರ್ಧನನ ಆಳ್ವಿಕೆಗೆ ಸೇರಿದ್ದೆಂದು ಊಹಿಸಲಾಗಿರುವ ತಲಕಾಡಿನ ಶಾಸನಗಳಲ್ಲೊಂದು ಅಲ್ಲಿನ ಕೀರ್ತಿನಾರಾಯಣ ದೇವರಿಗೆ ನರ್ತಕಿಯೊಬ್ಬಳು ನಗರದ ಮಂಡಲಸ್ವಾಮಿಯಿಂದ ಭೂಮಿಯನ್ನು ಖರೀದಿಸಿ ದಾನಬಿಟ್ಟ ಅಂಶವನ್ನು ತಿಳಿಸಿದರೆ, ಇನ್ನೊಂದು ಶಾಸನ ಅದೇ ನರ್ತಕಿಯು ನಾಲ್ಕು ಕಲಂಜು ಚಿನ್ನವನ್ನು ವೆಚ್ಚ ಮಾಡಿ ಎಂಬೆರುಮಾನ (ರಾಮಾನುಜ)ರ್ ಜೊತೆಗೆ ದೇವಿಯ ವಿಗ್ರಹವನ್ನು ಮಾಡಿಸಿ, ಅದನ್ನು ಕೀರ್ತಿನಾರಾಯಣ ದೇವಾಲಯದಲ್ಲಿ ಪ್ರತಿಷ್ಠಾಪಿಸಿದ ಅಂಶವನ್ನು ದಾಖಲಿಸಿದೆ. ಮೈಸೂರು ತಾಲೂಕಿನ ಕುಮಾರಬೀಡು (ಕ್ರಿ.ಶ. 1121) ಶಾಸನ ಹೊಯ್ಸಳ ವಿಷ್ಣುವರ್ಧನನು ಗಂಗವಾಡಿ-96,000 ನಾಡನ್ನು ರಾಜಧಾನಿ ತಲಕಾಡಿನಿಂದ ಆಳುತ್ತಿದ್ದನೆಂಬ ಅಂಶವನ್ನು ದಾಖಲಿಸಿರುವುದು ಉಲ್ಲೇಖಾರ್ಹವಾಗಿದೆ.

ವಿಷ್ಣುವರ್ಧನನ ನಂತರ ಅಧಿಕಾರಕ್ಕೆ ಬಂದ ರಾಜರುಗಳು ತಲಕಾಡನ್ನು 14ನೇ ಶತಮಾನದ ಮಧ್ಯಭಾಗದವರೆಗೂ ಆಳ್ವಿಕೆ ಮಾಡಿ 7 ಪುರಗಳನ್ನು, 5 ಮಠಗಳನ್ನು ಒಳಗೊಂಡ ಹೊಯ್ಸಳರ ಉಪರಾಜಧಾನಿಯನ್ನು ಮಾಡಿಕೊಂಡರು.ಒಂದನೆಯ ನರಸಿಂಹನ

ತಲಕಾಡು ಶಾಸನ, ಕಿರುನಗರ (ವಿಜಯಪುರ)ದ ಗೌಡರಿಂದ ಭೂಮಿ ಖರೀದಿಸಿ, ದಾನ ಬಿಟ್ಟ ಅಂಶವನ್ನು ದಾಖಲಿಸುತ್ತದೆ. ಇಮ್ಮಡಿ ಬಲ್ಲಾಳನ ಆಡಳಿತಕ್ಕೆ ಸೇರಿದ 16 ಶಾಸನಗಳು ಈವರೆಗೆ ಈ ತಾಲೂಕಿನಲ್ಲಿ ಲಭಿಸಿವೆ. ಅವುಗಳಲ್ಲಿ ತಲಕಾಡಿನ ಕ್ರಿ.ಶ. 1173ರ ಶಾಸನ, ಅರಸನು ತಾನು ಪಟ್ಟಕ್ಕೆ ಬಂದ ಮಹೋತ್ಸವ ಸಂದರ್ಭದಲ್ಲಿ, ತಲಕಾಡಿನ ಕೀರ್ತಿನಾರಾಯಣ ದೇವರ ಸೇವೆಗೆಂದು ಪದಿನಾಡಿನ ಇಳಮರದೂರು (ಇಂದಿನ ಯಳಂದೂರು) ಗ್ರಾಮವನ್ನು ಸರ್ವಮಾನ್ಯವಾಗಿ ದಾನಬಿಟ್ಟ ಅಂಶವನ್ನು ದಾಖಲಿಸಿದರೆ, ಮೂಗೂರಿನ ಕ್ರಿ.ಶ. 1177ರ ಶಾಸನದಿಂದ ಮಾರಿನಂಬಿಗೆ ಎರಡು ವೆಲಿ ಭೂಮಿಯನ್ನು ದಾನಬಿಟ್ಟ ಅಂಶ ಗೊತ್ತಾಗುತ್ತದೆ. ಕ್ರಿ.ಶ. 1179ರಲ್ಲಿ ನೀಡಲ್ಪಟ್ಟಿರುವ ಮೂರು ಶಾಸನಗಳಲ್ಲಿ ಕಾರಗಹಳ್ಳಿ ಶಾಸನ, ಕೊಳತೂರು ಸೋಮೇಶ್ವರ ದೇವರ್ಗೆ ಕಲ್ಲುಗಾಣ ಮಾಡಿಸಿದ್ದನ್ನು ದಾಖಲಿಸಿದರೆ, ಮುಡುಕುತೊರೆ ಬೆಟ್ಟದ ಹಿಂಬದಿಯ ಹೊಲದಲ್ಲಿರುವ ಇನ್ನೊಂದು ಶಾಸನ, ವೆಟ್ಟಪಳ್ಳಿಯ ಸಮೀಪದ ಬೆಟ್ಟದ ಮೇಲಿನ ಮಲ್ಲಿಕಾರ್ಜುನ ದೇವರ್ಗೆ ಪೆರ್ಗಡೆ ವೈಚಪ್ಪ ಹಾಗೂ ರಾಮಯ್ಯರು ಭೂದಾನ ಬಿಟ್ಟ ಅಂಶವನ್ನು ಉಲ್ಲೇಖಿಸುತ್ತದೆ. ಇದೇ ತೇದಿಗೆ ಸೇರಿದ ಅಕ್ಕೂರಿನ ಶಾಸನ, ಬಾಚಯ್ಯ ನಾಯಕ, ಹೆಗ್ಗಡೆ ಮಾರಯ್ಯ ಹಾಗೂ ಇತರರು ಅಕ್ಕಿಯೂರ ಚೋಳಪಾಂಡೇಶ್ವರ ದೇವರ್ಗೆ ಗಾಣದ ಸುಂಕದೊಂದಿಗೆ ಮನೆಗೊಂದು ಹಾಗ ರಹಳನ್ನು ದಾನಬಿಟ್ಟ ಅಂಶವನ್ನು ತಿಳಿಸುತ್ತದೆ.

ತುಂಬಲದ ಕ್ರಿ.ಶ. 1180ರ ಎರಡು ಶಾಸನಗಳು ತಿರುಮಕೂಡಲಿನ ಅಗಸ್ತ್ಯೇಶ್ವರ ದೇವರ ಸೇವೆಗೆಂದು ಎಡತೊರೆನಾಡ ತುಂಬಲ ಮತ್ತದರ ನಾಲ್ಕು ಕಾಲುವಳ್ಳಿ (ಉಪಗ್ರಾಮ)ಗಳನ್ನು ಅರಸನು ದಾನಬಿಟ್ಟ ಅಂಶವನ್ನು ದಾಖಲಿಸಿದರೆ, ತಲಕಾಡಿನ (ಕ್ರಿ.ಶ. 1180) ಶಾಸನದಿಂದ ಅರಸನು ಕೀರ್ತಿನಾರಾಯಣ ದೇವರ ಅರ್ಚಕರ ನಡುವೆ ಉದ್ಭವಿಸಿದ್ದ ಪ್ರಸಾದ ಹಂಚಿಕೆ ಸಮಸ್ಯೆಯನ್ನು ಬಗೆಹರಿಸಿದ ಅಂಶ ವೇದ್ಯವಾಗುತ್ತದೆ. ತಿರುಮಕೂಡಲು ನರಸೀಪುರದ ಕ್ರಿ.ಶ. 1188ರ ಶಾಸನದಿಂದ, ತಲಕಾಡುಗೊಂಡ ಅಭಯವಲ್ಲಭದೇವನು, ಆಲಗೂಡಿನ ವೀಣ್ಣಾಗರ್ ದೇವರ ಸೇವೆಗೆಂದು ಶ್ರೀರಾಮಚತುರ್ವೇದಿಮಂಗಲವಾದ ಪುಣಿಶೆಯೂರ ಮಹಾಸಭೆಯಿಂದ ಭೂಮಿಯನ್ನು ಖರೀದಿಸಿ ದಾನ ಬಿಟ್ಟಿರುವುದು ತಿಳಿಯುತ್ತದೆ. ಇದೇ ತೇದಿಯಲ್ಲಿರುವ ಬನ್ನೂರಿನ ಶಾಸನದಿಂದ, ಅಲ್ಲಿನ ದೇವಾಲಯವೊಂದಕ್ಕೆ ಮಹಾಜನರೂ ಸೇರಿದಂತೆ ಸಾರ್ವಜನಿಕರು ದಾನಬಿಟ್ಟ ಅಂಶ ಗೊತ್ತಾದರೆ, ತಲಕಾಡಿನ ಇನ್ನೊಂದು ಶಾಸನವು ದೇವರ ಪ್ರಸಾದದ ವಿನಿಯೋಗಕ್ಕೆ ಸಂಬಂಧಿಸಿದಂತೆ ಮಾಡಿದ ವ್ಯವಸ್ಥೆಯನ್ನು ದಾಖಲಿಸುತ್ತದೆ.

ತಡಿಮಾಲಂಗಿಯ 1196 ಶಾಸನದಲ್ಲಿ ಅರಸನು ಎಲಬುರಿಗೆಯಲ್ಲಿ ತಂಗಿದ್ದಾಗ ಮಾಲಂಗಿಯ ಜನಾರ್ಧನ ದೇವರ ಪೂಜಾವಿಧಿಗೆಂದು ಸಾತನೂರಿನಿಂದಾಳುತ್ತಿದ್ದ ಆರ್ಮಟಮಲ್ಲ ದಂಡನಾಯಕನು ದಾನಬಿಟ್ಟ ಅಂಶ ಗೊತ್ತಾಗುತ್ತದೆ. ಬನ್ನೂರಿನ ಕ್ರಿ.ಶ. 1202ರ ಶಾಸನ 35 ಗದ್ಯಾಣಗಳನ್ನು ಅಗಸ್ತೇಶ್ವರ ಭಟ್ಟರಿಗೆ ಪೂಜಾವಿಧಿಗೆಂದು ಗೋವಿಂದಭಟ್ಟನು ದಾನ ಬಿಟ್ಟ ಅಂಶವನ್ನು ದಾಖಲಿಸಿದೆ. ಅದೇ ಅರಸನ ಕಾಲಕ್ಕೆ ಸೇರಿದ ತೇದಿರಹಿತ ಶಾಸನಗಳು ಬನ್ನೂರು, ಚಿದರವಳ್ಳಿ ಹಾಗೂ ವಿಜಯಪುರಗಳಿಂದ ವರದಿಯಾಗಿದ್ದು, ಚಿದರಳ್ಳಿಯ ಶಾಸನದಿಂದ ತಲಕಾಡಿನ ಹಾಗೂ ಕಲ್ಲುವಡ್ಡರು ಏಕಸ್ಥರಾಗಿ ಮನೆ, ಕೆರೆ ಹಾಗೂ ಗದ್ದೆಗಳನ್ನು ದಾನ ಬಿಟ್ಟ ಅಂಶ ಸ್ಪಷ್ಟವಾಗುತ್ತದೆ. ಈ ದಾನವನ್ನು ಶಾಸನವಿರುವ ಚಿದರಳ್ಳಿಯ ಸೋಮೇಶ್ವರ ದೇವರ ಸೇವೆಗೆಂದು ಬಿಟ್ಟಿರುವಂತೆ ತೋರುತ್ತದೆ.

ಇಮ್ಮಡಿ ಬಲ್ಲಾಳನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ನರಸಿಂಹನ ಕಾಲಕ್ಕೆ ಸೇರಿದ ತಾಲೂಕಿನ ಏಕೈಕ ಶಾಸನವು ತಲಕಾಡಿನಲ್ಲಿದ್ದು, ಪುರಾಣ ಪ್ರಸಿದ್ಧನಾದ ನರಸಿಂಹನು ಅಚೇತನವಾದ ಸ್ತಂಭದಿಂದ ಉದ್ಭವಿಸಿದರೆ, ಈ ನರಸಿಂಹನು (ಮುಮ್ಮಡಿ ನರಸಿಂಹನು) ಬಲ್ಲಾಳನೆಂಬ ಚೇತನ ಸ್ತಂಭದಿಂದ ಜನಿಸಿದನೆಂಬ ಅಂಶವನ್ನು ಅವ್ಯಮಯವಾಗಿ ದಾಖಲಿಸಿದೆ. ಇವನ ನಂತರ ಅಧಿಕಾರಕ್ಕೆ ಬಂದ ಸೋಮೇಶ್ವರನ ಕಾಲಕ್ಕೆ ಸೇರಿದ ಜೋಡಿ ಬಸವನಪುರದ 1236ರ ಶಾಸನದಿಂದ ಹಿಂದೆ ವಾಸುದೇವನು ಇಟ್ಟಿಗೆ ಬಳಸಿ ನಿರ್ಮಿಸಿದ್ದ ಹರಿಹರ ದೇವಾಲಯವನ್ನು ಅವನ ಮೊಮ್ಮಗನಾದ ಕೇಶವದೇವನು ಶಿಲಾಮಯಗೊಳಿಸಿ, ದುರ್ಗೀಶ್ವರ ದೇವರ್ಗೆ ಗೋಪುರ, ನಂದಿ ಹಾಗೂ ಮಕರತೋರಣಗಳನ್ನು ಮಾಡಿಸಿದ ಅಂಶ ಸ್ಪಷ್ಟಪಡಿಸುತ್ತದೆ. ಇದೇ ತೇದಿಯ ತಲಕಾಡು ಶಾಸನ, ತಲಕಾಡಿನ ಕೀರ್ತಿನಾರಾಯಣ ದೇವರ ನಂದಾದೀಪಕ್ಕೆಂದು ಏಳು ನಾಣ್ಯಗಳನ್ನು ಗೋವಿಂದನಾಯಕನು ದತ್ತಿಬಿಟ್ಟಿದ್ದನ್ನು ದಾಖಲಿಸಿದೆ. ಇದೇ ಅರಸನಿಗೆ ಸೇರಿದ ಬನ್ನೂರಿನ ಕ್ರಿ.ಶ. 1246ರ ಶಾಸನ, ಬನ್ನೂರಿನ ಚೆನ್ನಗೋಪಿನಾಥ ದೇವರ ಸೇವೆಗೆಂದು ನಾಲ್ಕು ಗದ್ಯಾಣವನ್ನು ದಾನ ಬಿಟ್ಟ ಅಂಶವನ್ನು ದಾಖಲಿಸುತ್ತದೆ.

ಇವನ ನಂತರ ಅಧಿಕಾರಕ್ಕೆ ಬಂದ ಮುಮ್ಮಡಿ ನರಸಿಂಹನ ಆಳ್ವಿಕೆಗೆ ಸೇರಿದ ಈ ತಾಲೂಕಿನ ಮೂಗೂರು (ಕ್ರಿ.ಶ. 1261, ಕ್ರಿ.ಶ. 1277, ಕ್ರಿ.ಶ. 1279), ಸೋಮನಾಥಪುರ (ಕ್ರಿ.ಶ. 1268-79), ವಿಜಯಪುರ (ಕ್ರಿ.ಶ. 1290)ಶಾಸನಗಳಿಂದ ವರದಿಯಾಗಿವೆ. ಇವುಗಳಲ್ಲಿ ಮೂಗೂರಿನ 1261ರ ಶಾಸನ, ತಿಬ್ಬವ್ವೆದೇವಿಯ ನಂದಾದೀಪದ ಎಣ್ಣೆಗೆಂದು ವರ್ಷಕ್ಕೆ ಒಂದು

ಗದ್ಯಾಣ, ಎರಡು ಪಣಗಳನ್ನು ದಾನ ನೀಡಿದ್ದನ್ನು ದಾಖಲಿಸುತ್ತದೆ. ಸೋಮನಾಥಪುರದ ಐದು ಶಾಸನಗಳಲ್ಲಿ ದಂಡನಾಯಕ ಸೋಮಯ್ಯನು ಸರ್ವನಮಸ್ಯದ ಅಗ್ರಹಾರ ವಿದ್ಯಾನಿಧಿ ಪ್ರಸನ್ನ ಸೋಮನಾಥಪುರವನ್ನು ಕ್ರಿ.ಶ. 1268ರಲ್ಲಿ ಸ್ಥಾಪಿಸಿ, ಅಗ್ರಹಾರದ ಮಧ್ಯಭಾಗದಲ್ಲಿ ಕೇಶವ, ಗೋಪಾಲ ಹಾಗೂ ಜನಾರ್ಧನ ದೇವರುಗಳನ್ನುಳ್ಳ ತ್ರಿಕೂಟಾಚಲವನ್ನು ಬ್ರಹ್ಮಾದಿ ಉಪದೇವತೆ, ಪರಿಹಾರ ದೇವತಾಮೂರ್ತಿಗಳೊಂದಿಗೆ ಕ್ರಿ.ಶ. 1276ರ ವೇಳೆಗೆ ನಿರ್ಮಿಸಿ ದಾನ ಬಿಟ್ಟ ಅಂಶವನ್ನು ದಾಖಲಿಸಿದರೆ, ದೇವಾಲಯದ ಭಿತ್ತಿಶಿಲ್ಪಗಳ ಬುಡದಲ್ಲಿರುವ ವಿವಿಧ ನಾಮಾಂಕಿತ ಶಾಸನಗಳಿಂದ ಮಲಿತಮ್ಮ, ಬಲ್ಲೆಹ, ಮಸಣಿತಮ್ಮ ಚಾಮಯ್ಯ, ಚೌಡಯ್ಯ ಮುಂತಾದ ಶಿಲ್ಪಿಗಳು ಈ ದೇವಾಲಯವನ್ನು ಮಲ್ಲಿತಮ್ಮನ ರೂವಾರಿತ್ವದಲ್ಲಿ ಪೂರ್ಣಗೊಳಿಸಿದ ಅಂಶ ದಾಖಲಿಸಲ್ಪಟ್ಟಿದೆ. ಅಲ್ಲದೆ ಅಲ್ಲಿನ ಕಾವೇರಿ ತೀರದ ಲಕ್ಷ್ಮೀನರಸಿಂಹ ಹಾಗೂ ಯೋಗನರಸಿಂಹ ದೇವರುಗಳಿಗೂ, ಪಂಚಲಿಂಗ ದೇವರಿಗೂ ದಾನ ಬಿಟ್ಟಿದ್ದ ಅಂಶ ಕ್ರಿ.ಶ. 1269ರ ಶಾಸನದಿಂದ ಸ್ಪಷ್ಟವಾಗುತ್ತದೆ. ಉಳಿದೆರಡು ಶಾಸನಗಳು ಸೋಮನಾಥಪುರದ ದೇವಾಲಯಗಳಿಗೆ ಬಿಟ್ಟ ಪ್ರತ್ಯೇಕ ದತ್ತಿಗಳಾಗಿವೆ. ಪಂಚಲಿಂಗದೇವರ ಗುಡಿ ಮುಂದಿರುವ ಕ್ರಿ.ಶ. 1269ರ ಶಾಸನದಿಂದ, ಆ ದೇವಾಲಯದಲ್ಲಿ ಹಿಂದೆ ಬಿಜ್ಜಲೇಶ್ವರ, ಹೆಮ್ಮೇಶ್ವರ, ರವಳೇಶ್ವರ, ಸೋಮನಾಥ ಹಾಗೂ ಭೈರವೇಶ್ವರ ದೇವರುಗಳನ್ನು ಪ್ರತಿಷ್ಠಾಪಿಸಿದ್ದ ಅಂಶ ವೇದ್ಯವಾಗುತ್ತದೆ.

ಮೂಗೂರಿನ ಕ್ರಿ.ಶ. 1277ರ ಶಾಸನ, ಊರ ಪ್ರಭುಗಳು ಮೂಗೂರಿನಲ್ಲಿ ಪಟ್ಟಣವನ್ನು ನಿರ್ಮಿಸಿ, ಸಂತೆಯನ್ನು ಆರಂಭಿಸಿ, ಬೇಕಾದ ಸೌಕರ್ಯವನ್ನು ಊರಗೌಡ ಹಾಗೂ ಸ್ಥಳದ ಸೆಟ್ಟಿಯರಿಗೆ ನೀಡಿದ್ದು, ಒಂಭತ್ತು ಕೈಯಳತೆಯ ಮನೆಯನ್ನು ಮಾಡುವವರಿಗೆ ಮೊದಲ ವರ್ಷ ಮನೆದೆರೆ ಮನ್ನಾ ಹಾಗೂ ಪಟ್ಟಣದಲ್ಲಿ ಹೊಸದಾಗಿ ಬಂದು ನೆಲಸುವವರಿಗೆ ಎರಡು ವರ್ಷ ಮನೆದೆರೆಯನ್ನು ಮನ್ನಾ ಮಾಡಿದ ಅಪರೂಪದ ಅಂಶವನ್ನು ದಾಖಲಿಸಿದೆ. ಆಲಗೂಡಿನ ಕ್ರಿ.ಶ. 1278ರ ಶಾಸನದಲ್ಲಿ ಅರ್ಕಸಾಲೆ ಭೋಗಾಚಾರಿಯು ನಿರ್ಮಿಸಿಕೊಟ್ಟ ದೇವಾಲಯದ ಪ್ರಸ್ತಾಪವಿದೆ. ಮೂಗೂರಿನ ಕ್ರಿ.ಶ. 1279ರ ಶಾಸನ ಅಲ್ಲಿನ ದೇಶಿನಾಥ ದೇವರಿಗೆ ದತ್ತಿಬಿಟ್ಟ ಅಂಶವನ್ನು ದಾಖಲಿಸಿದರೆ ಇನ್ನೊಂದು ಶಾಸನ ಮೂಗೂರಿನ ಅಳಗಪೆರುಮಾಳ್ ದೇವರ ಸೇವೆಗೆಂದು ವಿವಿಧ ತೆರಿಗೆಗಳನ್ನು ಮಹಾಪ್ರಭು ಡಾಲಿಗೌಡನು ದಾನ ಬಿಟ್ಟ ಅಂಶವನ್ನು ದಾಖಲಿಸಿದೆ. ಕಾವೇರಿಪುರದ 1288ರ ಶಾಸನ, ಹೊಂಗಲವಾಡಿಯ ಗೌಡ–ಅಧಿಕಾರಿಗಳ ಕೋರಿಕೆಯಂತೆ ಅರಸನು ದಾನಬಿಟ್ಟಿರುವುದನ್ನು ತಿಳಿಯಬಹುದು. ತಡಿಮಾಲಂಗಿಯ ಕ್ರಿ.ಶ.

1290ರ ಶಾಸನದಿಂದ ಸರ್ವನಮಸ್ಯದಗ್ರಹಾರ, ದಕ್ಷಿಣವಾರಣಾಸಿ ಉದ್ಭವ ಸರ್ವಜ್ಞ ಶ್ರೀರಂಗಪುರವಾದ ತಡಿಮಾಲಂಗಿಯಲ್ಲಿ ಪೆರುಮಾಳೆ ದಂಡನಾಯಕನು ಆರಂಭಿಸಿದ ಪಾಠಶಾಲೆಯಲ್ಲಿ ಖಂಡಿಕ, ಬಾಲಶಿಕ್ಷೆಗಳಿಗೆಂದು ಋಗ್ವೇದ ಓದಿಸುವ ಉಪಾಧ್ಯಾಯ, ನಾಗರಿ-ಕನ್ನಡ ಹಾಗೂ ತಿಗುಳಾರ್ಯವನ್ನೋದಿಸುವ ಬಾಲಶಿಕ್ಷಾ ಉಪಾಧ್ಯಾಯರ ಜೀವಿತಕ್ಕೆಂದು ವರ್ಷಕ್ಕೆ ತಲಾ ಆರಾರು ಗದ್ಯಾಣವನ್ನು ದಾನಬಿಟ್ಟ ಅಂಶ ವೇದ್ಯವಾಗುತ್ತದೆ.

ಮುಮ್ಮಡಿ ಬಲ್ಲಾಳನ ಕಾಲಕ್ಕೆ ಸೇರಿದ ಹತ್ತಕ್ಕೂ ಹೆಚ್ಚು ಶಾಸನಗಳು (ಕ್ರಿ.ಶ. 1290-1342) ಈ ತಾಲೂಕಿನಲ್ಲಿ ಲಭಿಸಿವೆ. ಅವುಗಳಲ್ಲಿ ಸೋಮನಾಥಪುರದ ಕ್ರಿ.ಶ. 1300ರ ಶಾಸನ ಅಲ್ಲಿನ ಪಂಚಲಿಂಗದೇವರು, ಪ್ರಸನ್ನಕೇಶವದೇವರು, ಹೊಳೆಯ ನರಸಿಂಹ, ಲಕ್ಷ್ಮೀನರಸಿಂಹ, ಮಳವಳ್ಳಿಯ ಸಾರಂಗಪಾಣಿ ಹಾಗೂ ತಲಕಾಡಿನ ಕೀರ್ತಿನಾರಾಯಣ ದೇವರುಗಳ ರಕ್ಷಣೆ ಪೂಜಾವಿಧಿಗಳಿಗೆಂದು ದತ್ತಿಬಿಟ್ಟ ಅಂಶವನ್ನು ತಿಳಿಸಿದರೆ, ಜೋಡಿಬಸವನಪುರದ 1301ರ ಶಾಸನ, ಅಲ್ಲಿದ್ದ ದುರ್ಗೀಶ್ವರ ದೇವರ ನಂದಾದೀಪಕ್ಕೆಂದು ನಾಲ್ಕು ಗದ್ಯಾಣವನ್ನು ದಾನಬಿಟ್ಟ ಅಂಶವನ್ನು ದಾಖಲಿಸಿದೆ. ಕುರುಬೂರಿನ ಕ್ರಿ.ಶ1307ರ ಶಾಸನ, ಕುರುಬೂರು ಹೆಗ್ಗೇಶ್ವರ ದೇವರ ನಂದಾದೀಪಕ್ಕೆಂದು ಹೆಗ್ಗಡೆಯು ಗಾಣಸುಂಕವನ್ನು ಮನ್ನಾ ಮಾಡಿದ ಅಂಶವನ್ನು ಉಲ್ಲೇಖಿಸಿದರೆ, ಕಲಿಯೂರಿನ ಕ್ರಿ.ಶ. 1309ರ ಶಾಸನದಿಂದ, ಊರ ಗೌಡರು ಕೃಷಿ ಅಭಿವೃದ್ಧಿಗಾಗಿ ನೂರು ವರ್ಷದ ಶ್ರೇಣಿಕೃತ ತೆರಿಗೆ ಆಧಾರದ ಮೇಲೆ ಮಾದಾಪುರ ಗ್ರಾಮವನ್ನು ಮೂವರು ಗೌಡರಿಗೆ ದಾನಬಿಟ್ಟ ಅಪರೂಪದ ಅಂಶವನ್ನು ದಾಖಲಿಸಿದೆ.

ತಲಕಾಡು ಹಾಗೂ ಹೊಂಗಲವಾಡಿಯ ತೇದಿರಹಿತ ಶಾಸನಗಳು ಆಯಾಸ್ಥಳದ ದೇವಾಲಯಗಳ ಸೇವೆಗೆಂದು ದಾನಬಿಟ್ಟ ಅಂಶ ಸ್ಪಷ್ಟಪಡಿಸುತ್ತದೆ. ಇದೇ ಅರಸನಿಗೆ ಸೇರಿದ ಶೆಟ್ಟಹಳ್ಳಿಯ ಎರಡು ಶಾಸನಗಳಲ್ಲೊಂದು ಗಾಣದ ಬಗ್ಗೆ ಪ್ರಸ್ತಾಪಿಸಿದರೆ, ಇನ್ನೊಂದು ಶೆಟ್ಟಹಳ್ಳಿಯ ಕೆರೆಯ ಕೆಳಗಿದ್ದ ದಾನಭೂಮಿಯ ಬೆಲೆಯನ್ನು ಪಡೆದ ತಲಕಾಡಿನ ಮಲ್ಲಿಕಾರ್ಜುನ ದೇವರಿಗೆ ದಾನಬಿಟ್ಟಿರುವಂತೆ ತೋರುತ್ತದೆ. ಸುಮಾರು ಕ್ರಿ.ಶ. 13-14ನೇ ಶತಮಾನಕ್ಕೆ ಸೇರಿದ ಇನ್ನೂ ಅನೇಕ ಹೊಯ್ಸಳ ಶಾಸನಗಳು ತಾಲೂಕಿನಲ್ಲಿ ಲಭಿಸಿದ್ದರೂ, ಅರಸರ ಉಲ್ಲೇಖ ಇಲ್ಲವೇ ತೇದಿ ಇಲ್ಲದಿರುವುದರಿಂದ ಅವುಗಳನ್ನು ಹೊಯ್ಸಳ ಶಾಸನಗಳೆಂದು ಖಚಿತವಾಗಿ ಹೇಳಲಾಗದಿದ್ದರೂ ಸಾಂದರ್ಭಿಕ ವಿಚಾರಗಳಿಂದ ಗುರುತಿಸಬಹುದಾಗಿದೆ. ಕೆಲವೊಮ್ಮೆ ರಾಜಮನೆತನದ ಮಹಿಳೆಯರೂ ಕೂಡ ರಾಜ್ಯಪಾಲ ರಾಜನಿಯುಕ್ತರಾದ

ನಿದರ್ಶನಗಳಾವೆ. ವಿಷ್ಣುವರ್ಧನನ ರಾಣಿಯರಾದ ಬಲ್ಲಮದೇವಿ, ಆಸಂದಿ ೫೦೦ರ ಪ್ರಾಂತ್ಯದಲ್ಲೂ, ಶಾಂತಲಾದೇವಿ ಮಲಗಿ ಪ್ರಾಂತ್ಯದಲ್ಲೂ, ಎರಡನೇ ಬಲ್ಲಾಳನ ರಾಣಿ ಚೋಳಂಬದೇವಿ ಕುಂಬಳದಲ್ಲೂ ರಾಜ್ಯಪಾಲರಾಗಿ ಅಧಿಕಾರ ನಡೆಸಿದ್ದರೂ ಪ್ರಾಂತ್ಯಗಳ ರಾಜ್ಯಪಾಲರನ್ನು ರಾಜರು, ಪ್ರಭುಗಳು, ನಾಯಕರು, ಹೆಗ್ಗಡೆಯವರೆಂಬ ಹೆಸರಿನಿಂದ ಸಂಬೋಧಿಸಲಾಗುತ್ತಿತ್ತು. ವಂಶಪಾರಂಪರ್ಯ ಪದ್ಧತಿ ಇಲ್ಲಿಯೂ ರೂಢಿಯಲ್ಲಿತ್ತು.

ಹೊಯ್ಸಳ ರಾಜ ವೀರಸೋಮೇಶ್ವರನ ಕಾಲದಲ್ಲಿ ಕ್ರಿ.ಶ. 1239ರಲ್ಲಿ ತಲಕಾಡಿನಲ್ಲಿ ಗೋವಿಂದನಾಯಕನೆಂಬ ದಂಡನಾಯಕನು ಇದ್ದನು.[38] ದಂಡನಾಯಕನು ಈ ಪ್ರಾಂತ್ಯದ ಆಡಳಿತವನ್ನು ನಿರ್ವಹಿಸುತ್ತಿದ್ದು ಅವನಿಗೆ ಸಹಾಯಕರಾಗಿ ಅಧಿಕಾರಿ ವರ್ಗ ಇದ್ದಿತು.[39] ಹೊಯ್ಸಳರ ಕಾಲದಲ್ಲಿ ವಿವಿಧ ಶೈಕ್ಷಣಿಕ ಸಂಸ್ಥೆಗಳಿಗೆ ಭೂಮಿ ಅಥವಾ ಹಣವನ್ನು ದಾನಮಾಡಿದ ಬಗ್ಗೆ ಶಾಸನಗಳು ಬೆಳಕು ಚೆಲ್ಲುತ್ತವೆ.[40] ಮಠಗಳು ಮೊದ ಮೊದಲಿಗೆ ಕೇವಲ ಧಾರ್ಮಿಕ ಕಾರಣಗಳಿಗಾಗಿ ಹೆಸರು ಪಡೆದುದಾದರೂ ನಂತರ ವಿದ್ಯಾಕೇಂದ್ರಗಳಾಗಿ ಪ್ರಮುಖ ಪಾತ್ರ ವಹಿಸಿರುವುದು ಕಂಡುಬರುತ್ತದೆ. ಮಠದ ನಿರ್ವಹಣೆಗಾಗಿ ದಾನ ನೀಡಲಾಗುತ್ತಿದ್ದು ಭೂಮಿಯನ್ನು ಮಠದ ಭೂಮಿ ಎಂದು ಕರೆಯಲಾಗುತ್ತಿತ್ತು.[41] ಕ್ರಿ.ಶ. 1265ರ ಶಾಸನವೊಂದು ತಲಕಾಡಿನ ರಾಜೇಶ್ವರಂ ದೇಗುಲಕ್ಕೆ ಪಂಚಮಠಗಳ ಸ್ಥಾನಾಧಿಪತಿಗಳು ಮಹಾನೇರ ವೀದಾಂಗಣಪಳ್ಳಿ ಎಂಬ ಹಳ್ಳಿಯನ್ನು ದಾನ ನೀಡಿದ ಬಗ್ಗೆ ವಿವರಿಸುತ್ತದೆ.[42]

ಹೊಯ್ಸಳ ವಿಷ್ಣುವರ್ಧನನ ರಾಣಿಯಾದ ಶಾಂತಲಾಳನ್ನು ಶಾಸನಗಳಲ್ಲಿ ನಾಲ್ಕು ಸಮಯಗಳ ನಿರ್ಮಾಣದ ಕರ್ತೃ ಎಂದು ವರ್ಣಿಸಲಾಗಿದೆ. ಏಕೆಂದರೆ ಇವಳು ನಾಲ್ಕು ಧರ್ಮಗಳಾದ ಶೈವಧರ್ಮ, ವೈಷ್ಣವ ಧರ್ಮ, ಜೈನಧರ್ಮ ಮತ್ತು ಬೌದ್ಧ ಧರ್ಮಗಳನ್ನು ಸರಿ ಸಮಾನವಾಗಿ ಪೋಷಿಸಿದಳು.[43]

ಆರನೇ ವಿಕ್ರಮಾದಿತ್ಯನ ಅಭಿನವ ಸರಸ್ವತಿ ಎಂದು ಕರೆಯಲ್ಪಡುತ್ತಿದ್ದ ಹಿರಿಯ ರಾಣಿಯಾದ ಚಂದಲಾದೇವಿಯು ಶಿಕ್ಷಣದ ಪೋಷಕಿಯಾಗಿದ್ದಳು.[44] ಎರಡನೇ ನರಸಿಂಹನ ಸಹೋದರಿಯಾದ ಸಾವಳ ದೇವಿಯು ಕ್ರಿ.ಶ. 1237ರಲ್ಲಿ ಸೋಮನಾಥಪುರ ಪಟ್ಟಣವನ್ನು ಕಟ್ಟಿಸಿ ಶಿಕ್ಷಣದ ಕೇಂದ್ರವನ್ನಾಗಿ ಮಾಡಿದಳು.[45]

ತಿರುಮಕೂಡಲು ನರಸೀಪುರ ತಾಲೂಕಿನ ಶಿಲಾ ಶಾಸನದಲ್ಲಿ ವರದಿಯಾಗಿರುವಂತೆ ವಿಷ್ಣುವರ್ಧನನ ಕಾಲದಲ್ಲಿ ಬನ್ನೂರಿನಲ್ಲಿ ಸಂಜೆ ಮಠವೊಂದು ನೆಲೆಗೊಂಡದ್ದಾಗಿ ತಿಳಿದುಬರುತ್ತದೆ. ಈ ಮಠವು ಅಗ್ರಹಾರಕ್ಕೆ ಹೊಂದಿಕೊಂಡಂತೆ ಇತ್ತು.[46]

## ವಿಜಯನಗರ ಅರಸರು

ವಿಜಯನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ಮುನ್ನೂರು ವರ್ಷಗಳು ರಾಜ್ಯಭಾರ ಮಾಡಿದ ಸಂಗಮ, ಸಾಳುವ, ತುಳುವ, ಅರವೀಡು ವಂಶಗಳು ಪ್ರಮುಖವಾಗಿದ್ದವು. ಈ ವಂಶಗಳ ಹಲವಾರು ಶಿಲಾಶಾಸನಗಳು ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಶಕ್ಯವಾಗಿವೆ.[47] ಸಂಗಮ ವಂಶದ ಆಳ್ವಿಕೆಯು ಹಕ್ಕ, ಬುಕ್ಕ, ಕಂಪಣ, ಮಾರಪ್ಪ ಹಾಗೂ ಮುದ್ದಪ್ಪ ಸೋದರರೊಂದಿಗೆ ಆರಂಭಗೊಂಡಿತು. ಇವರ ಕಾಲದ್ದೆಂದು ಊಹಿಸಲಾಗಿರುವ ಹಿರಿಯೂರಿನ ವೀರಗಲ್ಲು ಶಾಸನದ ತೇದಿಯು ತಪ್ಪಾಗಿ ಉಲ್ಲೇಖಿತಗೊಂಡಿದ್ದು, ಅದರ ಕಾಲ ಕ್ರಿ.ಶ. 1354 ಎಂದು ತರ್ಕಿಸಲಾಗಿದೆ.[48] ಊರ ಆಣೆಗೆ ಕಳ್ಳರ ವಿರುದ್ಧ ಹೋರಾಡುತ್ತಾ ಮಡಿದ ರಾಮೋಜನಿಗಾಗಿ ಮಾದೋಜನು ಸ್ಥಾಪಿಸಿದ ಕ್ರಿ.ಶ. 1367ರ ಶಾಸನ ಬಹಳ ಹಾಳಾಗಿದ್ದು, ಮಹಾಪ್ರಧಾನ ಬಸವದಂಡನಾಯ್ಕ ಹಾಗೂ ಅಧಿಕಾರಿ ರಾಘವದೇವರಸರನ್ನಷ್ಟೆ ಉಲ್ಲೇಖಿಸುತ್ತದೆ. ಇಮ್ಮಡಿ ಹರಿಹರನ ಕಾಲಕ್ಕೆ ಸೇರಿದ್ದ ಭೈರಾಪುರದ ಕ್ರಿ.ಶ. 1392ರ ಶಾಸನ, ಆಲಗೂಡಿನ ಕೇದಾರನಾಥ ಭಟ್ಟನು ಜಯಭಕ್ತರಿಗೆ ಭೈರಾಪುರವನ್ನು 11 ಗದ್ಯಾಣದ ವಾರ್ಷಿಕ ಕಟ್ಟುಗುತ್ತಿಗೆ ಕರಾರಿನ ಮೇಲೆ ಅನುಭವಿಸಲು ಅನುಮತಿ ನೀಡಿದ ಅಂಶವನ್ನು ಒಳಗೊಂಡಿದೆ. ತಿರುಮಕೂಡಲು ನರಸೀಪುರದ 97ರ ತಾಮ್ರಶಾಸನ, ಚನ್ನಪಟ್ಟಣದ ಬಳಿಯ ಕೊಳತೂರು ಗ್ರಾಮವನ್ನು ಹರಿಹರಪುರ ಅಗ್ರಹಾರವನ್ನಾಗಿ ಮಾಡಿ 36 ವೃತ್ತಿಗಳನ್ನಾಗಿ ವಿಭಜಿಸಿ ಬ್ರಾಹ್ಮಣರಿಗೆ ದತ್ತಿಬಿಟ್ಟ ಅಂಶವನ್ನು ದಾಖಲಿಸುತ್ತದೆ. ಇದೇ ತೇದಿಯಲ್ಲಿ ನೀಡಲ್ಪಟ್ಟಿರುವ ಹೆಮ್ಮಿಗೆಯ ತಾಮ್ರ ಶಾಸನದಿಂದ ಹೆಮ್ಮಿಗೆ ಗ್ರಾಮಕ್ಕೆ ಹರಿಹರ ರಾಜೇಂದ್ರಪುರ ಎಂಬ ಅಭಿದಾನವನ್ನು ನೀಡಿ ಹಿರಿಯ ಮಾಧವಪುರದ ವರದಭಟ್ಟನಿಗೆ ದತ್ತಿಬಿಟ್ಟಿದ್ದ ಅಂಶ ವೇದ್ಯವಾಗುತ್ತದೆ.

ಒಂದನೆಯ ದೇವರಾಯನ ಆಳ್ವಿಕೆಗೆ ಸೇರಿದ ಕ್ರಿ.ಶ. 1420ರ ಚಿದರವಳ್ಳಿ ಶಾಸನ, ತಲಕಾಡು ನಾಡಿನ 42 ಪುರಗಳಲ್ಲಿ ಮುಖ್ಯವಾದ ಮಲ್ಲಿನಾಥಪುರ, ಸಿಂದೆಯಪುರ,

ರಾಮಗೊಂಡನಪುರ, ಚಿದರವಳ್ಳಿಪುರ, ಮುಂತಾದ ಪುರಗಳ ಸಮಸ್ತ ಪುರ ಭೋವಗಳು ಚಿದರಹಳ್ಳಿಯ ಸೋಮೇಶ್ವರ ದೇವರ ಸ್ಥಾನಿಕರಿಗೆ ಉಂಬಳಿ ನೀಡಿದ ಅಂಶವನ್ನು ದಾಖಲಿಸಿದೆ.[49] ಇಮ್ಮಡಿ ದೇವರಾಯನ ಆಳ್ವಿಕೆಗೆ ಸೇರಿದ ಕ್ರಿ.ಶ. 1426ರ ವಿಜಯಪುರ ಶಾಸನದಿಂದ ಕಿರುನಗರದ (ವಿಜಯಪುರ) ಅರ್ಕನಾಥ ದೇವರಿಗೆ ಅಧಿಕಾರಿ ಸೋಮರಸನು ಮಗ್ಗದೆರೆಯ ಬಾಬ್ತಿನಿಂದ ಒಂದು ಗದ್ಯಾಣವನ್ನು ದಾನ ಬಿಟ್ಟ ಅಂಶ ವೇದ್ಯವಾಗುತ್ತದೆ. ವಿರೂಪಾಕ್ಷನ ಆಡಳಿತಕ್ಕೆ ಸೇರಿದ ಕ್ರಿ.ಶ. 1482ರ ತಡಿಮಾಲಂಗಿ ಶಾಸನ ಕಲಿವರ್ಷವನ್ನು ಉಲ್ಲೇಖಿಸುತ್ತ ಸೋಮಣ್ಣ ನಾಯಕರು ತಾಯಿ ಸಾಯಮ್ಮನವರಿಗೆ ಕೊಟ್ಟಿದ್ದ ಉಂಬಳಿಯನ್ನು ಶ್ರೀರಂಗಪುರವಾದ ಮಾಲಂಗಿಯ ಜನಾರ್ಧನ ದೇವರ ಸೇವೆಗೆಂದು ದತ್ತಿಬಿಟ್ಟ ಅಂಶವನ್ನು ತಿಳಿಸುತ್ತದೆ.[50]

ಸಂಗಮರ ನಂತರ ಅಧಿಕಾರಕ್ಕೆ ಬಂದ ಸಾಳ್ವ ವಂಶದ ಇಮ್ಮಡಿ ನರಸಿಂಹ ಆಳ್ವಿಕೆಗೆ ಸೇರಿದ ಕ್ರಿ.ಶ. 1497ರ ಸೋಮನಾಥಪುರ ಶಾಸನ ಶಿಥಿಲಗೊಂಡಿದ್ದ ಸೋಮನಾಥಪುರ ಅಗ್ರಹಾರವನ್ನು ಅರಸನ ಆದೇಶದಂತೆ ಜೀರ್ಣೋದ್ಧಾರ ಮಾಡಿ ಹಲವು ಬ್ರಾಹ್ಮಣರಿಗೆ ದತ್ತಿಬಿಟ್ಟ ಅಂಶವನ್ನು ದಾಖಲಿಸಿದೆ. ಸಾಳ್ವರನ್ನು ಬದಿಗೊತ್ತಿ ವಿಜಯನಗರದಲ್ಲಿ ಅಧಿಕಾರ ಗದ್ದುಗೆಯನ್ನೇರಿದ ತುಳುವರಲ್ಲೇ ಪ್ರಖ್ಯಾತನಾದ ಕೃಷ್ಣದೇವರಾಯನು ದಕ್ಷಿಣದಲ್ಲಿದ್ದ ಉಮ್ಮತ್ತೂರು ಪಾಳೆಗಾರರನ್ನು ಸೋಲಿಸಿ ಸಾಳ್ವಗೋವಿಂದರಾಜನನ್ನು ಆ ಪ್ರಾಂತ್ಯದ ರಾಜ್ಯಪಾಲನನ್ನಾಗಿ ನೇಮಿಸಿದನು. ಇವನ ಆಳ್ವಿಕೆಗೆ ಸೇರಿದ ಕ್ರಿ.ಶ. 1514ರ ತಡಿಮಾಲಂಗಿಯ ಶಾಸನದಿಂದ ವಿಶ್ವಮೂರ್ತಿ ಗುರುರಾಯರು ಕಾಶಿಯಿಂದ ವಿಶ್ವೇಶ್ವರ ಲಿಂಗವನ್ನು ತಂದಿಲ್ಲಿ ಪ್ರತಿಷ್ಠಾಪಿಸಿ ಅದರ ಪೂಜಾವಿಧಿಗೆಂದು ನೆರೆಹೊರೆಯ ಗ್ರಾಮಗಳಲ್ಲಿ ಭೂಮಿಯನ್ನು ದಾನ ನೀಡಿದ ಅಂಶ ಗೊತ್ತಾಗುತ್ತದೆ. ಇದೇ ಅರಸನ ಕ್ರಿ.ಶ. 1516ರ ಮಾದಾಪುರ ಶಾಸನ ಮಹಾಪ್ರಧಾನ ಸಾಳ್ವ ಗೋವಿಂದರಾಜನು ಮಾದಾಪುರ ಗ್ರಾಮವನ್ನು ಉಮ್ಮತ್ತೂರ ನಂಜಯ್ಯ ಅರಸರಿಗೆ ವಿರೂಪಾಕ್ಷ ಸನ್ನಿದಿಯಲ್ಲಿ ದತ್ತಿ ನೀಡಿದ ಅಂಶವನ್ನು ದಾಖಲಿಸುತ್ತದೆ. ಹೊಸಪುರದ ಇನ್ನೊಂದು ಶಾಸನದಿಂದ ಇದೇ ಗೋವಿಂದರಾಜನು ಅಗಸ್ತೇಶ್ವರ ದೇವರ ಸೇವೆಗೆಂದು ಹೊಸಪುರ ಗ್ರಾಮವನ್ನು ದತ್ತಿ ನೀಡಿದ ಅಂಶ ಗೊತ್ತಾಗುತ್ತಿದ್ದು, ಕ್ರಿ.ಶ. 1521ರ ಕಲಿಯೂರು ಶಾಸನದಿಂದ ಗೋವಿಂದರಾಜನು ಮುಳ್ಳೂರು ಸ್ಥಳದ ಕಲಿಯೂರು ಗ್ರಾಮಕ್ಕೆ ಕೃಷ್ಣರಾಜಪುರ ಎಂದು ಮರುನಾಮಕರಣ ಮಾಡಿ ವಿವಿಧ ಗೋತ್ರದ ಬ್ರಾಹ್ಮಣರಿಗೆ ಬ್ರಹ್ಮದೇಯವಾಗಿ ದಾನ

ನೀಡಿದ ಅಂಶ ಗೊತ್ತಾಗುತ್ತದೆ. ಇದೇ ತೇದಿಯ ಸೋಸಲೆಯ ಎರಡು ತಾಮ್ರ ಶಾಸನಗಳು ವ್ಯಾಸತೀರ್ಥರ ಮಠಕ್ಕೆಂದು ದಾನ ನೀಡಿದ ಅಂಶವನ್ನು ದಾಖಲಿಸುತ್ತದೆ.

ಹೆಮ್ಮಿಗೆಯ ಕ್ರಿ.ಶ. 1526ರ ಶಾಸನದಿಂದ ಹಿರಿಯ ಮಾದಾಪುರದ ಲಕ್ಷ್ಮೀನಾಥ ಭಟ್ಟರಿಗೆ ತಾಯೂರು ಸ್ಥಳದಲ್ಲಿದ್ದ ಹೆಮ್ಮಿಗೆ ಗ್ರಾಮವನ್ನು ದಾನಬಿಟ್ಟ ಅಂಶವು ಗೊತ್ತಾಗುತ್ತದೆ. ತೊಟ್ಟವಾಡಿಯ ಕ್ರಿ.ಶ. 1527ರ ಶಾಸನದಿಂದ ಉಮ್ಮತ್ತೂರಿನ ಹೊನ್ನಕಳಸ ದೇವರಿಗೆ ತೊಟ್ಟವಾಡಿ ಗ್ರಾಮವನ್ನು ದತ್ತಿ ಬಿಟ್ಟ ಅಂಶ ವೇದ್ಯವಾಗುತ್ತದೆ. ಮರಡಿಪುರದ ಕ್ರಿ.ಶ. 1528ರ ಶಾಸನ ಸಾಳುವ ಗೋವಿಂದರಾಜ ಒಡೆಯನು ಮರಡಿಪುರ ಅಗ್ರಹಾರವನ್ನು ವೈದಿಕ ಗುರುಗಳಿಗೆ ದತ್ತಿಬಿಟ್ಟಿದ್ದನ್ನು ದಾಖಲಿಸಿದೆ. ಇದೇ ಸಾಮ್ರಾಟನಿಗೆ ಸೇರಿದ ತಿ.ನರಸೀಪುರ ಶಾಸನ ನರಸಿಂಹ ದೇವರಿಗೆ ನೀಡಿದ ಶಾಸನವನ್ನು ದಾಖಲಿಸಿದರೆ, ಇನ್ನೊಂದು ಶಾಸನ, ಶರಣಪ್ಪ ಸೆಟ್ಟಿಯು ನಿರ್ಮಿಸಿದ ಪಾರ್ವತಿ ದೇವಾಲಯ ದೇಚವಿಯ ಸೇವೆಗೆಂದು ಗೋವಿಂದರಾಜ ಒಡೆಯರು ವಿವಿಧ ಗ್ರಾಮಗಳಲ್ಲಿ ಭೂದಾನ ನೀಡಿದ ಅಂಶವನ್ನು ದಾಖಲಿಸುತ್ತದೆ. ಇವುಗಳಿಂದ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಈ ಭಾಗವು ಪ್ರಾಧಾನ್ಯತೆ ಪಡೆದಿದ್ದು, ಸಾಳುವ ಗೋವಿಂದರಾಜನೇ ಸುದೀರ್ಘ ಕಾಲ ಈ ಪ್ರಾಂತ್ಯದ ರಾಜ್ಯಪಾಲನಾಗಿದ್ದ ಅಂಶ ವೇದ್ಯವಾಗುತ್ತದೆ. ಕೃಷ್ಣದೇವರಾಯನಿಗೆ ಒಂದೂವರೆ ವರ್ಷದ ಮಗನಿದ್ದರೂ ತನ್ನ ಬಲಸೋದರ ಅಚ್ಯುತರಾಯನಿಗೆ ಪಟ್ಟಕಟ್ಟಿದ್ದನ್ನು ಅನೇಕರು ವಿರೋಧಿಸಿದರು.[51]

ಕೃಷ್ಣದೇವರಾಯನ ಮರಣಾನಂತರ ಅಧಿಕಾರಕ್ಕೆ ಬಂದ ಅವನ ಸೋದರ ಅಚ್ಯುತರಾಯನ ಕಾಲಕ್ಕೆ ಸೇರಿದ ಮೂಗೂರಿನ ಒಂದು ಶಾಸನ ದೇಶಿನಾಥ ದೇವರಿಗೆ ದತ್ತಿ ಬಿಟ್ಟಿದ್ದನ್ನು ದಾಖಲಿಸಿದರೆ, 1534ರ ಇನ್ನೊಂದು ಶಾಸನ, ಅದೇ ದೇವರಿಗೆ ಸ್ಥಳೀಯ ಅಧಿಕಾರಿ ಶಂಕಣ್ಣನ ಅನುಮತದೊಂದಿಗೆ ದೇವಣ್ಣನು ದತ್ತಿ ಬಿಟ್ಟಿದ್ದನ್ನು ದಾಖಲಿಸುತ್ತದೆ. ಇದೇ ತೇದಿಯ ಭೈರಾಪುರ ಶಾಸನ ಲಿಂಗಣ್ಣನ ವೀರಗಲ್ಲು ಶಾಸನವಾಗಿದೆ. ಬನ್ನೂರಿನ 1541ರ ಶಾಸನದಿಂದ ಮಹಾಪ್ರಧಾನ ವರದಪ್ಪನಾಯಕನ ಆದೇಶದಂತೆ ತಮ್ಮಣ್ಣನಾಯಕನು, ಬನ್ನೂರಿನ ಹನುಮಂತೇಶ್ವರ ದೇವರಿಗೆ ದಿವ್ಯರಥ, ಉಮಾಸ್ಕಂದ–ವಿಘ್ನೇಶ್ವರ ದೇವತಾಮೂರ್ತಿಗಳನ್ನು ಮಾಡಿಸಿ ರಥೋತ್ಸವದ ಆಚರಣೆಗೆಂದು ಭೂ ದಾನ ನೀಡಿದ ಅಂಶ ಗೊತ್ತಾಗುತ್ತದೆ. ಅಚ್ಚುತರಾಯನ ನಂತರ ಅಧಿಕಾರಕ್ಕೆ ಬಂದ ಸದಾಶಿವರಾಯನು[52] ಕೃಷ್ಣದೇವರಾಯನ

ಅಳಿಯ ರಾಮರಾಯನ ಕೈಗೊಂಬೆಯಾಗಿದ್ದು, ಸಾಮ್ರಾಜ್ಯವು ಆರಂಭದಲ್ಲಿ ಏಳಿಗೆಯನ್ನು ಕಂಡರೂ ಅಂತಿಮವಾಗಿ ಕ್ರಿ.ಶ. 1565ರ ರಕ್ಕಸಗಿ-ತಂಗಡಗಿ ಯುದ್ಧದಲ್ಲಿ ಹೀನಾಯ ಸೋಲನ್ನುಣ್ಣಬೇಕಾಯಿತು. ಇವನ ಆಳ್ವಿಕೆಗೆ ಸೇರಿದ ಸೋಮನಾಥಪುರದ 1550ರ ಶಾಸನವು ಅರವೀಡು ವಂಶದ ಅಹೋಬಲರಾಜ ಮಹಾಅರಸನು ಸೋಮನಾಥಪುರದ ಚನ್ನಕೇಶವ ಗುಡಿಯ ಈಶಾನ್ಯ ಭಾಗದಲ್ಲಿದ್ದ ಪಂಚಲಿಂಗ ದೇವರ್ಗೆ ದಾನಬಿಟ್ಟ ಅಂಶವನ್ನು ದಾಖಲಿಸುತ್ತಾ, ಸೋಮನಾಥಪುರವು ವಶಿಷ್ಠಾಶ್ರಮವಿದ್ದ ಪುಣ್ಯಕ್ಷೇತ್ರ ಆಗಿತ್ತೆಂದೂ ಉಲ್ಲೇಖಿಸುತ್ತದೆ. ತಿರುಮಕೂಡಲು ನರಸೀಪುರದ ಕ್ರಿ.ಶ. 1556ರ ಶಾಸನದಿಂದ ರಾಯಸದ ವೆಂಕಟಾದ್ರಿಯು ತಿರುಮಕೂಡಲು ಅಗಸ್ತೇಶ್ವರ ದೇವರ ಪೂಜೆ ರಥೋತ್ಸವಗಳಿಗೆ, ಹನುಮಂತೇಶ್ವರ ಹಾಗೂ ಆದಿಗುಂಜಿಯ ನರಸಿಂಹದೇವರ ತಿರುವಿಡಿಯಾಟಕ್ಕೆಂದು ಶ್ರೀರಂಗಪಟ್ಟಣದ ಸ್ಥಳಕ್ಕೆ ಸೇರಿದ ಗ್ರಾಮವೊಂದನ್ನು ದಾನ ಬಿಟ್ಟ ಅಂಶ ಗೊತ್ತಾಗುತ್ತದೆ. ಆದರೆ ಇದೇ ತೇದಿಯ ತುಂಬಲದ ಇನ್ನೊಂದು ಶಾಸನದಿಂದ ದಾನ ನೀಡಿದ ಆ ಗ್ರಾಮವು ತುಂಬಲ ಎಂಬ ಅಂಶ ಸ್ಪಷ್ಟವಾಗುತ್ತದೆ.

ವಿಜಯನಗರ ಸಾಮ್ರಾಜ್ಯ ಪತನಾನಂತರ (ಕ್ರಿ.ಶ. 1565) ರಾಜಧಾನಿ ವಿಜಯನಗರವು ಅಂತಃಕಲಹ, ದರೋಡೆ, ಬಾಹ್ಯ ಲೂಟಿಗಳಿಗೆ ಬಲಿಯಾಯಿತು. ಪೆನುಗೊಂಡೆಯು ವಿಜಯನಗರದರಸರ ರಾಜಧಾನಿಯಾಯಿತು. ಅನಂತರ ಕ್ರಿ.ಶ. 1570ರಲ್ಲಿ ಅಧಿಕಾರ ಗದ್ದುಗೆ ಏರಿದ ಅರವೀಡುಗಳ ಆಡಳಿತಾವಧಿಯಲ್ಲಿ ತಿರುಮಲ, ಒಂದನೆಯ ಶ್ರೀರಂಗ, ಇಮ್ಮಡಿ ವೆಂಕಟ, ಇಮ್ಮಡಿ ಶ್ರೀರಂಗ, ರಾಮದೇವ, ಮುಮ್ಮಡಿ ವೆಂಕಟಾದ್ರಿ ಹಾಗೂ ನಾಲ್ವಡಿ ಶ್ರೀರಂಗರ ಕಾಲಕ್ಕೆ ಸೇರಿದ ಶಾಸನಗಳು ತಾಲೂಕಿನಲ್ಲಿ ವಿರಳವೆಂದೇ ಹೇಳಬೇಕು. ಆದರೂ ತಾಲೂಕಿನ ಕ್ರಿ.ಶ. 1568ರ ಮುಡುಕನಪುರ ಶಾಸನದಲ್ಲಿ ಜಗದೇವರಾಯ ಒಡೆಯನ ಮಗ ದೇವರಾಯ ಒಡೆಯನು ಆ ಗ್ರಾಮವನ್ನು ಪಲ್ಲಕ್ಕಿ ಉಂಬಳಿಯಾಗಿ ದಾನ ನೀಡುವ ಸಂದರ್ಭದಲ್ಲಿ ಇಮ್ಮಡಿ ವೆಂಕಟಾದ್ರಿಯ ಉಲ್ಲೇಖವಿದೆ. ಇದೇ ರೀತಿ ತಿರುಮಕೂಡಲು ನರಸೀಪುರದ ಕ್ರಿ.ಶ. 1625ರ ತಾಮ್ರಶಾಸನದಲ್ಲಿ ಮೈಸೂರು ಅರಸ ಐದನೆಯ ಚಾಮರಾಜನು ಇಮ್ಮಡಿ ವೆಂಕಟಾದ್ರಿಯ ಮರಣದ ನಂತರವೂ ಅವನನ್ನು ಗೌರವಾರ್ಥವಾಗಿ ಸ್ಮರಿಸುತ್ತಾ ತಮ್ಮ ಹೆಸರಲ್ಲಿ ಚಾಮರಾಜಸಮುದ್ರ ಎಂಬ ಅಗ್ರಹಾರ ನಿರ್ಮಿಸಿ ದಾನ ಬಿಟ್ಟಿರುವುದು ಉಲ್ಲೇಖಾರ್ಹ. ನಾಲ್ವಡಿ ಶ್ರೀರಂಗರಾಯನು ವೇಲುಪುರಿ (ಬೇಲೂರು)ಯಿಂದ ಆಳುತ್ತಿದ್ದಾಗ ಶ್ರೀಪಾದಸ್ವಾಮಿ ಮಠದ ಗೋಪಾಲಕೃಷ್ಣಸ್ವಾಮಿಯ ಸೇವೆಗೆಂದು ಗ್ರಾಮಗಳನ್ನು ದತ್ತಿ ಬಿಟ್ಟ ಆಂಶವನ್ನು ಸೋಸಲೆ

ಮಠದಲ್ಲಿರುವ ಕ್ರಿ.ಶ. 1662 ಹಾಗೂ ಕ್ರಿ.ಶ. 1664ರ ತಾಮ್ರಶಾಸನಗಳು ದಾಖಲಿಸಿವೆ. ವಿಜಯನಗರ ಸಾಮ್ರಾಜ್ಯವು ಅಶಕ್ತಗೊಳ್ಳುತ್ತಿದ್ದಂತೆ ಶ್ರೀರಂಗಪಟ್ಟಣ, ಉಮ್ಮತ್ತೂರು ಪರಿಸರದಲ್ಲಿ ಸ್ಥಳೀಯ ಶಕ್ತಿಗಳು ಪ್ರಬಲಗೊಂಡ ಅಂಶ ಶಾಸನಗಳಿಂದ ವೇದ್ಯವಾಗುತ್ತದೆ. ಅದರಂತೆ ತಿರುಮಕೂಡಲು ನರಸೀಪುರ ತಾಲೂಕು ಪ್ರದೇಶವು ಹದಿನಾಡು ಹಾಗೂ ಮೈಸೂರು ಅರಸರ ಆಡಳಿತಕ್ಕೆ ಒಳಪಟ್ಟಿತು.

14ನೇ ಶತಮಾನದ ಉತ್ತರಾರ್ಧದಲ್ಲಿ ತಲಕಾಡು ವಿಜಯನಗರದ ಅರಸರಿಗೆ ಸೇರಿತ್ತು. ಕ್ರಿ.ಶ.1384ರಲ್ಲಿ ಸಾಳ್ವ ಮನೆತನದ ರಾಮದೇವ ತಲಕಾಡಿನಲ್ಲಿ ಅಧಿಕಾರಿಯಾಗಿ ರಾಜ್ಯಭಾರ ಮಾಡುತ್ತಿದ್ದು, ಅವನು ಮುಸ್ಲಿಂರೊಂದಿಗೆ ಯುದ್ಧಮಾಡಿ ಮರಣ ಹೊಂದಿದನೆಂದು ತಿಳಿದು ಬರುತ್ತದೆ. ಹಾಗೆಯೇ 2ನೇ ದೇವರಾಯನ ಆಳ್ವಿಕೆಯಲ್ಲಿ ಇಲ್ಲಿ ಅಧಿಕಾರಿಯಾಗಿದ್ದ ಪೆರುಮಾಳ ದೇವರಸನು ಕೀರ್ತಿನಾರಾಯಣ ದೇವಾಲಯಕ್ಕೆ ಧನ ಸಹಾಯ ಮಾಡಿದನೆಂದನೂ ಸಹ ತಿಳಿದು ಬರುತ್ತದೆ.

### ಹದಿನಾಡು ಅರಸರು

ವಿಜಯನಗರದ ಸಾಮಂತರಾಗಿದ್ದ ಇವರು ಯಳಂದೂರನ್ನು ರಾಜಧಾನಿ ಯನ್ನಾಗಿಸಿಕೊಂಡು ಯಳಂದೂರು ಹಾಗೂ ತಿರುಮಕೂಡಲು ನರಸೀಪುರ ತಾಲೂಕು ಪ್ರದೇಶಗಳ ಮೇಲೆ ಭಾಗಶಃ ನಿಯಂತ್ರಣ ಹೊಂದಿದ್ದರು. ಈ ಮನೆತನಕ್ಕೆ ಸೇರಿದ ದೀಪರಾಜ (ದೇವರಸ), ರಾಮರಾಜ, ತಿರುಮಲ ಹಾಗೂ ಮುದ್ದುರಾಜರ ಕಾಲದ ಸುಮಾರು 12 ಶಾಸನಗಳು ಮೈಸೂರು ಜಿಲ್ಲೆಯಲ್ಲಿ ಲಭಿಸಿವೆ. ಅವುಗಳಲ್ಲಿ ಮೂಗೂರಿನ ಕ್ರಿ.ಶ.1628ರ ಶಾಸನ ರಾಮರಾಜನ ಸೋದರ ಮಗನಾದ ತಿರುಮಲ ನಾಯಕನಿಂದ ಭೂದಾನ ಪಡೆದ ಚಿಕ್ಕೊಡೆಯನು ದೇಶಿನಾಥ ದೇವರಿಗೆ ಅದನ್ನು ಮರುದಾನ ಮಾಡಿದ್ದನ್ನು ದಾಖಲಿಸಿದೆ.

### ಮೈಸೂರು ಅರಸರು

ಯದುಕುಲದವರೆಂದೂ, ದ್ವಾರವತಿಪುರವರಾಧೀಶ್ವರರೆಂದೂ ತಮ್ಮನ್ನು ಕರೆದು ಕೊಳ್ಳುವ ಒಡೆಯರ ರಾಜಮನೆತನ, ಮೈಸೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ.1399 ರಿಂದ (ಕ್ರಿ.ಶ.1610-1799ರವರೆಗೆ ಶ್ರೀರಂಗಪಟ್ಟಣ) ಕ್ರಿ.ಶ.1947ರವರೆಗೆ

ರಾಜ್ಯಭಾರ ನಡೆಸಿತಾದರೂ[53] ಆರಂಭದ ಅರಸರಾದ ವಿಜಯ, ಒಂದನೆಯ ಚಾಮರಾಜ, ಒಂದನೆಯ ತಿಮ್ಮರಾಜ, ಎರಡನೆಯ ಚಾಮರಾಜ, ಮುಮ್ಮಡಿ ಬೆಟ್ಟದ ಚಾಮರಾಜ ಒಡೆಯರು, ಇಮ್ಮಡಿ ತಿಮ್ಮರಾಜ ಹಾಗೂ ನಾಲ್ವಡಿ ಬೋಳ ಚಾಮರಾಜ ಕಾಲಕ್ಕೆ ಸೇರಿದ ಶಾಸನಗಳು ತಾಲೂಕಿನಲ್ಲಿ ಲಭ್ಯವಿಲ್ಲ. ಆದರೆ ಮೈಸೂರು ಅರಸರ ವಂಶಾವಳಿಯಲ್ಲಿ ಈ ಹೆಸರುಗಳು ಲಭಿಸುತ್ತವೆ. ಇದಕ್ಕೆ ಕಾರಣ ಅವರ ಆಡಳಿತವು ತೆರಕಣಾಂಬಿಯ ಆಸುಪಾಸಿನ ಪ್ರದೇಶಕ್ಕೆ ಸೀಮಿತವಾಗಿದ್ದಂತೆ ತೋರುತ್ತದೆಂದು ಸಿ.ಹಯವದನರಾವ್ ಅಭಿಪ್ರಾಯಪಡುತ್ತಾರೆ. ಈ ಅವಧಿಯಲ್ಲಿ ಕಳಲೆ, ಮೂಗೂರು, ಉಮ್ಮತ್ತೂರು, ತಗಡೂರು ಹಾಗೂ ಹುರಗಳಲ್ಲೂ ಸ್ಥಳೀಯ ಪಾಳೇಗಾರರು ಆಳುತ್ತಿದ್ದರು. ಯದುರಾಯನು ಕ್ರಿ.ಶ. 14ನೇ ಶತಮಾನದ ಅಂತ್ಯದಲ್ಲಿ ಕಾರುಗಳ್ಳಿ ಪಾಳೇಗಾರನನ್ನು ಸೋಲಿಸಿದನು.[53] ಮೈಸೂರು ಅರಸ ನಾಲ್ಕನೇ ಬೋಳಚಾಮರಾಜನು ಕಾರುಗಹಳ್ಳಿ, ತಲಕಾಡು, ಕನ್ನಂಬಾಡಿ ಮುಂತಾದ ಪಾಳೇಗಾರರನ್ನು ಸೋಲಿಸಿದ್ದನಲ್ಲದೇ ವೆಂಕಟಾದ್ರಿಯ ಸೇನೆಯನ್ನು ಎದುರಿಸಿದನೆಂದು ಹೇಳಲಾಗುತ್ತದೆ. ಮುಂದೆ ಬೆಟ್ಟದ ದೇವರಾಜನ ನಂತರ ಅಧಿಕಾರಕ್ಕೆ ಬಂದ ಒಂದನೆಯ ರಾಜಒಡೆಯನು ಮೈಸೂರು ಅರಸರ ಆಳ್ವಿಕೆಗೆ ಭದ್ರಬುನಾದಿಯನ್ನು ಹಾಕಿದನು. ಇವನು ರಂಗಸಮುದ್ರ ಹಾಗೂ ಸುತ್ತಮುತ್ತಲಿನ 12 ಹಳ್ಳಿಗಳನ್ನು ಕ್ರಿ.ಶ. 1586ರಲ್ಲೂ, ಮುಳ್ಳೂರನ್ನು ಕ್ರಿ.ಶ. 1591ರಲ್ಲಿ, ಕಾರುಗಹಳ್ಳಿ ಕೋಟೆಯನ್ನು ಕ್ರಿ.ಶ.1595ರಲ್ಲೂ ವಶಪಡಿಸಿಕೊಳ್ಳುವ ಮೂಲಕ ಶ್ರೀರಂಗಪಟ್ಟಣದ ಪ್ರಾಂತ್ಯಾಧಿಕಾರಿಯಾದ ತಿರುಮಲನ ವಿರೋಧಿಯಾದನು. ಮಿಗಿಲಾಗಿ ರಾಜ ಒಡೆಯನು ಸೋಸಲೆ (ಕ್ರಿ.ಶ. 1606) ಬನ್ನೂರು (ಕ್ರಿ.ಶ. 1607) ಮುಂತಾದವನ್ನು ಗೆದ್ದು ಕ್ರಿ.ಶ. 1610ರ ವೇಳೆಗೆ ಪ್ರಬಲಗೊಂಡು ಶ್ರೀರಂಗಪಟ್ಟಣದ ಗದ್ದುಗೆಗಾಗಿ ತಿರುಮಲನೊಂದಿಗೆ ಕದನಕ್ಕಿಳಿದನು. ಅವನನ್ನು ಹೊರದಬ್ಬುವ ಮೂಲಕ ವಿಜಯನಗರದ ಅರಸ ವೆಂಕಟಾದ್ರಿಯ ವಿಶ್ವಾಸಕ್ಕೂ ಪಾತ್ರನಾದನು. ಈ ಅಂಶವನ್ನು ನರಸೀಪುರದ ಕ್ರಿ.ಶ. 1622ರ ಶಾಸನದಲ್ಲಿ ಬರುವ ರಾಜ ಒಡೆಯರಿಗೆ ಉಮ್ಮತ್ತೂರು ಶ್ರೀರಂಗಪಟ್ಟಣಗಳನ್ನು ವೆಂಕಟಪತಿರಾಯರು ಕಣಾಚಿಯಾಗಿ (ಉಂಬಳಿ) ನೀಡಿದ ಉಲ್ಲೇಖ ಪುಷ್ಟೀಕರಿಸುತ್ತದೆ. ರಾಜ ಒಡೆಯರ ಕೈಯಲ್ಲಿ ಸೋತ ತಿರುಮಲನು ಮಡಿದು, ಮಾಲಂಗಿಗೆ ತೆರಳಿದ್ದ ಅವನ ಮಡದಿ ಅಲಮೇಲಮ್ಮನನ್ನು ಒಡವೆಗಳಿಗಾಗಿ ರಾಜ ಒಡೆಯನು ಪೀಡಿಸಿ ದುಂಬಾಲು ಬಿದ್ದಾಗ, ಅದನ್ನು ನೀಡದೆ, 'ತಲಕಾಡು ಮರಳಾಗಿ ಮಾಲಂಗಿ ಮಡುವಾಗಿ ಮೈಸೂರು ಅರಸರಿಗೆ ಮಕ್ಕಳಾಗದಿರಲಿ' ಎಂದು ಶಪಿಸಿ

ಕಾವೇರಿ ಮಡುವಿಗೆ ಧುಮಿಕಿ, ಸತ್ತಳೆಂದು ಹೇಳಲಾಗುತ್ತದೆ. ಅವಳ ಶಾಪದಂತೆ ಮೈಸೂರು ಅರಸರಲ್ಲಿ ದತ್ತಕ ಅರಸರಿಗೆ ಮಾತ್ರ ಮಕ್ಕಳಾಗುತ್ತದೆಂಬ ಅಂಶವು ಈಗಲೂ ಉಳಿದುಕೊಂಡು ಬಂದಿದೆ. ಹೀಗೆ ಶ್ರೀರಂಗಪಟ್ಟಣದಿಂದಾಳಲಾರಂಭಿಸಿದ ರಾಜ ಒಡೆಯನು ತೆರಕಣಾಂಬಿ, ಉಮ್ಮತ್ತೂರುಗಳನ್ನು ವಶಪಡಿಸಿಕೊಂಡನಲ್ಲದೆ ತಲಕಾಡು, ಮೂಗೂರು, ಕಳಲೆ, ಹುಲ್ಲಹಳ್ಳಿ ಮುಂತಾದ ಪಾಳೆಯಗಾರರಿಗೂ ಕಪ್ಪ ವಿಧಿಸಿದನೆಂದು ಹೇಳಲಾಗುತ್ತದೆ. ಅಲ್ಲದೆ ವಿಜಯನಗರದಲ್ಲಿ ನಡೆಯುತ್ತಿದ್ದ ದಸರಾ ಮಾದರಿಯಲ್ಲಿ ಶ್ರೀರಂಗಪಟ್ಟಣದಲ್ಲೂ ಈತನೇ ದಸರಾ ಉತ್ಸವವನ್ನು ಆರಂಭಿಸಿದನು.

ಇವನ ನಂತರ ಅಧಿಕಾರಕ್ಕೆ ಬಂದ ಐದನೆಯ ಚಾಮರಾಜನ ಆಳ್ವಿಕೆಗೆ (ಕ್ರಿ.ಶ. 1618–1637) ಸೇರಿದ 1622ರ ತಿರುಮಕೂಡಲು ನರಸೀಪುರ ತಾಮ್ರಶಾಸನದಿಂದ ಐದನೆಯ ಚಾಮರಾಜನು ಉಮ್ಮತ್ತೂರು ಚಾವಡಿಗೆ ಸೇರಿದ ಮೂಗೂರು ಸ್ಥಳದ ತಾಯೂರು ನಾಡಲ್ಲಿನ ನವಿಲೂರು–ಆಲದೂರು ಗ್ರಾಮಗಳನ್ನು ಒಗ್ಗೂಡಿಸಿ ಚಾಮರಾಜಸಮುದ್ರ ಎಂದು ಹೆಸರಿಟ್ಟು ಅದನ್ನು 41 ವೃತ್ತಿಗಳನ್ನಾಗಿ ವಿಭಜಿಸಿ, ಗುಂಜಾನರಸಿಂಹಸ್ವಾಮಿಯ ಸೇವೆಯೂ ಸೇರಿದಂತೆ 33 ಬ್ರಾಹ್ಮಣರಿಗೆ ದಾನ ಬಿಟ್ಟ ಅಂಶವು ತಿಳಿಯುತ್ತದೆ.

ಇಮ್ಮಡಿ ರಾಜಒಡೆಯನ ನಂತರ ಅಧಿಕಾರಕ್ಕೆ ಬಂದ ಒಂದನೆಯ ಕಂಠೀರವ ನರಸರಾಜನ ಆಳ್ವಿಕೆಯಲ್ಲಿ ಬಿಜಾಪುರದ ದಾಳಿಯ ಬಿಸಿ ಸಂಸ್ಥಾನಕ್ಕೂ ತಟ್ಟಿತು. ರಣದುಲ್ಲಾಖಾನ್ ಹಾಗೂ ಷಹಾಜಿ ದಂಡನಾಯಕತ್ವದಲ್ಲಿ ಬಿಜಾಪುರದ ಸೇನೆಯು ಬೆಂಗಳೂರುವರೆಗೂ ಮುನ್ನಡೆ ಸಾಧಿಸಿತು. ಯಲಹಂಕ ನಾಡಪ್ರಭು ಕೆಂಪೇಗೌಡ ಬೆಂಗಳೂರು ತ್ಯಜಿಸಿ ಮಾಗಡಿಗೆ ತೆರಳಿದರೆ, ಷಹಾಜಿಗೆ ಬೆಂಗಳೂರನ್ನು ಜಹಾಗೀರಾಗಿ ನೀಡಲಾಯಿತು. ಏತನ್ಮಧ್ಯೆ ಕಪ್ಪ ನೀಡುವ ಮೂಲಕ ಬಿಜಾಪುರದೊಂದಿಗೆ ಕಂಠೀರವ ನರಸರಾಜನು ಸಂಧಾನ ಮಾಡಿಕೊಂಡನು.

ಇವನ ನಂತರ ದೊಡ್ಡ ದೇವರಾಯನು ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಗೆ ಸೇರಿದ ತಲಕಾಡಿನ ಕ್ರಿ.ಶ. 1663ರ ತಾಮ್ರಶಾಸನ, ನಾಗಮಂಗಲ ಸ್ಥಳದ ಹಳ್ಳಿಕೇರಿಯನ್ನು ಅಗ್ರಹಾರವನ್ನಾಗಿಸಿ ದಾನ ಬಿಟ್ಟ ಅಂಶವನ್ನು ತಿಳಿಸಿದರೆ, ಕ್ರಿ.ಶ. 1673ರ ಟಿ. ಬೆಟ್ಟಹಳ್ಳಿ (ಮುಡುಕುತೊರೆ) ಶಾಸನ, ಬೆಟ್ಟಹಳ್ಳಿ ಮಲ್ಲಿಕಾರ್ಜುನ ದೇವರಿಗೆ ದೇವರಾಜಪುರ ನಾಮಾಂಕಿತ

ಬೆಟ್ಟಹಳ್ಳಿ ಗ್ರಾಮವನ್ನು ದಾನಬಿಟ್ಟಿದ್ದನ್ನು ದಾಖಲಿಸಿದೆ. ಅನಂತರ ಅವನ ದಾಯಾದಿಯಾದ ಚಿಕ್ಕದೇವರಾಜ ಒಡೆಯನು ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಯು ಮೊಘಲ್-ಮರಾಠ ದಾಳಿಗಳನ್ನು ಕಂಡಿತು. ಇವನು ಔರಂಗಜೇಬನಿಗೆ ಕಪ್ಪವಾಗಿ ಮೂರು ಲಕ್ಷ ವರಾಹ ನೀಡಿ, ಬೆಂಗಳೂರು ಜಹಾಗೀರನ್ನು ಪಡೆದನು. ಆಡಳಿತ ಸುಧಾರಣೆ ತರಲು ಅಠಾರ ಕಛೇರಿಯನ್ನು ಆರಂಭಿಸಿ ಅಂಚೆ ವ್ಯವಸ್ಥೆಗೆ ನಾಂದಿ ಹಾಡಿದನು. ಉಕ್ಕಲಗೆರೆಯ ಕ್ರಿ.ಶ. 1676ರ ಶಾಸನ ಸೋಮನಾಥಪುರದಲ್ಲಿ ಕಂಠೀರವ ನರಸರಾಜನು ನಿರ್ಮಿಸಿದ ಪಟ್ಟಾಭಿರಾಮ ದೇವರಿಗೆ ಉಕ್ಕಲಗೆರೆಯ ಗ್ರಾಮವನ್ನು ದಾನ ನೀಡಿದ್ದನ್ನು ದಾಖಲಿಸಿದೆ. ಏತನ್ಮಧ್ಯೆ, ತಲಕಾಡಿನ ಕ್ರಿ.ಶ. 1676ರ ಶಾಸನದಿಂದ ಅರಸನ ಕಾರ್ಯಕರ್ತನಾದ ಕೊಟ್ಟೂರಯ್ಯನು ತಲಕಾಡಿನಲ್ಲಿ ಮಲ್ಲೇಶ್ವರನನ್ನು ಪ್ರತಿಷ್ಠಾಪಿಸಿದ್ದನ್ನು ದಾಖಲಿಸಿದೆ. ಇವನ ನಂತರ ಬಂದ ಇಮ್ಮಡಿ ಕಂಠೀರವ ನರಸರಾಜನು ಕಿವುಡನಿದ್ದು, ಔರಂಗಜೇಬನಿಗೆ ಕಪ್ಪ ನೀಡಲು ಒಪ್ಪಿ ಅಧಿಕಾರದಲ್ಲಿ ಮುಂದುವರೆದನು. ಇವನ ನಂತರ ಬಂದ ಬಾಲಕ ದೊಡ್ಡಕೃಷ್ಣರಾಜನ ಕಾಲದಿಂದ ಕಳಲೆ ಮನೆತನದ ದಳವಾಯಿಗಳ ದರ್ಬಾರು ಮುಂದುವರಿಯಿತು. ಈ ಅವಧಿಗೆ ಸೇರಿದ ತಿರುಮಕೂಡಲು ನರಸೀಪುರ ಶಾಸನ, ಮೂಗೂರು ಪ್ರಭುಗಳ ರಾಣಿ ಚಾಮಮ್ಮಣಿಯ ಮಂಟಪ ಸೇವೆಯನ್ನು ದಾಖಲಿಸಿದರೆ, ತಿರುಮಕೂಡಲು ನರಸೀಪುರದ ಕ್ರಿ.ಶ. 1749ರ ತಾಮ್ರ ಶಾಸನ ದಳವಾಯಿ ಅಗ್ರಹಾರದ ಸ್ಥಾಪನೆ ಬಗ್ಗೆ ದಾಖಲಿಸುತ್ತದೆ.

### ಹೈದರಾಲಿ

ದಳವಾಯಿ ನಂಜರಾಜಯ್ಯನ ವಿಶ್ವಾಸಕ್ಕೆ ಪಾತ್ರನಾಗುವ ಮೂಲಕ ಸಂಸ್ಥಾನದಲ್ಲಿ ಸೈನಿಕರಾಗಿ ಸೇವೆಯನ್ನಾರಂಭಿಸಿದ ಹೈದರಾಲಿಯು ದೇವನಹಳ್ಳಿ ಹಾಗೂ ಜಿಂಜಿಯುದ್ಧಗಳಲ್ಲಿ ಶೌರ್ಯ ಮೆರೆದು ಕ್ರಿ.ಶ. 1755ರಲ್ಲಿ ದಿಂಡಿಗಲ್ಲಿನ ಫೌಜುದಾರನಾದನು. ಮುಂದೆ ಕ್ರಿ.ಶ. 1754ರಲ್ಲಿ ರಾಜಧಾನಿ ಶ್ರೀರಂಗಪಟ್ಟಣಕ್ಕೆ ಬಂದು ಸೈನಿಕ ಬಂಡಾಯವನ್ನು ನಿಯಂತ್ರಿಸಿ, ದಳವಾಯಿ ನಂಜರಾಜಯ್ಯನನ್ನು ಪದಚ್ಯುತಿಗೊಳಿಸಿ ತಾನೇ ದಳವಾಯಿಯಾದನು.[54] ಮುಂದೆ ಕ್ರಿ.ಶ.1761ರ ವೇಳೆಗೆ ಮೈಸೂರು ಅರಸರು ಹೆಸರಿಗಷ್ಟೇ ಉಳಿದು, ಹೈದರಾಲಿ ಸರ್ವಾಧಿಕಾರಿಯಾದನು. ಮೈಸೂರು ರಾಜ್ಯವನ್ನು ನಾಲ್ಕು ದಿಕ್ಕಿನಲ್ಲೂ ವಿಸ್ತರಿಸಿದನಾದರೂ, ಅಂತಿಮವಾಗಿ ಬೆನ್ನುಫಣೆಯಿಂದ ಬಳಲುತ್ತಿದ್ದರೂ ಕದನದಲ್ಲಿ ತೊಡಗಿದ್ದ ಹೈದರ್ ಆರ್ಕಾಡ್ ಬಳಿಯ ನರಸಿಂಗಪೇಟೆಯಲ್ಲಿ ನಿಧನ ಹೊಂದಿದನು.

## ಟಿಪ್ಪುಸುಲ್ತಾನ್

ಹೈದರಾಲಿಯ ಮಗನಾದ ಇವನು ಶೌರ್ಯಕ್ಕೆ ಹೆಸರಾಗಿದ್ದು, ಮೈಸೂರಿನ ಹುಲಿ ಎಂದೇ ಪ್ರಖ್ಯಾತನಾಗಿದ್ದನು. ಬ್ರಿಟೀಷರ ವಿರುದ್ಧ 3ನೇ ಆಂಗ್ಲೋ-ಮೈಸೂರು ಯುದ್ಧವನ್ನು ಕೈಗೊಂಡ ಇವನು ಸೋಲು, ಅವಮಾನಗಳನ್ನು ಅನುಭವಿಸಬೇಕಾಯಿತು. ಈ ಯುದ್ಧದಲ್ಲಿ ಮಳವಳ್ಳಿ, ಬನ್ನೂರು, ಅರಕೆರೆ ಮಾರ್ಗವಾಗಿ ಬಂದ ಬ್ರಿಟೀಷ್ ಸೇನೆಯು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿತು. ನಂತರ ಸಂಧಾನದಂತೆ ಅಪಾರ ಕಪ್ಪಕಾಣಿಕೆಯನ್ನು ಪೂರ್ಣವಾಗಿ ನೀಡುವಲ್ಲಿ ವಿಫಲನಾದಾಗ ಅವನ ಇಬ್ಬರು ಮಕ್ಕಳನ್ನು ಒತ್ತೆಯಾಳುಗಳನ್ನಾಗಿ ಕೊಂಡೊಯ್ಯಲಾಯಿತು. ಇದರಿಂದ ಜರ್ಝರಿತಗೊಂಡ ಟಿಪ್ಪು ತನ್ನೆಲ್ಲಾ ಶಕ್ತಿಯನ್ನು ಕ್ರೋಢಿಕರಿಸಿಕೊಂಡು ಬ್ರಿಟೀಷರ ವಿರುದ್ಧ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧಕ್ಕೆ ಕ್ರಿ.ಶ. 1799ರಲ್ಲಿ ಮುಂದಾದನು. ಆ ಯುದ್ಧದಲ್ಲಿ ಬನ್ನೂರಿಗೆ ಬದಲು ಸೋಸಲೆ ಬಳಿ ಕಾವೇರಿ ನದಿಯನ್ನು ದಾಟಿದ ಬ್ರಿಟೀಷ್ ಸೇನೆಯು ಮರಾಠ ಹಾಗೂ ಹೈದಾರಾಬಾದ್ ನಿಜಾಮರ ಬೆಂಬಲದೊಂದಿಗೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಸೋತ ಟಿಪ್ಪು ಕ್ರಿ.ಶ. 1799ರಲ್ಲಿ ಹತನಾದನು. ಮೈಸೂರು ಸಂಸ್ಥಾನವು ಶತೃಗಳ ನಡುವೆ ಹಂಚಲ್ಪಟ್ಟರೂ ಬಾಲಕ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಮೈಸೂರು ಸಂಸ್ಥಾನದ ಗದ್ದುಗೆಯನ್ನು ನೀಡಿ, ಬ್ರಿಟೀಷ್ ರೆಸಿಡೆಂಟರನ್ನು ನೇಮಿಸಲಾಯಿತು.[55] ಕೃಷಿ, ನೀರಾವರಿ, ರೇಷ್ಮೆ, ಕಬ್ಬು, ಸಕ್ಕರೆ ಉದ್ಯಮ ಸೇರಿದಂತೆ ವಿವಿಧ ಕೈಗಾರಿಕೆಗಳಿಗೆ ಟಿಪ್ಪು ಪ್ರೋತ್ಸಾಹ ನೀಡಿದ್ದನು.

## ಮುಮ್ಮಡಿ ಕೃಷ್ಣರಾಜ ಒಡೆಯರು

ಇವರು ಇನ್ನೂ ಬಾಲಕರಾಗಿದ್ದರಿಂದ ದಿವಾನ್ ಪೂರ್ಣಯ್ಯನವರೇ ಕ್ರಿ.ಶ. 1811ರವರೆಗೆ ಆಡಳಿತದ ಚುಕ್ಕಾಣಿ ಹಿಡಿದರು. ಸೋಸಲೆಯ ವ್ಯಾಸರಾಜ ಮಠದ ಗೋಪಾಲಕೃಷ್ಣ ದೇವರ ಆರಾಧನೆಗೆಂದು ಚಿನ್ನದ ಮಂಟಪವನ್ನು ಪೂರ್ಣಪ್ರಭು (ದಿವಾನ ಪ್ರರ್ಣಯ್ಯ) ವು ವಿದ್ಯಾವಲ್ಲಭ ತೀರ್ಥರಿಗೆ ಹರಕೆ ಸಲ್ಲಿಸಿದ ಅಂಶವನ್ನು ಸೋಸಲೆಯ ಕ್ರಿ.ಶ. 1809ರ ಶಾಸನ ನಿವೇದಿಸುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಗೆ ಸೇರಿದ ಸೋಸಲೆಯ ಎರಡು ಶಾಸನಗಳು ವ್ಯಾಸರಾಜ ಮಠದ ಗೋಪಾಲಕೃಷ್ಣನಿಗೆ ನೀಡಿದ ದಾನವನ್ನು ಹೇಳಿದರೆ ಮೂಗೂರಿನ ಎರಡು ಶಾಸನಗಳಲ್ಲಿ ಒಂದು ಮುಮ್ಮಡಿಗಳ ಮಗಳು ದೇವರಾಜಮ್ಮಣಿಯು ಗುಡಿಯ ಬಾಗಿಲಿಗೆ

ಹಿತ್ತಾಳೆ ಚೌಕಟ್ಟು ಹಾಕಿಸಿದ ಅಂಶವನ್ನು ದಾಖಲಿಸಿದ್ದು, ಇನ್ನೊಂದು ಶಾಸನ ಮೂಗೂರ ಅಮೃತಸಾನಿಯು ದೇವಿಗೆ ಪಲ್ಲಕಿಯನ್ನು ಸಲ್ಲಿಸಿದ್ದನ್ನು ತಿಳಿಸುತ್ತದೆ. ಮುಮ್ಮಡಿ ಕೃಷ್ಣರಾಜರು ಕ್ರಿ.ಶ. 1811ರಿಂದ ತಾವೇ ನೇರ ಆಡಳಿತ ಮಾಡಲಾರಂಭಿಸಿದರು.[56] ಆದರೆ ಅರಮನೆಯ ಅಧಿಕ ವೆಚ್ಚ, ಕಂದಾಯ ಸಂಗ್ರಹದಲ್ಲಿ ಕೊರತೆ, ನಗರ ರೈತ ಬಂಡಾಯ, ಅಮಲ್ದಾರರ ಬೇಜವಾಬ್ದಾರಿ ಮುಂತಾದ ಅಂಶಗಳು ಸೇರಿ, ರಾಜ್ಯದ ಬೊಕ್ಕಸ ಬರಿದಾಗಿ ರಾಜ್ಯವು ಆರ್ಥಿಕ ಸಂಕಷ್ಟಕ್ಕೆ ಸಿಲುಕಿತು. ಆಗ ಬ್ರಿಟೀಷರು ಮುಮ್ಮಡಿಯನ್ನು ಪದಚ್ಯುತಿಗೊಳಿಸಿ ಸಂಸ್ಥಾನದ ಆಡಳಿತಕ್ಕೆ ಕಮಿಷನರುಗಳನ್ನು ನೇಮಿಸಿದರು.

## ಅಡಿಟಿಪ್ಪಣಿಗಳು

| | | | |
|---|---|---|---|
| 1 | ರಾಜೇಂದ್ರಪ್ಪ, ಎಸ್. | – | ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರ್, ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು.ಪು.ಸಂ–16 |
| 2 | ಅದೇ, ಪು. ಸಂ. 16 | – | |
| 3 | ಅದೇ, ಪು. ಸಂ. 16 | – | |
| 4 | ಡಾ. ದೇವರಕೊಂಡಾ ರೆಡ್ಡಿ | – | ಗುಣಮಧುರ, ಅಭಿನಂದನಾ ಸಮಿತಿ,2010, ಪು.ಸಂ. 129 |
| 5 | ಎಂ.ಎ.ಆರ್. 1911–1912 | – | ಪು. ಸಂ.37, ಮತ್ತು ತಲಕಾಡಿನ ಗಂಗರ ದೇವಾಲಯಗಳು–ಒಂದು ಅಧ್ಯಯನ, ಡಾ. ದೇವರಾಕೊಂಡ ರೆಡ್ಡಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–1999, ಪು. ಸಂ–153 |
| 6 | SII ix (ii) No. 430 | | |
| 7 | Ec. II S.B. 349 V. A.K. 1171 Hn 144 | | |
| 8 | Ec. Bn 53, 75, 76 H & 139 | | |
| 9 | Ec. V BI 31, 21, 41 | | |
| 10 | Ec.V ii SK 106 | | |
| 11 | SII ix (i) No. 258 | | |
| 12 | SII ix (i) 370. F No. 1927 | | |
| 13 | SII xi (i) No 50 | | |
| 14 | Ec.V AK 119 | | |
| 15 | Ec.V Ag 79-81 | | |
| 16 | Ec. III. K.D. 118 | | |

| | | | |
|---|---|---|---|
| 17 | ರಂಗಸ್ವಾಮಯ್ಯ. ಜಿ. ಆರ್,<br>ಷೇಕ್ ಆಲಿ. ಬಿ | – | ದಕ್ಷಿಣ ಭಾರತದ ಇತಿಹಾಸ, 1977<br>ಪು.ಸಂ.322 |
| 18 | Ec.VI. CM 203 VCH 181 | | |
| 19 | Ec.VI Kd. 12. MAR 1924<br>No. 10 | | |
| 20 | VI. TK 53-55 | | |
| 21 | Ec.VI CM 170 | | |
| 22 | ಅದೇ. | – | ಪೂರ್ವೋಕ್ತ, ಪು.ಸಂ–34 |
| 23 | ಮಹಾದೇವಸ್ವಾಮಿ. ಕೆ.ಎಂ | – | ಹೊಯ್ಸಳರ ಕಾಲದ ಮುಖ್ಯ ನಗರ ಕೇಂದ್ರಗಳು ಮತ್ತು ನಗರೀಕರಣ, ಕಾಶಿ ಪುಸ್ತಕ ಪ್ರಕಾಶನ, ಮೈಸೂರು–2008 ಪು.ಸಂ.166 |
| 24 | EC. V BI-54 | | |
| 25 | ಗೋಪಾಲ. ಆರ್. (ಸಂ) | – | ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು–2010, ಪು. ಸಂ–446 |
| 26 | ಎ.ಕ. ಸಂ.5 ಪು.ಸಂ. 48 | | |
| 27 | ಪಾಲಾಕ್ಷ | – | ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಶಶಿ ಪ್ರಕಾಶನ, ತಿಪಟೂರು. ಪು.ಸಂ.55 |
| 28 | ಅದೇ. ಪು.ಸಂ.55 | | |
| 29 | ರಾಜೇಂದ್ರಪ್ಪ ಎಸ್. | – | ಪೂರ್ವೋಕ್ತ, ಪು.ಸಂ–21 |
| 30 | ಅದೇ. ಪು.ಸಂ.22 | | |
| 31 | ಅದೇ. ಪು.ಸಂ.22 | | |
| 32 | ಅದೇ. ಪು.ಸಂ.23 | | |
| 33 | ಗೋಪಾಲ. ಆರ್. (ಸಂ) | – | ಪೂರ್ವೋಕ್ತ, ಪು.ಸಂ–446 |

34 ಎಂ.ಎ.ಆರ್. 1910. . ಪು.ಸಂ.28

35 ರಾಜೇಂದ್ರಪ್ಪ. ಎಸ್ – ಪೂರ್ವೋಕ್ತ, ಪು.ಸಂ–24

36 ಗೋಪಾಲ. ಆರ್. (ಸಂ) – ಪೂರ್ವೋಕ್ತ, ಪು.ಸಂ–30, ಪು.ಸಂ–446

37 ಎಂ.ಎ.ಆರ್. 1913, ಪು. ಸಂ. 35, 36

38 ಹೆಚ್.ಎಂ. ನಾಗರಾಜು, ತಲಕಾಡು ದರ್ಶನ, ಹೇಮಶ್ರೀ ಪ್ರಕಾಶನ–2010 ಪು. ಸಂ–95

39 ಹೆಚ್.ಎಂ. ನಾಗರಾಜ. ಪೂರ್ವೋಕ್ತ, ಪು.ಸಂ–30 ಪು.ಸಂ. 5

40. ಅಣ್ಣಯ್ಯ ತೈಲೂರು – ಹೊಯ್ಸಳರಾಜ ವೀರ ಸೋಮೇಶ್ವರ, ಸಂದೀಪ ಪ್ರಕಾಶನ, 2011, ಪು.ಸಂ.18

41 ಅದೇ. ಪು.ಸಂ.126

42 ಎಂ.ಎ.ಆರ್. 1914

43 ಎ.ಕ. ಸಂ.5 – ತಿ.ನ. 26 – ಪು.ಟ.ಸಂ.44

44 ಎಂ.ಎ.ಆರ್. 1912

45 ಸರಸ್ವತಿ. ಎನ್ – ವಿಜಯನಗರ ಕಾಲದ ಸ್ತ್ರೀಯರ ಕಾಲಮಾನಗಳು, ಉನ್ನತಿ ಪ್ರಕಾಶನ, ಮೈ, 2011 ಪು.ಸಂ. 23

46 ಅದೇ. ಪು.ಸಂ.26

47 ಅದೇ. ಪು.ಸಂ.26

48 ಸಾವಿತ್ರಿ. ಎನ್. – ಹೊಯ್ಸಳರ ಕಾಲದ ಶಿಕ್ಷಣ ಮತ್ತು ಸಾಹಿತ್ಯ. ರಾಘವೇಂದ್ರ ಪ್ರಿಂಟಿಂಗ್, ಹಾಸನ, 2008. ಪು. ಸಂ. 48

49 ಗೋಪಾಲ. ಆರ್. (ಸಂ) – ಪೂರ್ವೋಕ್ತ, ಪು.ಸಂ–30

50 ಅದೇ. ಪು.ಸಂ.30

51 ಅದೇ. ಪು.ಸಂ.31

52 ಪಾಲಾಕ್ಷ – ಪೂರ್ವೋಕ್ತ, ಪು.ಸಂ–196

53 ಎಂ.ಎ.ಆರ್. 1908 – ಪು.ಸಂ–23

54 ಗೋಪಾಲರಾವ್ ಹೆಚ್. ಎಸ್. – ಪೂರ್ವೋಕ್ತ, ಪು.ಸಂ–65

55 ರಾಜೇಂದ್ರಪ್ಪ. ಎಸ್– ಪೂರ್ವೋಕ್ತ, – ಪು.ಸಂ–36

56 ಅದೇ. ಪು.ಸಂ.37

# ಅಧ್ಯಾಯ–3

## ದೇವಾಲಯಗಳ ವಾಸ್ತುಶಿಲ್ಪ ಅಧ್ಯಯನ

ಪ್ರಾಚೀನ ಕಾಲದಿಂದಲೂ ಭಾರತ ಹಿಂದೂ, ಜೈನ, ಬೌದ್ಧ, ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು ಭಾರತದಲ್ಲಿ ಕಂಡುಬರುತ್ತವೆ. ಉತ್ತರದಲ್ಲಿ ಹಿಮಾಲಯ ಪರ್ವತದಿಂದ ಹಿಡಿದು ದಕ್ಷಿಣದಲ್ಲಿ ರಾಮೇಶ್ವರದವರೆವಿಗೂ ಸಣ್ಣ ಪ್ರಮಾಣದಿಂದ ಹಿಡಿದು ಬೃಹತ್ ಗಾತ್ರದ ದೇವಾಲಯ, ಜಿನಾಲಯ, ಚೈತ್ಯಾಲಯ, ಮಂದಿರ ಹಾಗೂ ಚರ್ಚ್‌ಗಳು ನಿರ್ಮಾಣಗೊಂಡಿರುವವು. ಅದರಲ್ಲೂ ದಕ್ಷಿಣ ಭಾರತವಂತೂ ಕಲೆ ಮತ್ತು ವಾಸ್ತುಶಿಲ್ಪದ ತಾಣವಾಗಿದೆ. ಇಲ್ಲಿ ಆಳ್ವಿಕೆ ನಡೆಸಿದ ವಿವಿಧ ರಾಜಮನೆತನಗಳ ಕಾಲದಲ್ಲಿ ಹಲವಾರು ಪ್ರಾಚೀನ ನೆಲೆಗಳಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದು. ದಕ್ಷಿಣ ಭಾರತದಲ್ಲಿ ವಿಶೇಷವಾಗಿ ದ್ರಾವಿಡ ಮತ್ತು ವೇಸರ ಶೈಲಿಯ ಮಾದರಿಯ ದೇವಾಲಯಗಳು ನಿರ್ಮಾಣಗೊಂಡಿವೆ. ಈ ಹಿನ್ನೆಲೆಯಲ್ಲಿ ನನ್ನ ಸಂಶೋಧನಾ ವ್ಯಾಪ್ತಿಗೆ ಒಳಪಟ್ಟಿರುವ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕು ಪ್ರಾಂತ್ಯದಲ್ಲಿ ಕಂಡುಬರುವ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಈ ಕೆಳಕಂಡಂತೆ ವಿವರಣೆಯನ್ನು ನೀಡಲಾಗಿದೆ.

**ಶೈವ ದೇವಾಲಯಗಳು**

**ಪೀಠಿಕೆ**

ಭಾರತದಲ್ಲಿ ಶೈವ ಧರ್ಮವು ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಈ ಧರ್ಮವು ಭಾರತದ ಅವಿಭಾಜ್ಯ ಅಂಗವಾಗಿರುವ ಕರ್ನಾಟಕದ ಇತರ ಜಿಲ್ಲೆಗಳಂತೆ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕಿನಾದ್ಯಂತ ವ್ಯಾಪಿಸಿದೆ. ಶೈವ ಧರ್ಮದ ಪ್ರಭೇದಗಳನ್ನು ಗುರುತಿಸುವಲ್ಲಿ ಏಕರೂಪತೆಯಿಲ್ಲವಾದರೂ ಅದರಲ್ಲಿ ಸಮಾಜ ಸಮ್ಮುಖವಾದದ್ದು ಮತ್ತು ವಾಮಾಚಾರ ಮತ್ತು ತಾಂತ್ರಿಕ ಆಚರಣೆಗಳುಳ್ಳದ್ದು ಎಂದು ಎರಡು ಭಾಗ ಮಾಡಬಹುದೆನಿಸುತ್ತದೆ. ಗ್ರಾಮಗಳ ಒಳಗೆ ಕಂಡು ಬರುವ ಕಾಳಾಮುಖ ಸ್ಥಾನಕಗಳು, ಸಿದ್ದೇಶ್ವರ ದೇವಾಲಯಗಳು, ಮೈಲಾರ, ವೀರಭದ್ರ, ನಂದಿ ದೇವಾಲಯಗಳು ಅನೇಕ ಸಿದ್ಧರ, ಸಾಧಕರ ಗದ್ದುಗೆಗಳು, ಏಕಾಂತ ಪ್ರದೇಶಗಳಲ್ಲಿ ಕಂಡು ಬರುವ ಭೈರವ ದೇವಾಲಯ,

ಬಲಿಪೀಠಗಳು, ಪಂಚಪೀಠ ಮಠಗಳು ತಿರುಮಕೂಡಲು ನರಸೀಪುರದಲ್ಲಿವೆ. ಈ ಪ್ರದೇಶವು ಎಲ್ಲಾ ರೀತಿಯ ಶೈವ ಶಾಖೋಪಶಾಖೆಗಳಿಗೆ ಮತ್ತು ಪಂಥಗಳಿಗೆ ತೆರೆದುಕೊಂಡಿತ್ತೆಂಬುದನ್ನು ಶಾಸನಾಧ್ಯಯನದಿಂದ ತಿಳಿದುಬರುತ್ತದೆ. ಹೀಗೆ ಹತ್ತು ಹಲವು ವಿಷಯಗಳನ್ನು ಹೊಂದಿಕೊಂಡು ಹುಟ್ಟಿದ ಶೈವ ಧರ್ಮದ ದೇವಾಲಯಗಳು ತಿರಮಕೂಡಲು ನರಸೀಪುರ ಪ್ರದೇಶದಲ್ಲಿ ಗಂಗರ ಕಾಲದಲ್ಲಿಯೆ ನಿರ್ಮಾಣವಾಗಿ ವಿಜಯನಗರ ಕಾಲದವರೆಗೂ ಮುಂದುವರೆದು ಅನೇಕ ದೇವಾಲಯಗಳು ತಿರುಮಕೂಡಲು ನರಸೀಪುರ ತಾಲೂಕಿನ ಅನೇಕ ಭಾಗಗಳಲ್ಲಿ ಕಂಡುಬಂದಿವೆ. ಅವುಗಳ ಬಗ್ಗೆ ಈಗಾಗಲೇ ಲಭ್ಯವಿರುವ ಅಲ್ಪ ಸ್ವಲ್ಪ ಮಾಹಿತಿಗಳ ಆಧಾರದ ಮೇಲೆ ಕ್ಷೇತ್ರ ಕಾರ್ಯವನ್ನು ಕೈಗೊಂಡು ಸ್ಥಳದಲ್ಲಿ ವಾಸ್ತುಶಿಲ್ಪ ಮತ್ತು ಕಲೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ ವಿವರಣಾತ್ಮಕ ವರದಿಯನ್ನು ಮತ್ತು ಛಾಯಾಚಿತ್ರಗಳನ್ನು ತೆಗೆದು ಈ ಪ್ರೌಢಪ್ರಬಂಧದಲ್ಲಿ ಸೇರಿಸಿ ರಚಿಸಲಾಗಿದೆ.

**ಗಂಗರ ಕಾಲದ ಶೈವ ದೇವಾಲಯಗಳು**

**ತಲಕಾಡು**

ತಿರುಮಕೂಡಲು ನರಸೀಪುರದಿಂದ ಆಗ್ನೇಯಕ್ಕೆ ಸುಮಾರು 14 ಕೀ.ಮೀ. ಅಂತರದಲ್ಲಿ ಕಾವೇರಿಯ ಎಡದಂಡೆಯ ಮೇಲಿರುವ ತಲಕಾಡಿಗೆ, ಕಾವೇರಿ ನದಿಯೂ ಕೊರಳಹಾರದಂತೆ ಶೋಭಿಸುತ್ತಿದೆ. ಇದು ಗಂಗರ ರಾಜಧಾನಿ ಪಟ್ಟಣವಾಗಿ ಮೆರೆದಿದ್ದು, ಶಾಸನಗಳಲ್ಲಿ ಪೆನ್ನಾಗರ, ತಲೈಕಾಟ್, ತಲೈಕಾಡು, ತಲವನಪುರ ಎಂದೆಲ್ಲ ಉಲ್ಲೇಖಿತಗೊಂಡಿದ್ದು, ಚೋಳರ ಆಡಳಿತದಲ್ಲಿ 'ರಾಜರಾಜಪುರ' (1004-1116) ಎಂಬ ಅವಧಾನವನ್ನು ಪಡೆದಿತ್ತು.[1]

**ವೈದ್ಯನಾಥೇಶ್ವರ ದೇವಾಲಯ**

ಈ ದೇವಾಲಯವು ಪಂಚಲಿಂಗ ದೇವಾಲಯಗಳಲ್ಲಿ ಪ್ರಧಾನವಾದ ದೇವಾಲಯ ವಾಗಿದೆ. ಇದು ಏಕಕೂಟ ಶೈವ ದೇವಾಲಯವಾಗಿದ್ದು ಪೂರ್ವಾಭಿಮುಖವಾಗಿದೆ. (ಚಿ. ಸಂ.-1) ತಲಕಾಡಿನಲ್ಲಿರುವ ವೈದ್ಯನಾಥೇಶ್ವರ ದೇವಾಲಯದಲ್ಲಿ ಪ್ರಧಾನ ಲಿಂಗವಿದೆ. ವೈದ್ಯನಾಥೇಶ್ವರ ತಲಕಾಡಿನ ಪ್ರಮುಖ ದೇವಾಲಯ. ವೈದ್ಯನಾಥೇಶ್ವರ ದೇವಾಲಯವು ಸಂಪೂರ್ಣವಾಗಿ ಮಾರ್ಪಟ್ಟು ಈಗ ಅದರಲ್ಲಿ ಗಂಗರಕಾಲದ ವಾಸ್ತುಶಿಲ್ಪದ ಲಕ್ಷಣ ಸ್ವಲ್ಪವೂ ಉಳಿದಿಲ್ಲ.[2] ಇದು ಕಣಶಿಲೆಯಿಂದ ಕಟ್ಟಿದ ಬೃಹತ್ ಕಲಾತ್ಮಕ ದೇವಾಲಯ. ಇದು ಬಹುಶಃ ಚೋಳರ ಪ್ರತಿಷ್ಠೆ.

ಆದರೆ ಈಗಾಗಲೇ ನೋಡಿದಂತೆ ಈಗ ಇರುವ ಕಟ್ಟಡ ವಿಜಯನಗರದ ಅರಸರ ಕಾಲದಲ್ಲಿ ಮಂತ್ರಿಯಾಗಿದ್ದು ಹಾಗೂ ಇದೇ ಊರಿನವರಾದ ಮಾಧವ ಮಂತ್ರಿಯಿಂದ ನಿರ್ಮಾತವಾದದ್ದು ಎಂದು ತಿಳಿದುಬರುತ್ತದೆ. ಇದು ದ್ರಾವಿಡ ಮತ್ತು ಹೊಯ್ಸಳ ಶೈಲಿಗಳ ಮಿಶ್ರಣದಿಂದ ಕೂಡಿದೆ.[3]

ಈ ದೇವಾಲಯವು ಸು.14ನೇ ಶತಮಾನವೆಂದು ಅಭಿಪ್ರಾಯಿಸಲಾಗಿದೆ. ದೇವಾಲಯದ ಈಶಾನ್ಯ ಭಾಗದ ಭಿತ್ತಿಯ ಮೇಲಿರುವ ಕ್ರಿ.ಶ.16ನೆಯ ಶತಮಾನಕ್ಕೆ ಸೇರಿದ ನಾಲ್ಕು ಸಾಲಿನ ನಾಗರಿ ಶಾಸನದಲ್ಲಿ ಬರುವ ಮಾಧವನನ್ನು ಕ್ರಿ.ಶ.14ನೆಯ ಶತಮಾನಕ್ಕೆ ಸೇರಿದ ಮಾಧವ ಮಂತ್ರಿಯೆಂದು ಭಾವಿಸಲಾಗುತ್ತದೆ. ದ್ರಾವಿಡ–ಹೊಯ್ಸಳ ಮಿಶ್ರಶೈಲಿಯ ವೈದ್ಯನಾಥೇಶ್ವರ ದೇವಾಲಯವು ವಿಶಾಲವಾದ ಪ್ರಾಕಾರದ ನಡುವೆ ಉತ್ತರದ ಜಗತಿಯ ಮೇಲಿದ್ದು, ವಿಶಾಲವಾದ ಗರ್ಭಗೃಹ, ಎರಡು ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 6 X 6 ಅಡಿ ಸುತ್ತಳತೆಯನ್ನು ಹೊಂದಿದ್ದು, ಆಕರ್ಷಕ ಬಾಗಿಲುವಾಡಗಳನ್ನುಳ್ಳ ಇದರ ಗರ್ಭಗೃಹದಲ್ಲಿರುವ ವೈದ್ಯನಾಥೇಶ್ವರ ಲಿಂಗವು ತಲಕಾಡಿನ ಪಂಚಲಿಂಗಗಳಲ್ಲಿ ಪ್ರಧಾನವಾಗಿದೆ. ಗರ್ಭಗುಡಿಯಲ್ಲಿ ಒಂದು ಅಡಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯಲ್ಲಿ ಕಮಲಾ ಕೃತಿಯುಳ್ಳ ಭುವನೇಶ್ವರಿಯಿದೆ.

**ನವರಂಗ:–** ನವರಂಗವು 12 ಕಂಬಗಳನ್ನು ಹೊಂದಿದ್ದು, ನವರಂಗದ ಮೇಲ್ಛಾವಣಿಯಲ್ಲಿ ಆಕರ್ಷಕವಾದ ಭುವನೇಶ್ವರಿಗಳಿವೆ. (ಚಿ.ಸಂ.–2) ಗರ್ಭಗೃಹಕ್ಕೆ ವೇಸರ ಶೈಲಿಯ ಶಿಖರವಿದ್ದು, ಭಿತ್ತಿಯನ್ನು ಶೈವಪುರಾಣದ ಕಥನ ಶಿಲ್ಪಗಳಿಂದ ಅಲಂಕರಿಸಲಾಗಿದೆ. ನವರಂಗದಲ್ಲಿರುವ ಎರಡು ದೇವಕೋಷ್ಠಗಳಲ್ಲಿ ಚಂದ್ರಶೇಖರ ಹಾಗೂ ತಾಂಡವೇಶ್ವರರ ಉತ್ಸವ ಮೂರ್ತಿಗಳಿವೆ. ಸರಸ್ವತಿ, ಸೂರ್ಯ, ಶ್ರೀನಿವಾಸ, ಕಲ್ಕಿ ಮುಂತಾದ ಕಿರುಶಿಲ್ಪಗಳು ನವರಂಗದಲ್ಲಿವೆ. ಇಲ್ಲಿರುವ ನಟರಾಜನ ಕಂಚಿನ ಶಿಲ್ಪವು ಕಳಲೆ ನಂಜರಾಜಯ್ಯನ ಸೇವೆಯಾಗಿದೆ. ನವರಂಗದ ಕಣಶಿಲೆಯ ಕಂಬಗಳು ಹೊಯ್ಸಳ ಶೈಲಿಯ ಉತ್ತಮ ಅನುಕರಣೆಗಳಾಗಿದ್ದು, ಭುವನೇಶ್ವರಿಯು ಅಷ್ಟಧಿಕ್ಪಾಲಕರನ್ನು ಹೊಂದಿದ್ದು, ಸರಳವಾಗಿದೆ. ನವರಂಗದ ಬಾಗಿಲನ್ನು ಹೊಯ್ಸಳ ಮಾದರಿಯ ಆಕರ್ಷಕ ಕೆತ್ತನೆಯಿಂದ ಅಲಂಕರಿಸಲಾಗಿದ್ದು, ಇಕ್ಕೆಲದಲ್ಲಿ ಎರಡು ಮೀಟರ್ ಎತ್ತರದ ಆಕರ್ಷಕ ದ್ವಾರಪಾಲಕ ಶಿಲ್ಪಗಳಿವೆ. ವೈದ್ಯೇಶ್ವರ ಗುಡಿಯ ಎಡಭಾಗದಲ್ಲಿರುವ

ದೇವಿಗುಡಿಯು ವಿಜಯನಗರದ ಕಾಲದ್ದಾಗಿದ್ದು, ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದೆ. ಗರ್ಭಗುಡಿಯಲ್ಲಿ ಮನೋನ್ಮಣಿ (ಪಾರ್ವತಿ) ಶಿಲ್ಪವಿದ್ದು, ನವರಂಗದಲ್ಲಿ ಆಕರ್ಷಕ ಉಬ್ಬುಶಿಲ್ಪಗಳಿವೆ. ಈ ಗುಡಿಯ ಪ್ರಾಕಾರದಲ್ಲಿ ಕಾಶಿವಿಶ್ವನಾಥ, ಶಕ್ತಿಗಣಪತಿ, ಚಂಡಿಕೇಶ್ವರ, ದ್ವಾರಗಣಪ, ಬಂಡರಸಮ್ಮ, ಉರಿಕ್ಯಾತಮ್ಮ ಮುಂತಾದ ಕಿರುಗುಡಿಗಳಿವೆ. ಶಕ್ತಿಗಣಪತಿ ಗುಡಿಯೊಳಗಿರುವ ಸಿಂಹಾರೂಢ ಮಹಿಷಮರ್ಧಿನಿಯ ಶಿಲ್ಪವು ಗಂಗ ಲಕ್ಷಣವನ್ನು ಹೊಂದಿವೆ. ವೈದ್ಯೇಶ್ವರ ಗುಡಿಯ ಹಿಂಬದಿಯ 5 ಕಿರುಗುಡಿಗಳಲ್ಲಿರುವ ಪಂಚಲಿಂಗಗಳನ್ನು ಬಸವಲಿಂಗಣ್ಣನು ಕ್ರಿ.ಶ.1622 ರಲ್ಲಿ ಪ್ರತಿಷ್ಠಾಪಿಸಿದ್ದಾನೆ. ಪ್ರಾಕಾರದ ಆಕರ್ಷಕ ಮಹಾದ್ವಾರವು ಗೋಪುರ ರಹಿತವಾಗಿದೆ. ಇದು ಬಲಭಾಗದಲ್ಲಿ ಭೈರವನ ಗುಡಿಯಿದ್ದು, ಬದಿಯಲ್ಲೇ ವೀರಭದ್ರನ ಗುಡಿಯೂ ಇದೆ. ಅಲ್ಲೇ ಇರುವ ಸುಮಾರು 15ನೇ ಶತಮಾನದ ಕನ್ನಡ ಶಾಸನದಲ್ಲಿ ತಲಕಾಡಿನ ವೀರಭದ್ರ ದೇವರ ನಂದಾದೀಪ ಸೇವೆಗೆಂದು ದಾನಬಿಟ್ಟ ವಿವರವಿದೆ. ಈ ದೇವಾಲಯದ ಸುತ್ತಲೂ 20 ಅಡಿ ಎತ್ತರದ ಪ್ರಾಕಾರವನ್ನು ಹೊಂದಿದೆ.

**ಪಾತಾಳೇಶ್ವರ ದೇವಾಲಯ**

ಈ ದೇವಾಲಯವು ಕೀರ್ತಿನಾರಾಯಣ ದೇವಾಲಯದಿಂದ 100 ಗಜ ದಕ್ಷಿಣಕ್ಕೆ ತಗ್ಗಿನಲ್ಲಿ ಪೂರ್ವಾಭಿಮುಖವಾಗಿದೆ. (ತಳನಕ್ಷೆ-1) ಸಣ್ಣ ಪ್ರಮಾಣದ ಈ ದೇವಾಲಯದಲ್ಲಿರುವ ಪಾತಾಳೇಶ್ವರ ಲಿಂಗವು ಪಂಚಲಿಂಗಗಳಲ್ಲಿ ಒಂದಾಗಿದೆ. ಈ ಗುಡಿಯು ಸುಮಾರು 10ನೆಯ ಶತಮಾನದ ಗಂಗರ ರಚನೆಯಾಗಿದೆ.[4]

**ಗರ್ಭಗುಡಿ**:- ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ನಂತರದಲ್ಲಿ ಗರ್ಭಗೃಹಕ್ಕೆ ಇಟ್ಟಿಗೆ ಶಿಖರವನ್ನು ಸೇರಿಸಲಾಗಿದೆ. (ಚಿ.ಸಂ.-3) ಈ ದೇವಾಲಯದ ಭಿತ್ತಿಯ ಮೇಲೆ ಮಳಲಿನ ಮೂರು ಹಾಗೂ ಕನ್ನಡದ ಒಂದು ಶಾಸನಗಳಿವೆ.

**ನವರಂಗ**:- ನವರಂಗದ ಕಂಬಗಳು ಕಿರಿದಾಗಿದ್ದು, ಚೌಕಕಾರದ ಪೀಠದ ಮೇಲೆ ವೃತ್ತಾಕಾರದ ಕಾಂಡವನ್ನು ಹೊಂದಿದೆ. ಸ್ಥಾನಕ ಬ್ರಹ್ಮ ಮುಂತಾದ ಶಿಲ್ಪಗಳಿವೆ. ಗರ್ಭಗೃಹದಲ್ಲಿರುವ ಕಿರು ಶಿವಲಿಂಗವು ಬೆಳಗ್ಗೆ ಕೆಂಪು ಬಣ್ಣಕ್ಕೂ, ಮಧ್ಯಾಹ್ನ ಕಪ್ಪು ಬಣ್ಣಕ್ಕೂ ಹಾಗೂ ಸಂಜೆ ಬಿಳಿವರ್ಣಕ್ಕೂ ಬದಲಾಗುವುದೆಂದು ಸ್ಥಳೀಯವಾಗಿ ಹೇಳಲಾಗುತ್ತದೆ.

**ಮರುಳೇಶ್ವರ ದೇವಾಲಯ**

ಈ ದೇವಾಲಯವು ಸಹ ಪಂಚಲಿಂಗಗಳಲ್ಲಿ ಒಂದಾಗಿದ್ದು, ಪೂರ್ವಾಭಿಮುಖವಾಗಿರುವ ಏಕಕೂಟ ಶೈವ ದೇವಾಲಯವಾಗಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಸುಮಾರು 2 ಅಡಿ ಎತ್ತರದ ಪಾಣಿಪೀಠದ ಮೇಲೆ 3 ಅಡಿ ಉತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ:-** ಈ ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯವು ಗಂಗರ ಪಾತಾಳೇಶ್ವರ ದೇವಾಲಯವನ್ನೇ ಹೋಲುತ್ತದೆ.

**ನವರಂಗ:-** ನವರಂಗದಲ್ಲಿರುವ ದುಂಡಾಕಾರದ ಕಂಬ ಹಾಗೂ ಅಲಂಕಾರಿಕ ಅಧಿಷ್ಠಾನಗಳು ಉಲ್ಲೇಖಾರ್ಹವಾಗಿದ್ದು, ತಳಪಾದಿ ಕಲ್ಲಿನ ಮೇಲಿರುವ ತಮಿಳು ಶಾಸನಗಳಿಂದ ಇದು ನಂತರದಲ್ಲಿ ಪುನರ್ ಜೀರ್ಣೋದ್ಧಾರಗೊಂಡಿರುವ ಅಂಶ ಸ್ಪಷ್ಟವಾಗುತ್ತದೆ. ನವರಂಗದಲ್ಲಿರುವ ವಿಷ್ಣು, ಸೂರ್ಯ, ಸುಬ್ರಹ್ಮಣ್ಯ, ಮಹಿಷಾಮರ್ಧಿನಿ, ಗಣಪತಿ ಮುಂತಾದ ಶಿಲ್ಪ ಲಕ್ಷಣವನ್ನು ಹೊಂದಿದೆ.

ದೇವಾಲಯವು ಭೂಮಿಯ ಮೇಲ್ಭಾಗದಿಂದ ಸುಮಾರು 14 ಅಡಿ ಆಳದಲ್ಲಿದೆ. ದೇವಾಲಯದ ಬಲಭಾಗದಲ್ಲಿ ತೆರೆದ ಬಾವಿ ಇದೆ. ದೇವಾಲಯದ ಈಶಾನ್ಯ ದಿಕ್ಕಿನಲ್ಲಿ 1 ಅಡಿ ಎತ್ತರದ ಪಾಣಿಪೀಠದ ಮೇಲೆ 3 ಅಡಿ ಎತ್ತರದ ಶಿವಲಿಂಗವಿದೆ. ದೇವಾಲಯದಿಂದ (ತಳಭಾಗದಲ್ಲಿರುವ) ಭೂಮಿ ಮೇಲ್ಭಾಗಕ್ಕೆ ಹೋಗಲು ಕಲ್ಲಚಪ್ಪಡಿಗಳಿಂದ ಹಿಮ್ಮೆಟ್ಟಿಲುಗಳನ್ನು ಪೂರ್ವ ದಿಕ್ಕಿಗೆ ಮಾಡಲಾಗಿದೆ.

**ಚೌಡೇಶ್ವರಿ ದೇವಾಲಯ**

ಈ ದೇವಾಲಯವು ಕೀರ್ತಿನಾರಾಯಣ ದೇವಾಲಯದ ಆನತಿ ದೂರದಲ್ಲಿರುವ ಉತ್ತರಾಭಿಮುಖವಾದ ಏಕಕೂಟ ದೇವಾಲಯವಾಗಿದೆ.

**ಗರ್ಭಗುಡಿ**:-ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಅಷ್ಟಭುಜ ಮಹಿಷಮರ್ಧಿನಿಯ ಶಿಲ್ಪವಿದ್ದು, ಇದು ಗಂಗರ ಕಾಲದ್ದಾಗಿದೆ. (ಚಿ.ಸಂ.-4)[5]

**ಸುಕನಾಸಿ**:-ಈ ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳಿಲ್ಲ.

**ನವರಂಗ**:-ನವರಂಗವು 9 ಅಂಕಣಗಳಿಂದ ಕೂಡಿದ್ದು, ನಾಲ್ಕು ಪ್ರಧಾನವಾದ ಕಂಬಗಳನ್ನು ಹೊಂದಿದೆ. ನವರಂಗದ ಕಿರುಗಾತ್ರದ ದುಂಡುಕಂಬಗಳು ಗಂಗ ಲಕ್ಷಣವನ್ನು ನೆನಪಿಗೆ ತರುತ್ತವೆ. (ಚಿ.ಸಂ.-5)

**ಆಲಗೂಡು: ಸಿದ್ಧೇಶ್ವರ ದೇವಾಲಯ**

ಈ ದೇವಾಲಯವು ಊರಿನಿಂದ ಹೊರಗೆ ಪೂರ್ವ ದಿಕ್ಕಿನಲ್ಲಿ ಕಂಡುಬರುವ ಪ್ರಾಚೀನ ದೇವಾಲಯವಾಗಿದ್ದು, ತಲಕಾಡಿನ ಗಂಗರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಈ ದೇವಾಲಯವು ದುಃಸ್ಥಿತಿ ಹೊಂದಿರುವ ಕಾರಣ ಇತ್ತೀಚಿನ ವರ್ಷಗಳಲ್ಲಿ ದೇವಾಲಯವನ್ನು ದಿಂಡುಗಳಿಂದ ನಿರ್ಮಿಸಲಾಗಿದೆ. ಸಿದ್ಧೇಶ್ವರ ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ಗರ್ಭಗುಡಿ, ನವರಂಗ, ನವರಂಗಕ್ಕೆ ಹೊಂದಿಕೊಂಡಂತೆ ಮತ್ತೊಂದು ಮುಖಮಂಟಪವನ್ನು ಸೇರಿಸಲಾಗಿದೆ. ಈ ದೇವಾಲಯದಲ್ಲಿ ಗರ್ಭಗುಡಿಯ ಪಕ್ಕಕ್ಕೆ ಅಂದರೆ ಪೂರ್ವ ದಿಕ್ಕಿಗೆ ಮತ್ತೊಂದು ಗರ್ಭಗುಡಿಯನ್ನು ಇತ್ತೀಚಿಗೆ ಮಾಡಲಾಗಿದೆಯೆಂದು ಹೇಳಬಹುದು. ಈ ದೇವಾಲಯದಲ್ಲಿ ಯಾವುದೇ ರೀತಿಯ ಪಾಣಿಪೀಠವಿಲ್ಲ.[6]

**ಗರ್ಭಗುಡಿ**

ಮೂಲಗರ್ಭಗುಡಿಯ ಒಳಗೆ ಸಿದ್ಧೇಶ್ವರನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವು ಮೂರು ಅಡಿ ಎತ್ತರವಿದ್ದು, ಒಂದುವರೆ ಅಡಿ ಅಗಲವಿದೆ. ಈ ಶಿಲ್ಪವನ್ನು ಶಿವನ ಪ್ರತಿರೂಪವಾಗಿ ಆರಾಧಿಸಿಕೊಂಡು ಬರುತ್ತಿದ್ದಾರೆ. ಸಿದ್ಧೇಶ್ವರನು ಸಮಭಂಗಿಯಲ್ಲಿ ನಿಂತಿದ್ದು ನಗ್ನ ವ್ಯವಸ್ಥೆಯಲ್ಲಿರುವುದನ್ನು ಕಾಣಬಹುದು ಹಾಗೂ ಚತುರ್ಭುಜಕಾರವಾಗಿದ್ದು, ತ್ರಿಶೂಲ, ಫಲ, ಅಭಯಹಸ್ತ ಮತ್ತು ಕೈಯಲ್ಲಿ ಢಮರು ಹಿಡಿದಿರುವುದು ಕಂಡುಬರುತ್ತದೆ. ನೀಳವಾದ ಮೂಗು, ಸುಂದರವಾದ ಕಣ್ಣು, ತಲೆಯ ಮೇಲ್ಭಾಗದಲ್ಲಿ ಜಡೆ ಕಟ್ಟಿರುವುದು ಸೊಗಸಾಗಿ ಮೂಡಿಬಂದಿದೆ.

ಈತನ ದೇಹದ ಮೇಲೆ ಸರ್ಪವು ಸುತ್ತಿಕೊಂಡಿರುವುದು ಕಂಡುಬರುತ್ತದೆ. ಈ ಶಿಲ್ಪದ ವಿಶೇಷತೆ ಏನೆಂದರೆ ಈತನ ಒಂದು ಕಾಲಿನ ಪಾದ ಪೂರ್ವಾಭಿಮುಖವಾಗಿಯೂ, ಮತ್ತೊಂದು ಪಾದ ದಕ್ಷಿಣಾಭಿಮುಖ ವಾಗಿರುವುದು ಇಲ್ಲಿಯ ವಿಶೇಷವೆಂದು ಹೇಳಬಹುದು. ಈತನ ಪಕ್ಕದಲ್ಲಿ ಒಂದು ನಾಯಿಯ ಉಬ್ಬು ಶಿಲ್ಪವೂ ಕಂಡುಬರುತ್ತದೆ.

ಮತ್ತೊಂದು ಗರ್ಭಗುಡಿಯಲ್ಲಿ ಸ್ತ್ರೀ ಶಿಲ್ಪವಿದ್ದು, ಈ ಶಿಲ್ಪವು ಪ್ರಾಯಶಃ ಪಾರ್ವತಿ ಶಿಲ್ಪವಿರಬಹುದೆಂದು ಪರಿಗಣಿಸಬಹುದು. ಏಕೆಂದರೆ ಸಿದ್ದೇಶ್ವರ ದೇವಾಲಯ ಶಿವನ ದೇವಾಲಯವಾಗಿರುವುದರಿಂದ ಪಕ್ಕದ ಗುಡಿಯಲ್ಲಿ ಪಾರ್ವತಿಯೇ ಇರಬಹುದು ಎಂದು ಊಹಿಸಬಹುದು.

**ನವರಂಗ**

ದೇವಾಲಯದ ನವರಂಗವು ಸಾಧಾರಣಾವಾಗಿದ್ದು, ಸರಳವಾದ ನಾಲ್ಕು ಕಂಬಗಳಿವೆ. ನವರಂಗದ ಪೂರ್ವದಿಕ್ಕಿಗೆ ಮೂರು ಬಿಡಿಶಿಲ್ಪಗಳನ್ನು ಇಡಲಾಗಿದೆ. ಈ ಮೂರು ಶಿಲ್ಪಗಳೆಂದರೆ 1) ಸೂರ್ಯಶಿಲ್ಪ, 2) ಗಣಪತಿ ಶಿಲ್ಪ 3) ಮಹಿಷಮರ್ದಿನಿ ಶಿಲ್ಪಗಳು ಕಂಡುಬರುತ್ತವೆ. ಸೂರ್ಯನ ಶಿಲ್ಪವು ಕಲ್ಲುಪೀಠದ ಮೇಲೆ ನಿಲ್ಲಿಸಿದ್ದು ಶಿಲ್ಪವು ಒಂದೂವರೆ ಅಡಿ ಉದ್ದವನ್ನು ಹೊಂದಿದೆ. ಎರಡು ಕೈಗಳನ್ನು ಹಾಗೂ ಎರಡು ಕಾಲುಗಳನ್ನು ಹೊಂದಿದೆ. ಎರಡು ಕೈಗಳಲ್ಲಿ ಕಮಲವನ್ನು ಹಿಡಿದು, ಕಂಠದಲ್ಲಿ ಕಂಠಾಭರಣವನ್ನು ಧರಿಸಿದ್ದಾನೆ. ಸೊಂಟದಲ್ಲಿ ವಸ್ತ್ರಧರಿಸಿದ್ದು ಕೆಲವು ರೀತಿಯ ಸರಮಾಲೆಗಳನ್ನು (ಆಭರಣದ ಮಾಲೆ) ಹಾಕಿರುವುದು, ಕರ್ಣಕುಂಡಲ ಸೊಗಸಾಗಿ ಕಂಡುಬರುತ್ತದೆ.

**ವಿಘ್ನೇಶ್ವರನ ಶಿಲ್ಪ**:–ಈ ಶಿಲ್ಪ ಚತುರ್ಭುಜಕಾರ ಹೊಂದಿದ್ದು, ಕೆಲವು ಆಯುಧಗಳಿರುವುದು ಕಂಡುಬರುತ್ತದೆ. ಮತ್ತೊಂದು ಮಹಿಷಮರ್ದಿನಿ ಶಿಲ್ಪ. ಈ ಶಿಲ್ಪವು ಶಕ್ತಿ ಪ್ರಧಾನವಾದ ಸ್ತ್ರೀ ಶಿಲ್ಪವಾಗಿದೆ. ದೇವತೆ ಕೋಣನ ಮೇಲೆ ಕುಳಿತಿದ್ದು, ಒಂದು ಕೈಯಲ್ಲಿ ಕೋಣನ ಮುಖವನ್ನು ಹಿಡಿದಿದ್ದು, ಮತ್ತೊಂದು ಕೈಯಿಂದ ಭರ್ಜಿಯ ಮೂಲಕ ಕೋಣನನ್ನು ಕೊಲ್ಲುತ್ತಿರುವ ದೃಶ್ಯ ರೋಮಾಂಚನಕಾರಿಯಾಗಿ ಮೂಡಿಬಂದಿದೆ. ಒಂದು ಕೈಯಲ್ಲಿ ಶಂಖವನ್ನು, ಮತ್ತೊಂದು ಕೈಯಲ್ಲಿ ಚಿಕ್ಕದಾದ ಖಡ್ಗವನ್ನು ಹಿಡಿದಿರುವುದು ಮೂಡಿಬಂದಿದೆ. ದೇವತೆಯು ವಸ್ತ್ರವನ್ನು ಮತ್ತು ಕಂಠಾಭರಣಗಳನ್ನು ಧರಿಸಿದ್ದಾಳೆ. ಕೈಕಡಗ, ತೋಳಬಂಧಿ ಸುಂದರವಾಗಿ ಮೂಡಿಬಂದಿದೆ.

ತಲೆಯ ಮೇಲೆ ಕಿರೀಟವನ್ನು ಧರಿಸಿದ್ದಾಳೆ. ಈ ಶಿಲ್ಪವು ತಲಕಾಡಿನ ಗಂಗರ ವಾಸ್ತುಶೈಲಿ ಹೊಂದಿರುವಂತಹ ಶಿಲ್ಪವೆಂದು ಎಂ.ಎಸ್. ಕೃಷ್ಣಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.[7] ಈ ಹಿನ್ನೆಲೆಯಿಂದ ಇಲ್ಲಿರುವ ಈ ಶಿಲ್ಪವು ಗಂಗರ ಕಾಲದ ಶಿಲ್ಪವೆಂದೇ ಹೇಳಬಹುದಾಗಿದೆ. ಹಾಗೆಯೇ ಇಲ್ಲಿ ಮತ್ತೊಂದು ಭೈರವ ಶಿಲ್ಪವೂ ದೊರೆತಿದ್ದು, ನವರಂಗದ ಪೂರ್ವ ಮತ್ತು ಪಶ್ಚಿಮ ದಿಕ್ಕಿಗೆ ಜಾಲಾಂಧ್ರಗಳನ್ನು ಸೇರಿಸಲಾಗಿದೆ. ಮುಖಮಂಟಪ: ಮುಖಮಂಟಪವು ೩೦x೩೦ ಅಡಿ ಚದರ ಸುತ್ತಳತೆಯನ್ನು ಹೊಂದಿದೆ. ಇಲ್ಲಿಯ ವಿಶೇಷತೆ ಏನೆಂದರೆ ನವರಂಗದ ಒಳಗೆ ಒಂದು ಚಪ್ಪಡಿಯಿದ್ದು, ಈ ಚಪ್ಪಡಿಯ ಪದ್ಮಾಸನದಲ್ಲಿ ಕುಳಿತಿರುವ ಜಿನನ ಶಿಲ್ಪವನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಿಂದ ಈ ದೇವಾಲಯ ಶೈವ ದೇವಾಲಯವಾಗಿದ್ದರೂ ಸಹ ಜೈನಧರ್ಮಕ್ಕೆ ಪೂರಕವಾದ ಶಿಲ್ಪಕಲೆ ಇಲ್ಲಿರುವುದರಿಂದ ಈ ಚಪ್ಪಡಿಯನ್ನು ತದನಂತರದ ಕಾಲದಲ್ಲಿ ಒಳಗಡೆ ಜೋಡಿಸಲಾಗಿದೆ ಎಂದು ಊಹಿಸ ಬಹುದಾಗಿದೆ ಹಾಗೂ ದೇವಾಲಯದ ಮುಂಭಾಗದಲ್ಲಿ ಒಂದು ಪೀಠವಿದ್ದು ಈ ಪೀಠದಲ್ಲಿ ಕೇಂದ್ರ ಶಿಲ್ಪಗಳನ್ನು ಇಡಲಾಗಿದೆ.

**ಆಲಗೂಡು: ಬಿಸಿಲು ಮಾರಮ್ಮ ದೇವಾಲಯ**

ಆಲಗೂಡಿನ ಮಾರಮ್ಮನ ದೇವಾಲಯದ ಪಕ್ಕದಲ್ಲಿಯೇ ಊರಿನಿಂದ ವಾಯುವ್ಯ ದಿಕ್ಕಿಗೆ ಪೂರ್ವಾಭಿಮುಖವಾಗಿ ಬಿಸಿಲು ಮಾರಮ್ಮನ ದೇವಾಲಯವನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಕ್ರಿ.ಶ.ಸು. ೮ನೇ ಶತಮಾನದಲ್ಲಿ ನಿರ್ಮಾಣವಾಗಿದೆ.[8] ಜಾನಪದ ದೃಷ್ಟಿಯಲ್ಲಿ ಅಧ್ಯಯನ ಮಾಡುವುದಾದರೆ ಮಾರಿ ದೇವತೆಗಳಲ್ಲಿ ವಿಭಿನ್ನ ರೀತಿಯ ಹೆಸರುಗಳನ್ನು ಹೊಂದಿರುವಂತಹ ದೇವತೆಗಳು ಕಂಡುಬರುತ್ತವೆ. ಆ ಹೆಸರುಗಳಲ್ಲಿ ಇಲ್ಲಿರುವ ಬಿಸಿಲು ಮಾರಮ್ಮನ ದೇವಾಲಯವು ಒಂದು. ಈ ದೇವಾಲಯದಲ್ಲಿ ಮಾರಿಯ ಹೆಸರಿನಲ್ಲಿ ಕೆಲವೊಂದು ಕಲ್ಲುಗಳನ್ನಿಟ್ಟು ಆರಾಧನೆ ಮಾಡುವ ವಾಡಿಕೆಯಿದೆ. ಅಂದರೆ ಈ ದೇವಾಲಯ ಕೇವಲ 5 ಅಡಿ ಎತ್ತರವಿರುವ ಗೋಡೆಯನ್ನು ಮಾತ್ರ ಹೊಂದಿದ್ದು, ಮೇಲ್ಭಾಗದಲ್ಲಿ ಯಾವುದೇ ರೀತಿಯ ಮುಚ್ಚುವಿಕೆ ಇರುವುದಿಲ್ಲ. ಅಂದರೆ ಬಿಸಿಲು, ಮಳೆ, ಗಾಳಿ ಎದುರಾಗಿ ಇರುವಂತಹ ದೇವಾಲಯವೇ ಆಗಿರುವುದರಿಂದ ಈ ದೇವಾಲಯಕ್ಕೆ ಬಿಸಿಲು ಮಾರಮ್ಮನ ದೇವಾಲಯವೆಂದು ಕರೆಯುವ ಪ್ರತೀತಿ ಇದೆ. ಉದಾ:- ಮೈಸೂರಿನ ತೋಣಚಿಕೊಪ್ಪಲಿನಲ್ಲಿರುವ ಬಿಸಿಲು ಮಾರಮ್ಮನ ದೇವಾಲಯ ಅತ್ಯುತ್ತಮ ಉದಾಹರಣೆಯಾಗಿದೆ.

ಪ್ರಾಚೀನ ಪರಂಪರೆಯನ್ನು ನೋಡುವುದಾದರೆ ಪ್ರತಿಯೊಂದು ಊರಿನಲ್ಲೂ ಇಂತಹ ಮಾರಮ್ಮನ ದೇವಾಲಯಗಳು ಊರ ಹೊರಭಾಗದಲ್ಲಿ ಕಂಡುಬರುತ್ತವೆ. ಅಂದರೆ ಕೆಲವು ಹಿರಿಯ ಜನರ ಹೇಳಿಕೆಯ ಪ್ರಕಾರ ಊರನ್ನು ಕಾಯುವುದಕ್ಕೋಸ್ಕರವಾಗಿಯೇ ಇಂತಹ ಮಾರಮ್ಮನ ದೇವಾಲಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಊರಿನ ಹೊರಭಾಗದಲ್ಲಿ ನಿರ್ಮಿಸಿರುವುದು ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ.

**ಬನ್ನೂರು**

ತಿರುಮಕೂಡಲು ನರಸೀಪುರಿಂದ 12 ಕಿ.ಮೀ.ವಾಯುವ್ಯಕ್ಕಿರುವ ಹೋಬಳಿ ಕೇಂದ್ರವಾಗಿದೆ. ಕನ್ನಡ ಮೂಲದ 'ಬನ್ನಿಮರ'ದಿಂದ ಈ ಊರಿಗೆ ಬನ್ನೂರು ಎಂಬ ಹೆಸರು ಬಂದಿದೆ. ಗಂಗ ಶ್ರೀಪುರುಷನ ಕಾಲದಲ್ಲಿ ಗಂಗರ ನೆಲೆವೀಡಾಗಿ, ಚೋಳರ ಕಾಲದಲ್ಲಿ ಪ್ರಮುಖ ಪುರವಾಗಿ, ಹೊಯ್ಸಳರ ಕಾಲದಲ್ಲಿ ವಿದ್ಯಾಕೇಂದ್ರವಾಗಿ ಇದು ಮಹತ್ವ ಪಡೆದಿತ್ತು. ಇದು ವಿಜಯನಗರ ಕಾಲದಲ್ಲೂ ಮಹತ್ವ ಪಡೆದಿತ್ತು. ಬನ್ನೂರಿನಲ್ಲಿ ಹನುಮಂತೇಶ್ವರ, ಕೈಲಾಸೇಶ್ವರ, ರಾಮನಾಥ, ಜನಾರ್ಧನ ಮುಂತಾದ ಪ್ರಾಚೀನ ದೇವಾಲಯಗಳಿವೆ.

**ಹನುಮಂತೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಗಂಗರ ಕಾಲದ ಪ್ರಾಚೀನ ದೇವಾಲಯವಾಗಿದೆ. ಈ ದೇವಾಲಯವು ನವರಂಗ ಹಾಗೂ ಮುಖಮಂಟಪಗಳಲ್ಲಿರುವ ದುಂಡಾಕಾರದ ಕಂಬಗಳು ಗಂಗರ ಕಾಲವನ್ನು ಸೂಚಿಸುತ್ತದೆ.[9]

**ಗರ್ಭಗುಡಿ**

ಗರ್ಭಗೃಹದಲ್ಲಿ ಬೃಹತ್ತಾಕಾರದ ಶಿವಲಿಂಗವಿದೆ. ಈ ಶಿವಲಿಂಗವನ್ನು ಹನುಮ ಪ್ರತಿಷ್ಠಿತವೆಂದು ಹೇಳಲಾಗುತ್ತದೆ. (ತಳ ನಕ್ಷೆ-2) ಈ ದೇವಾಲಯಕ್ಕೆ ಒಂದನೆಯ ರಾಜರಾಜನು ದತ್ತಿ ನೀಡಿರುವ ಅಂಶ ಅಲ್ಲೇ ಇರುವ ಶಾಸನದಿಂದ ತಿಳಿಯಬಹುದು. ಉಳಿದ ಮೂರ್‍ನಾಲ್ಕು ಹೊಯ್ಸಳ ಶಾಸನಗಳಿಂದ ಅದಕ್ಕೆ ರಾಜಾಶ್ರಯ ಮುಂದುವರಿದ ಅಂಶ ತಿಳಿದುಬರುತ್ತದೆ.

ಗುಡಿಯ ದಕ್ಷಿಣ ಮಹಾದ್ವಾರದ ಬಳಿಯಿರುವ ಇಮ್ಮಡಿ ದೇವರಾಯನ ಶಾಸನದಿಂದ,[10] ಮಾದರಸನು ಸಾವಿರ ಅಡಕೆ ಮರದ ಸುಂಕವನ್ನು ದಾನಬಿಟ್ಟ ಅಂಶ ಗೊತ್ತಾಗುತ್ತದೆ. ಅಲ್ಲದೇ

ಕುಮಾರ ಕಾಣಿಕೆ ಮೊದೆ ಸುಂಕವನ್ನು ದಾನ ನೀಡಿದನ್ನೂ ದಾಖಲಿಸಿದೆ. ಅಲ್ಲೇ ಇರುವ ಶಾಸನದಿಂದ ಅಚ್ಯುತ ರಾಯನ ಆಳ್ವಿಕೆಯಲ್ಲಿ[11] ತಮ್ಮಣ್ಣ ನಾಯಕನು ವಹ್ನಿಪುರಾಧೀಶ್ವರನಾದ ಹನುಮಂತೇಶ್ವರ ದೇವರಿಗೆ ದಿವ್ಯವಾದ ಹೊಸ ರಥವನ್ನು ನೀಡಿ ಉಮಾ–ಸ್ಕಂದೇಶ್ವರ, ವಿಘ್ನೇಶ್ವರ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ಕಾವೇರಿ ಕಾಲುವೆ ಕೆಳಗಿನ ಭೂಮಿಯನ್ನು ದಾನ ಬಿಟ್ಟ ಅಂಶವು ವೇದ್ಯವಾಗುತ್ತದೆ. ಇದೇ ದೇವರಿಗೆ ಆಚರಸನು ಖಂಡುಗ ಗದ್ದೆಯನ್ನು ಬನ್ನೂರಿನಲ್ಲಿ ಖರೀದಿಸಿ ದಾನ ಬಿಟ್ಟ ಅಂಶವನ್ನು ಸುಮಾರು ಕ್ರಿ.ಶ.16–17ನೇ ಶತಮಾನದ ಶಾಸನವೊಂದು ದಾಖಲಿಸಿದೆ.[12]

ಈ ದೇವಾಲಯದ ಬದಿಯಲ್ಲಿರುವ ಪಾರ್ವತಿ ಗುಡಿಯು ವಿಜಯನಗರ ಕಾಲದ ರಚನೆಯಂತೆ ತೋರಿದರೂ, ಅದರ ತಳಪಾಯದ ಮೇಲಿರುವ ಕ್ರಿ.ಶ.1203ರ ದತ್ತಿ ಶಾಸನದಿಂದ ಅದು ಹೊಯ್ಸಳರಷ್ಟು ಪ್ರಾಚೀನವೆಂದು ಗೊತ್ತಾಗುತ್ತದೆ.[13]

ಹನುಮಂತೇಶ್ವರ ಗುಡಿಯ ಬಳಿ ಮಧ್ವಯತಿ ವ್ಯಾಸತೀರ್ಥರು ಜನಿಸಿದ ಮನೆ ಇತ್ತೆಂದು ಹೇಳಲಾಗುತ್ತಿದ್ದ ಸ್ಥಳದಲ್ಲಿಂದು ವ್ಯಾಸರಾಜ ಶಾಖಾಮಠವನ್ನು ಸ್ಥಾಪಿಸಲಾಗಿದ್ದು, ಹಿಂದೆ ಅಲ್ಲಿದ್ದ ಹುಣಸೇಮರದ ಪೊಟರೆಯಲ್ಲಿ ಅವರು ಜನಿಸಿದರೆಂದು ಹೇಳಲಾಗುತ್ತದೆ. ಕೃಷ್ಣದೇವರಾಯನಿಗೆ ಕುಹುಯೋಗದಲ್ಲಿ ಸರ್ಪದೋಷವಿದ್ದು, ಅದರಿಂದ ಪಾರಾಗಲು ಹತ್ತು ದಿನಗಳ ಕಾಲ ರಾಜ್ಯದ ಅಧಿಕಾರವನ್ನು ವ್ಯಾಸತೀರ್ಥರಿಗೆ ಅವನು ವಹಿಸಿಕೊಟ್ಟಿದ್ದನೆಂದು ಮಧ್ವ ಗುರುಪರಂಪರೆಯಲ್ಲಿ ವಿವರ ಲಭಿಸುತ್ತದೆ. ಅದರಿಂದಾಗಿ ಇವರು ರಾಜಬಿರುದನ್ನು ಧರಿಸುತ್ತಿದ್ದರೆಂದೂ ಹೇಳ ಲಾಗುತ್ತದೆ. ಇವರು ನ್ಯಾಯಾಮೃತ, ತಾತ್ಪರ್ಯಚಂದ್ರಿಕ, ತರ್ಕತಾಂಡವ, ಮಂದಾರಮಂಜರಿ ಮುಂತಾದ ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದು, ಕನ್ನಡದಲ್ಲಿರುವ ಇವರ ಕೀರ್ತನೆಗಳೂ ಪ್ರಖ್ಯಾತವಾಗಿವೆ.

**ಹೆಮ್ಮಿಗೆ : ಸೋಮೇಶ್ವರ ಗುಡಿ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 12 ಕಿ.ಮೀ. ದೂರದಲ್ಲಿ ಹೆಮ್ಮಿಗೆ ಗ್ರಾಮವಿದೆ. ಈ ಗ್ರಾಮವು ನೂತನ ಶಿಲಾಯುಗದ ಅವಶೇಷಗಳನ್ನು ಹೊಂದಿ, ಗಂಗರ ಕಾಲದ ಕಂಬಗಳು, ವಿಗ್ರಹ ಅಲ್ಲಲ್ಲಿ ಚದುರಿವೆಂದು ಡಾ. ದೇವರಕೊಂಡರೆಡ್ಡಿಯವರು ಹೇಳಿದ್ದಾರೆ.[14] ಸೋಮೇಶ್ವರ ದೇವಾಲಯವು ಶಿಥಿಲಾವಸ್ಥೆಯಲ್ಲಿದ್ದು, ಅಲ್ಲಿರುವ ಸೂರ್ಯ ಬಿಂಬ

ಗಂಗರ ಕಾಲದ ಶಿಲ್ಪ ಲಕ್ಷಣಗಳನ್ನು ಹೊಂದಿದೆ.[15] ಹೆಮ್ಮಿಗೆ ಗ್ರಾಮದ ಪೂರ್ವ ದಿಕ್ಕಿಗಿರುವ ಇದು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ**

ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಮೇಲ್ಛಾವಣಿಯಲ್ಲಿ ತೆರೆದ ಕಮಲಾಕೃತಿಯ ಭುವನೇಶ್ವರಿಯಿದ್ದು, ಮೂರು ಹಂತಗಳಿಂದ ಕೂಡಿದ್ದು, ಸುಂದರವಾದ ಕೆತ್ತನೆಯಿಂದ ಕೂಡಿದೆ.

**ಸುಕನಾಸಿ**

ಸುಕನಾಸಿಯು 3X3 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಸುಕನಾಸಿಯ ಬಲಭಾಗದಲ್ಲಿ ಗಣೇಶನ ಶಿಲ್ಪವನ್ನು, ಎಡಭಾಗದಲ್ಲಿ ವೀರಭದ್ರನ ಶಿಲ್ಪವನ್ನು ಇರಿಸಲಾಗಿದೆ. ಅಕ್ಕಪಕ್ಕದಲ್ಲಿ ನಾಗರ ಶಿಲ್ಪಗಳಿವೆ. ದೇವಾಲಯದ ಮುಂಭಾಗದಲ್ಲಿ ಎರಡು ಅಡಿ ಎತ್ತರವಾದ ಬಲಿಪೀಠವನ್ನು ಇರಿಸಲಾಗಿದೆ.

**ರಾವಣೇಶ್ವರ ದೇವಾಲಯ**

ಹೆಮ್ಮಿಗೆ ಗ್ರಾಮದ ಹೊಳೆಯ ದಂಡೆಯಲ್ಲಿರುವ ರಾವಣೇಶ್ವರ ಶಿಲ್ಪವು ದಶರುಂಡವನ್ನುಳ್ಳ ರಾವಣನಿದ್ದು, ಈ ಗುಡಿಯ ಪರಿಸರದಲ್ಲೇ ನಾಲ್ಕಾರು ವೀರಗಲ್ಲುಗಳಿವೆ.

**ಗರ್ಭಗುಡಿ**:- ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ರಾವಣೇಶ್ವರ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.[16] ಗರ್ಭಗುಡಿಯಲ್ಲಿ ಭುವನೇಶ್ವರಿಯಾಗಲಿ ಇತರೆ ಬಿಡಿಶಿಲ್ಪಗಳಾಗಲಿ ಕಂಡುಬರುವುದಿಲ್ಲ.

**ಸುಕನಾಸಿ:-** ಸುಕನಾಸಿಯು 3X3 ಅಡಿ ಸುತ್ತಳತೆಯನ್ನು ಹೊಂದಿದ್ದು, ಈ ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಇದೊಂದು ಚಿಕ್ಕದೇವಾಲಯವಾಗಿದ್ದು ಪೂರ್ವಾಭಿಮುಖವಾಗಿದೆ.

**ಮರಡಿಪುರ :- ಮಲ್ಲಿಕಾರ್ಜುನಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರದಿಂದ ಸುಮಾರು 7 ಕಿ.ಮೀ. ದೂರದ ಪೂರ್ವದಿಕ್ಕಿಗೆ ಮರಡೀಪುರ ಎಂಬ ಗ್ರಾಮದಲ್ಲಿ ಮರುಡೇಶ್ವರ ದೇವಾಲಯ, ಬಾಳೆಲೆ ಮಲ್ಲಿಕಾರ್ಜುನಸ್ವಾಮಿ ದೇವಾಲಯ, ಬಸವ ದೇವಾಲಯ, ಮತ್ತಿತಾಳೇಶ್ವರ ದೇವಾಲಯ, ಮರುಡೇಶ್ವರ ಕಲ್ಯಾಣ ಮಂಟಪ ಮತ್ತು ಪ್ರಾಚೀನ ಕಾಲದ ಎರಡು ಗುಹೆಗಳಿವೆ. ಮರುಡೇಶ್ವರ ದೇವಾಲಯದ ಉತ್ತರ ದಿಕ್ಕಿನಲ್ಲಿ ಕಾವೇರಿನದಿ ಹರಿಯುತ್ತದೆ. ಈ ದೇವಾಲಯದಲ್ಲಿ ನಡೆಯುವ ಪೂಜೆ-ಪುರಷ್ಕಾರಗಳು, ಜಾತ್ರೆಗಳು, ಭಕ್ತಾಧಿಗಳು ಸ್ನಾನ ಮಾಡಲು ಕಾವೇರಿ ನದಿ ಹರಿಯುತ್ತಿರುವುದು ಸೌಭಾಗ್ಯವೇ ಸರಿ. ವಾಸ್ತುಶೈಲಿಯಲ್ಲಿ ಭಿನ್ನತೆ ಹಾಗೂ ಕಾಲದಿಂದ ಕಾಲಕ್ಕೆ ಈ ದೇವಾಲಯ ಜೀರ್ಣೋದ್ಧಾರಗೊಂಡು ಪ್ರಸ್ತುತದಲ್ಲಿ ಹೇಗಿದೆ ಎಂಬುದು ಈ ಲೇಖನದ ಉದ್ದೇಶವಾಗಿದೆ. ಈ ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಮಲ್ಲಿಕಾರ್ಜುನಸ್ವಾಮಿ ದೇವಾಲಯವಿದ್ದು, ಪೂರ್ವಾಭಿಮುಖವಾಗಿದೆ. ದೇವಾಲಯದ ನಿರ್ಮಾಣ ಕಾರ್ಯದ ಬಗ್ಗೆ ಮಾಹಿತಿ ದೊರೆತಿಲ್ಲವಾದರೂ, ವಾಸ್ತುಶೈಲಿಯನ್ನು ನೋಡಿದರೆ ಕ್ರಿ.ಶ.11-12ನೇ ಶತಮಾನದಲ್ಲಿ ನಿರ್ಮಾಣವಾಗಿದ್ದು, ತಲಕಾಡಿನ ಗಂಗರ ಕಾಲಕ್ಕೆ ಸೇರಿದ್ದಾಗಿದೆ.[17]

**ಗರ್ಭಗುಡಿ:-** ಸುಮಾರು ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಗರ್ಭಗುಡಿಯು 6X6 ಅಡಿ ಉದ್ದಗಲವನ್ನು ಹೊಂದಿದೆ. ಈ ಗರ್ಭಗೃಹದ ಮೇಲೆ ತೆರೆದ ಕಮಲಾಕೃತಿಯುಳ್ಳ ಭುವನೇಶ್ವರಿಯನ್ನು ಕಾಣುತ್ತೇವೆ. ಈ ಭುವನೇಶ್ವರಿಯು ಎರಡು ಪಟ್ಟಿಕೆಗಳಿಂದ ಕೂಡಿದ್ದು, ಯಾವುದೇ ಕಥಾನಕ ಶಿಲ್ಪಗಳನ್ನು ಹೊಂದಿಲ್ಲ.

**ಸುಕನಾಸಿ:-** ಇದರ ಸುತ್ತಳತೆಯು 6X6 ಉದ್ದ ಮತ್ತು ಅಗಲವಿದ್ದು, ಮಧ್ಯಭಾಗದಲ್ಲಿ ಏಕಶಿಲ ನಂದಿಯ ಶಿಲ್ಪವನ್ನು ಇರಿಸಲಾಗಿದೆ. ಸುಕನಾಸಿ ಎಡಭಾಗದಲ್ಲಿ ಗಣೇಶನ ಶಿಲ್ಪವನ್ನು

ಕೂರಿಸಲಾಗಿದೆ. ಸುಕನಾಸಿಯ ಮೇಲ್ಭಾಗದಲ್ಲಿ ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯಿದ್ದು, ಎರಡು ಪಟ್ಟಿಕೆಗಳಿಂದ ಕೂಡಿದೆ. ಎರಡು ಪಟ್ಟಿಕೆಗಳ ತಳಭಾಗದಲ್ಲಿ ಕಮಲದ ಚಿತ್ರವನ್ನು ಕೆತ್ತಿಸಲಾಗಿದೆ.

**ನವರಂಗ**:- ನವರಂಗವು ಚೋಳ ವಾಸ್ತುಶೈಲಿಯ ನಾಲ್ಕು ಕಂಬಗಳನ್ನು ಹೊಂದಿದ್ದು, ಒಂಭತ್ತು ಅಂಕಣಗಳಿಂದ ಕೂಡಿದೆ. ಈ ನವರಂಗದ ಮಧ್ಯಭಾಗದಲ್ಲಿ ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯಿದೆ. ಈ ಭುವನೇಶ್ವರಿಯು ಎರಡು ಪಟ್ಟಿಕೆಗಳನ್ನು ಹೊಂದಿದ್ದು, ಪಟ್ಟಿಕೆಗಳ ತಳಭಾಗದಲ್ಲಿ ತೆರೆದ ಕಮಲದ ಚಿತ್ರವನ್ನು ಕೆತ್ತಲಾಗಿದೆ. ಈ ನವರಂಗದ ವಿಶೇಷವೆನೆಂದರೆ ನವರಂಗದ ಸುತ್ತಮುತ್ತಲಿನ ಪ್ರಾಕಾರ(ಗೋಡೆ)ದ ಮಧ್ಯಭಾಗದಲ್ಲಿ ದೀಪವನ್ನು ಉರಿಸಲು ದೀಪಗೂಡು (ಸೊಳ್ಳುಗೂಡು)ಗಳನ್ನು ಕೆತ್ತನೆ ಮಾಡಿದ್ದಾರೆ. ಈ ದೀಪಗೂಡುಗಳನ್ನು ಕೆತ್ತೆನೆ ಮಾಡಿರುವ ಉದ್ದೇಶವು ದೇವಾಲಯದ ನವರಂಗದಲ್ಲಿ ಆಚರಿಸಲಾಗುವ ಪೂಜಾ ಕಾರ್ಯಗಳಿಗೆ ಬೆಳಕು ನೀಡುವುದ್ದಾಗಿರಬೇಕು. ನವರಂಗದ ಈಶಾನ್ಯ ಹಾಗೂ ದಕ್ಷಿಣ ದಿಕ್ಕಿನ ಪ್ರಾಕಾರಗಳಲ್ಲಿ ದೀಪಗೂಡುಗಳು ಕಂಡುಬಂದಿರುವುದಿಲ್ಲದ ಕಾರಣ ಗೋಡೆಗಳು (ನವರಂಗದ) ಕುಸಿದಿದ್ದು, ಜೀರ್ಣೋದ್ಧಾರವಾಗಿರಬೇಕು. ನವರಂಗವು ಪ್ರಮುಖವಾದ ನಾಲ್ಕು ಕಂಬಗಳನ್ನಲ್ಲದೇ ಹನ್ನೆರಡು ಅರೆಗಂಬಗಳನ್ನು ಹೊಂದಿದೆ.

**ಮುಖಮಂಟಪ**:- ಮುಖಮಂಟಪವು ಸುಮಾರು 8 ಅಡಿಗಳ ಉದ್ದ ಮತ್ತು 24 ಅಡಿಗಳ ಅಗಲವನ್ನು ಹೊಂದಿದ್ದು, ಸುಮಾರು ನಾಲ್ಕು ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದೆ. ಮುಖಮಂಟಪವು ವಿಜಯನಗರ ಶೈಲಿ ನಾಲ್ಕು ಕಂಬಗಳನ್ನು ಹೊಂದಿದೆ. ಈ ದೇವಾಲಯದ ನವರಂಗದಲ್ಲಿ ಚೋಳರ ಕಾಲದ ನಾಲ್ಕು ಕಂಬಗಳಿದ್ದು, ಮುಖಮಂಟಪದಲ್ಲಿ ವಿಜಯನಗರ ಅರಸರ ಕಾಲದ ಕಂಬಗಳನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮುಖಮಂಟಪವು ವಿಜಯನಗರ ಆಡಳಿತ ಕಾಲದಲ್ಲಿ ನಿರ್ಮಾಣವಾಗಿರಬೇಕು ಎಂದು ಹೇಳಬಹುದು.

**ಅಧಿಷ್ಠಾನ**:- ಅಧಿಷ್ಠಾನವು ಜಗತಿ, ಕಂಠ, ಕುಮುದ, ಹಾರವನ್ನು ಹೊಂದಿದೆ.

**ಭಿತ್ತಿ**:- ದೇವಾಲಯದ ಭಿತ್ತಿಯ ಮಧ್ಯಭಾಗದಲ್ಲಿ ದೇವಕೊಷ್ಠಕಗಳಿದ್ದು, ದ್ರಾವಿಡ ಶೈಲಿಯ ಅರೆಗಂಬಗಳನ್ನು ಹೊಂದಿದೆ. ಯಾವುದೇ ರೀತಿಯ ದೇವತೆಗಳ ಶಿಲ್ಪಗಳು ಈ ಭಿತ್ತಿಯಲ್ಲಿ ಕಂಡುಬರುವುದಿಲ್ಲ.

**ವಿಮಾನ**:- ಈ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಗರ್ಭಗುಡಿಯ ಮೇಲೆ ವಿಮಾನವನ್ನು ಹೊಂದಿದೆ. ಸ್ಥೂಪದಲ್ಲಿ ಕಳಸವಿದ್ದು, ಪ್ರಸ್ತುತದಲ್ಲಿ ಅದು ಕಂಡುಬರುವುದಿಲ್ಲ. ಅದು ಕುಸಿದು ಕೆಳಗೆ ಬಿದ್ದಿರುವ ಸಾಧ್ಯತೆಯಿದೆ. ದೇವಾಲಯದ ಮುಖಮಂಟಪ ಹಾಗೂ ನವರಂಗದ ಮೇಲ್ಭಾಗದಲ್ಲಿ ನಾಲ್ಕು ಮೂಲೆಗಳಲ್ಲಿಯೂ ನಂದಿಯ ವಿಗ್ರಹಗಳನ್ನು ಗಾರೆಗಚ್ಚುಗಳಿಂದ ಕೆತ್ತನೆ ಮಾಡಲಾಗಿದೆ. ಇದನ್ನು ಗಮನಿಸಿದರೆ ಇದು ಇತ್ತೀಚಿನ ನಿರ್ಮಾಣವೆಂದು ಅರಿವಾಗುತ್ತದೆ.

**ಮಂಟಪ**:- ದೇವಾಲಯದ ಮುಂಭಾಗದಲ್ಲಿ ಪೂರ್ವಾಭಿಮುಖವಾಗಿ ಒಂದು ಮಂಟಪವಿದೆ. ಈ ಮಂಟಪವು ವಿಜಯನಗರ ಶೈಲಿಯ ನಾಲ್ಕು ಕಂಬಗಳನ್ನು ಹೊಂದಿದ್ದು, ಮಂಟಪದ ಮಧ್ಯಭಾಗದಲ್ಲಿ ಸುಮಾರು 14 ಅಡಿಗಳ ಎತ್ತರದ ಕಂಬವಿದ್ದು, ಆ ಕಂಬದ ಮೇಲೆ ಏಕಶಿಲಾ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಿ, ಅದಕ್ಕೊಂದು ಗುಡಿಯನ್ನು ನಿರ್ಮಿಸಿದ್ದಾರೆ. ಇದು ಇತ್ತೀಚಿನ ನಿರ್ಮಾಣವಾಗಿದ್ದು, ಆ ಗುಡಿಗೆ ಭಕ್ತರು ತೆರಳಿ ಪೂಜೆ ಮಾಡಲು ನೆಲಮಟ್ಟದಿಂದ ಗುಡಿಯವರೆಗೆ ಸಿಮೆಂಟ್ ಗಾರೆಗಳಿಂದ ಹಂತಗಳನ್ನು ಕಟ್ಟುತ್ತಿದ್ದಾರೆ. ಗುಡಿಗೆ ದ್ರಾವಿಡ ಶೈಲಿಯ ವಿಮಾನವನ್ನು ಪ್ರದಕ್ಷಿಣಾಪಥವನ್ನು ನಿರ್ಮಿಸಿದ್ದಾರೆ.

**ಮರುಡೇಶ್ವರಸ್ವಾಮಿ ದೇವಾಲಯ**

ದೇವಾಲಯವು ತ್ರಿಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ದೇವಾಲಯದ ವಾಸ್ತುಶೈಲಿಯನ್ನು ಗಮನಿಸಿದರೆ ಹಲವಾರು ವಿಶೇಷತೆಗಳು ಮತ್ತು ಮಾರ್ಪಾಡುಗಳು ಕಂಡುಬರುತ್ತವೆ. ಈ ದೇವಾಲಯದ ನಿರ್ಮಾಣದ ಬಗ್ಗೆ ಸ್ಪಷ್ಟವಾದ ಮಾಹಿತಿ ದೊರೆತಿಲ್ಲ. ದೇವಾಲಯದ ಆಸುಪಾಸಿನಲ್ಲಿ ದೊರೆತಿರುವ ಶಾಸನಗಳು ಕ್ರಿ.ಶ.11-12ನೇ ಶತಮಾನದ್ದಾಗಿದ್ದು, ತಲಕಾಡಿನ ಗಂಗರ ವಾಸ್ತುಶೈಲಿಯನ್ನು ಈ ದೇವಾಲಯ ಹೊಂದಿದೆ. ಆದ ಕಾರಣ ದೇವಾಲಯವನ್ನು ತಲಕಾಡಿನ ಗಂಗರ ಕಾಲದ್ದೆಂದು ಹೇಳಬಹುದು.[18]

**ಗರ್ಭಗುಡಿ**:- ಗರ್ಭಗುಡಿಯಲ್ಲಿ ಸುಮಾರು ಎರಡು ಅಡಿ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗದ ಹಿಂಭಾಗದಲ್ಲಿ ಶಿವನಮೂರ್ತಿ ಹಾಗೂ ನಾಗರ ಹೆಡೆಯ ಶಿಲ್ಪಗಳಿದ್ದು, ಅವುಗಳನ್ನು ಬೆಳ್ಳಿಯಿಂದ (ಸುಮಾರು ಏಳು, ಎಂಟು ವರ್ಷ) ಮಾಡಿಸಿ,

ಗರ್ಭಗುಡಿಯಲ್ಲಿರಿಸಲಾಗಿದೆ. ಗರ್ಭಗುಡಿಯ ಸುತ್ತಳತೆಯು ಸುಮಾರು 6X6 ಅಡಿ ಉದ್ದ ಮತ್ತು ಅಗಲವಾಗಿದ್ದು, ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯನ್ನು ಹೊಂದಿದೆ.

**ಸುಕನಾಸಿ:–** ಯಾವುದೇ ದೇವತಾ ಶಿಲ್ಪಗಳು ಕಂಡುಬರುವುದಿಲ್ಲವಾದರೂ, ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯನ್ನು ಹೊಂದಿದೆ.

**ನವರಂಗ:–** ನವರಂಗವು ನಾಲ್ಕು ಕಂಬಗಳನ್ನು, 12 ಅರೆಗಂಬಗಳನ್ನು ಹೊಂದಿದ್ದು, ನವರಂಗದ ಮಧ್ಯಭಾಗದಲ್ಲಿ ಮಾತ್ರ ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯನ್ನು ಹೊಂದಿದೆ. ನವರಂಗದ ಉತ್ತರ ದಿಕ್ಕಿನಲ್ಲಿ ಗರ್ಭಗುಡಿಯಿದ್ದು, ಇಲ್ಲಿ ಯಾವುದೇ ರೀತಿಯ ದೇವತೆಗಳ ಶಿಲ್ಪಗಳಿಲ್ಲ. ನವರಂಗದಲ್ಲಿ ಗರ್ಭಗುಡಿಯನ್ನು ನಿರ್ಮಿಸಿರುವುದು ವಿಶೇಷವೆನಿಸಿದೆ.

**ಮುಖಮಂಟಪ:–** ಮುಖಮಂಟಪವು ಎರಡು ಕಂಬಗಳಿಂದಲೂ, ಎರಡು ಅರೆಗಂಬಗಳಿಂದಲೂ ಕೂಡಿದೆ. ಮುಖಮಂಟಪದ ಮಧ್ಯಭಾಗದಲ್ಲಿ ಭುವನೇಶ್ವರಿಯಿದೆ. ಮುಖಮಂಟಪದ ಮುಂಭಾಗ ಪೂರ್ವಾಭಿಮುಖವಾಗಿ ನಾಲ್ಕು ಅಡಿ ಎತ್ತರದ ಬಲಿಪೀಠವಿದ್ದು, ಅದರ ಮೇಲ್ಭಾಗದಲ್ಲಿ ಬಸವನ ವಿಗ್ರಹವನ್ನು ಇರಿಸಲಾಗಿದೆ. ದೇವಾಲಯವನ್ನು ಹೊರಭಾಗದಿಂದ ಗಮನಿಸಿದರೆ ಗರ್ಭಗುಡಿಯ ಮೇಲ್ಭಾಗದಲ್ಲಿ ವಿಮಾನವಿದೆ. ಅದರ ಬಲಭಾಗದಲ್ಲಿ ಹಾಗೂ ನವರಂಗದಿಂದ ಉತ್ತರ ದಿಕ್ಕಿಗೆ ಮತ್ತೊಂದು ಗರ್ಭಗುಡಿಯಿದ್ದು, ಆ ಗರ್ಭಗುಡಿಯಲ್ಲಿ ಚಂಡಿಕೇಶ್ವರ ಶಿಲ್ಪವನ್ನು ಇರಿಸಲಾಗಿದೆ. ಈ ಗುಡಿಯ ಮೇಲ್ಭಾಗದಲ್ಲಿ ಭುವನೇಶ್ವರಿಯಾಗಲೀ, ವಿಮಾನವಾಗಲಿ ಕಂಡುಬರುವುದಿಲ್ಲ. ಇದರ ಬಗ್ಗೆ ದೇವಾಲಯದ ಅರ್ಚಕರಾದ ಸಿ. ದೇವರಾಜಮೂರ್ತಿ ಮರಡೀಪುರ ಅವರನ್ನು ವಿಚಾರಿಸಿದಾಗ "ದೇವಾಲಯದ ಹೊರಭಾಗದಲ್ಲಿ ಗರ್ಭಗುಡಿ ಮತ್ತು ನವರಂಗದ ಮಧ್ಯೆ ಸ್ಥಳಾವಕಾಶವಿದ್ದು, ಏಳೆಂಟು ವರ್ಷಗಳ ಹಿಂದೆ ಇಲ್ಲೊಂದು ಗರ್ಭಗುಡಿಯನ್ನು ನಿರ್ಮಿಸಿ ಚಂಡಿಕೇಶ್ವರಿ ದೇವತೆಯನ್ನು ಇರಿಸಲಾಗಿದೆ" ಎಂದು ತಿಳಿಸಿದರು.

ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ನವಗ್ರಹ ಮಂಟಪವಿದೆ. ಮರುಡೇಶ್ವರ ದೇವಾಲಯವು ತ್ರಿಕೂಟ ಶೈವ ದೇವಾಲಯದಂತೆ ಕಂಡರೂ, ಇದು ಮೂಲತಃ ಏಕಕೂಟ ಶೈವ ದೇವಾಲಯ ಮತ್ತೇರಡು ಗರ್ಭಗುಡಿಗಳು ಏಳೆಂಟು ವರ್ಷಗಳ ಹಿಂದೆ ಸೇವಾರ್ಥದಾರರು ನಿರ್ಮಿಸಿದ್ದಾರೆ. ಗರ್ಭಗುಡಿಯೊಂದನ್ನು ಹೊರತು ಪಡಿಸಿ ಸುಕನಾಸಿ, ನವರಂಗ,

ಮುಖಮಂಟಪದ ದ್ವಾರ ಎಲ್ಲವೂ ಸೇವಾರ್ಥದಾರರು ನಿರ್ಮಿಸಿದ್ದು, ದೇವಾಲಯವು ತನ್ನ ಮೂಲ ವಾಸ್ತುಶೈಲಿಯನ್ನು ಕಳೆದುಕೊಂಡಿದೆ.

ಈ ದೇವಾಲಯವು ಮುಜರಾಯಿ ಇಲಾಖೆಗೆ ಸೇರಿದ್ದಾದರೂ, ಪ್ರತಿವರ್ಷ ಸೇವಾರ್ಥ ದಾರರಿಂದ/ಭಕ್ತಾದಿಗಳಿಂದ ಕನಿಷ್ಠ 5 ಲಕ್ಷ ರೂ.ಗಳವರೆಗೆ ಸಂಗ್ರಹವಾಗುತ್ತದೆ ಎಂದು ಅರ್ಚಕರಾದ ಸಿ. ದೇವರಾಜಮೂರ್ತಿ ತಿಳಿಸಿದ್ದಾರೆ. ಹಾಗೆಯೇ ಇಲ್ಲಿನ ಲೆಕ್ಕಾಚಾರಗಳನ್ನು (ಆಯ-ವ್ಯಯ) ನೋಡಿಕೊಳ್ಳಲು ಒಬ್ಬ ಗುಮಾಸ್ತರನ್ನು ಮುಜರಾಯಿ ಇಲಾಖೆಯವರು ನೇಮಿಸಿದರೆ ಸೂಕ್ತವೆನ್ನುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ದೇವಾಲಯದಲ್ಲಿ ಮುಡಿ ಮಾಡಿಸುವುದು, ಪರಮಾಡುವುದು, ಸಾಮಾನ್ಯ ಕುಡಿಯುವ ನೀರು, ಸ್ನಾನದ ವ್ಯವಸ್ಥೆ, ಅಂಗಡಿಗಳಿಂದ ಕೂಡಿದೆ. ಉತ್ತರ ದಿಕ್ಕಿನಲ್ಲಿ ಹರಿಯುವ ಕಾವೇರಿ ನದಿಯ ವಿಹಂಗಮ ನೋಟ ಮತ್ತೊಂದು ಆಕರ್ಷಣೆಯವಾಗಿದೆ.

**ಮೂಗೂರು : ದೇಸೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಪೂರ್ವಾಭಿಮುಖವಾಗಿದೆ. ಪ್ರಾಚೀನ ಗಂಗರ ಕಾಲದ ವಾಸ್ತು ರಚನೆಯನ್ನು ಹೊಂದಿರುವ ದೇವಾಲಯವಾಗಿದೆ.[19] ನಂತರ ಚೋಳ, ಹೊಯ್ಸಳರ ಕಾಲದ (ಸುಮಾರು ಕ್ರಿ.ಶ. 11-12ನೆಯ ಶತಮಾನ) ರಚನೆಯಾಗಿದ್ದು, ವಿಜಯನಗರ ಕಾಲದ ಗೋಪುರವನ್ನುಳ್ಳ ಮಹಾದ್ವಾರ ಹಾಗೂ ವಿಶಾಲವಾದ ಪ್ರಾಕಾರವನ್ನು ಹೊಂದಿದೆ. (ಚಿ. ಸಂ.-6)

**ಗರ್ಭಗುಡಿ**

ಈ ಗರ್ಭಗುಡಿಯು 6 X 6 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ 2 ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.-7) ಮೂಲ ಗರ್ಭಗೃಹವು ಚೋಳರ ಕಾಲದ ರಚನೆಯಾಗಿದ್ದು, ಮುಮ್ಮಡಿ ನರಸಿಂಹನ ಕಾಲದಲ್ಲಿ ಈ ಗುಡಿಗೆ ಸೇರಿದಂತೆ ಶಂಕರೇಶ್ವರ ದೇವಾಲಯವನ್ನು ನಿರ್ಮಿಸಲಾಗಿದೆ. ಇದನ್ನು ಕ್ರಿ.ಶ.1277ರಲ್ಲಿ ನಿರ್ಮಿಸಿರುವ ಸಾಧ್ಯತೆಗಳಿದ್ದು, ಅದೇ ಸಂದರ್ಭದಲ್ಲಿ

ಮೂಗೂರಿನಲ್ಲಿ ಸಂತೆ ಆರಂಭಿಸಿ, ಪಟ್ಟಣ ರಚನೆಗೆ ಮುಂದಾಗಿರುವ ಅಂಶ ಶಾಸನ ವೊಂದರಿಂದ ಸ್ಪಷ್ಟವಾಗುತ್ತದೆ.

**ಸುಕನಾಸಿ:-** 5x5 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ:-** ಈ ಗುಡಿಯು ವಿಶಾಲವಾದ ನವರಂಗವನ್ನು ಹೊಂದಿದ್ದು, (ಚಿ. ಸಂ.-8) ಇದರಲ್ಲಿ ಸೂರ್ಯ, ವಿಷ್ಣು, ಸಪ್ತಮಾತೃಕಾ ಮುಂತಾದ ಶಿಲ್ಪಗಳಿವೆ. ಕೃಷ್ಣದೇವರಾಯ ಹಾಗೂ ಅಚ್ಯುತದೇವರಾಯರ ಕಾಲದಲ್ಲಿ ಇದು ಮತ್ತಷ್ಟು ವಿಸ್ತಾರಗೊಂಡಿದೆ. ನಂತರದಲ್ಲಿ ಹದಿನಾಡು ಹಾಗೂ ಮೈಸೂರು ಅರಸರು ಇದರ ವಿಸ್ತರಣೆಯಲ್ಲಿ ಕೈಜೋಡಿಸಿದ್ದಾರೆ. ಇದರ ಕಟ್ಟಿಗೆಯ ಬಾಗಿಲು ಆಕರ್ಷಕವಾಗಿದೆ. ಈ ಗುಡಿಯ ಹಿಂಬದಿಯಲ್ಲಿ ಪಂಚಲಿಂಗಗಳಿದ್ದು, ಆವರಣದಲ್ಲಿ ಅಮ್ಮನವರ ಗುಡಿ, ಆಂಜನೇಯ, ಚಂಡೀಕೇಶ್ವರ ಮುಂತಾದ ಕಿರುಗುಡಿಗಳಿವೆ. ಇಲ್ಲಿರುವ ಕಾಲಭೈರವನ ಶಿಲ್ಪ ಆಕರ್ಷಕವಾಗಿದೆ. ದೇಶೇಶ್ವರ ಗುಡಿ ಬಳಿ ಇರುವ ಕಬ್ಬು ಅರೆಯುವ ಕಲ್ಲು ವಿಶಿಷ್ಟವಾಗಿದೆ. ಇಂದು ಈ ದೇವಾಲಯದ ಕಲ್ಯಾಣಿಯ ಮೆಟ್ಟಿಲಾಗಿರುವ, ಇಮ್ಮಡಿ ಬಲ್ಲಾಳನ ಆಳ್ವಿಕೆಗೆ ಸೇರಿದ ಕ್ರಿ.ಶ.1177ರ ಶಾಸನದಿಂದ, ಊರ ಪ್ರಭುಗೌಂಡರು ತಿರುವರಂಗಮೌಳಿತಂಬಿಗೆ ಎರಡು ವೇಲಿ ಭೂಮಿಯನ್ನು ದಾನಬಿಟ್ಟ ಅಂಶವನ್ನು ತಿಳಿಸುತ್ತದೆ.[20]

ಅಲ್ಲೇ ಇರುವ ಇನ್ನೊಂದು ಶಾಸನದಿಂದ ಮಾಲಂಗಿಯ ಎಂಬೆರುಮಾನ್ ವಂಡುವರೈ ಪೆರುಮಾಳ್ ದೇವರ ಸೇವೆಗೆಂದು 12 ಪಟ್ಟಣದ ವರ್ತಕ ಸಂಘದವರು ನೀಡಿದ ನಗದು ದಾನದಿಂದ ಬರುವ ಬಡ್ಡಿಯನ್ನು ದಾನಬಿಟ್ಟ ಅಂಶ ಗೊತ್ತಾಗುತ್ತದೆ. ಈ ದೇವಾಲಯದ ಗರುಡಗಂಬದ ಬಳಿ ಇರುವ ಕ್ರಿ.ಶ.1277ರ ಶಾಸನದಿಂದ ಮುಮ್ಮಡಿ ನರಸಿಂಹನ ಆಡಳಿತಾವಧಿಯಲ್ಲಿ ಮೋಗೂರ ಅಧಿಕಾರಿ, ಪ್ರಭು, ಸೆಟ್ಟಿಗಾವುಂಡಗಳು ಊರಲ್ಲಿ ಸಂತೆಯನ್ನು ಆರಂಭಿಸಿ ಪಟ್ಟಣವನ್ನು ನೂತನವಾಗಿ ನಿರ್ಮಿಸಲು ಕಟ್ಟುಪಾಡುಗಳನ್ನು ವಿಧಿಸಿದ ಅಂಶ ತಿಳಿಯಬಹುದು.[21] ಅದರಂತೆ ಈ ಪಟ್ಟಣದಲ್ಲಿ ಮನೆ ಮಾಡುವವರಿಗೆ ಮೊದಲ ವರ್ಷ ಮನೆ ತೆರಿಗೆ ಮನ್ನಾ ಹಾಗೂ ಪಟ್ಟಣಕ್ಕೆ ಹೊರಗಿನಿಂದ ಹೊಸದಾಗಿ ಬಂದು ನೆಲೆಸಿದ ಒಕ್ಕಲಿಗೆ ಮೊದಲ ಎರಡು ವರ್ಷ ಮನೆದೆರೆ ರಿಯಾಯಿತಿ ನೀಡಿದ ಅಂಶವನ್ನೂ ಇದು ದಾಖಲಿಸುತ್ತದೆ. ದೇಸೇಶ್ವರ ಗುಡಿಯ ತಳಪಾಯದ ಮೇಲಿರುವ ಕ್ರಿ.ಶ.1279ರ ಶಾಸನದಿಂದ ನಾಡನ್ನಾಳುವ

ದಂಡನಾಯಕರು, ಗೌಂಡರು ಹಾಗೂ ಪ್ರಜೆಗಳು ಒಂದಾಗಿ ಊರಲ್ಲಿದ್ದ ದೇಶೇಶ್ವರ ದೇವರಿಗೆ ದಾನ ನೀಡಿದ ಅಂಶ ವೇದ್ಯವಾಗುತ್ತದೆ.

ಮುಮ್ಮಡಿ ಬಲ್ಲಾಳನ ಕಾಲದ (ಕ್ರಿ.ಶ.1336) ಶಾಸನ ಹಾಳಾಗಿರುವುದರಿಂದ ಹೆಚ್ಚಿನ ವಿವರ ಲಭಿಸುವುದಿಲ್ಲ. ಈ ದೇವಾಲಯದ ಭಿತ್ತಿಯ ಮೇಲೆ 35 ಅಂಗುಲ ಉದ್ದದ ಅಳತೆಗೋಲಿನ ಎರಡು ತುದಿಗಳನ್ನು 35 ಅಂಗುಲ ಅಂತರದಲ್ಲಿ ರೇಖಿಸಿರುವ ಅಂಶ ಅಲ್ಲೇ ಇರುವ ಶಾಸನ ಹಾಗೂ ರೇಖಾಗುರುತುಗಳಿಂದ ಸ್ಪಷ್ಟವಾಗುತ್ತದೆ. ಇದೇ ಗುಡಿ ಆವರಣ ದಲ್ಲಿರುವ, ಅಚ್ಯುತದೇವರಾಯನ (ಕ್ರಿ.ಶ.1534-1540) ಕಾಲದ ಎರಡು ಶಾಸನಗಳಿಂದ ದೇಶೇಶ್ವರ ದೇವರ ಪೂಜಾವಿಧಿಗೆಂದು ಭೂದಾನ ನೀಡಿದ ಅಂಶ ಗೊತ್ತಾಗುತ್ತದೆ.[22]

ಈ ದೇವಾಲಯವು ಎತ್ತರವಾದ ರಾಯಗೋಪುರವನ್ನು ಹೊಂದಿದ್ದು, ಸುತ್ತಲು ಪ್ರಾಕಾರವನ್ನು ಹೊಂದಿದೆ. ದೇಶೇಶ್ವರ ಗುಡಿ ಮುಂದಿರುವ ದೀಪಮಾಲೆ ಕಂಬವನ್ನು, ಉಡುಸಿಯ ವ್ಯಾಧಿಯಿಂದ ಬಳಲುತ್ತಿದ್ದ ಮೂಗೂರ ಹಂಪೆಯಣ್ಣನು ಚೇತರಿಸಿಕೊಳ್ಳಲೆಂದು ಆಶಿಸಿ, ಅವನ ತಮ್ಮನಾದ ಶಿವಪ್ಪನು ದೇಶಿನಾಥ ದೇವರ ಗುಡಿ ಮುಂದೆ ನಿಲ್ಲಿಸಿದ ಅಂಶ ಆ ಕಂಬದ ಮೇಲಿರುವ ಸುಮಾರು 16ನೆಯ ಶತಮಾನದ ಶಾಸನದಿಂದ ವೇದ್ಯವಾಗುತ್ತದೆ. ಕಂಬದ ಮೇಲೆ ಮತ್ಸೇಂದ್ರನಾಥ ಶಿಲ್ಪವಿದೆ. ಅಲ್ಲೇ ಇರುವ ಕ್ರಿ.ಶ.1628ರ ಶಾಸನದಿಂದ ದೊಡ್ಡಯ್ಯನು ಕೇತಹಟ್ಟಿ ಮಠಕ್ಕೆ ಬತ್ತದ ಗದ್ದೆಯನ್ನು ದಾನ ಬಿಟ್ಟಿರುವ ಅಂಶವನ್ನು ಕಾಣಬಹುದು.[23]

**ತಿರುಮಕೂಡಲು ನರಸೀಪುರ : ಮಾರಮ್ಮನ ದೇವಾಲಯ**

ಈ ದೇವಾಲಯವು ಚೌಡೇಶ್ವರಿ ದೇವಾಲಯಕ್ಕೆ ಪೂರ್ವಾಭಿಮುಖವಾಗಿದೆ. ಇದೊಂದು ಚಿಕ್ಕಗುಡಿಯಾಗಿದೆ. ಈ ದೇವಾಲಯವು 5X12 ಅಡಿ ಉದ್ದ ಅಗಲವನ್ನು ಹೊಂದಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭ ಗುಡಿಯಲ್ಲಿ ಮಾರಮ್ಮ ಮತ್ತು ಗಣೇಶನ ಶಿಲ್ಪಗಳನ್ನು ಇಡಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಚಿಕ್ಕದಾದ ಗಂಗರ ಶೈಲಿಯ ಎರಡು ಕಂಬಗಳನ್ನು ಸೇರಿಸಲಾಗಿದೆ. ಪ್ರಾಯಶಃ

ಈ ಭಾಗದಲ್ಲಿ ಅನಾಥವಾಗಿ ಬಿದ್ದಿರುವಂತಹ ಗಂಗರ ಶೈಲಿಯನ್ನು ಹೊಂದಿರುವ ಎರಡು ಕಂಬಗಳನ್ನು ತಂದು ಇತ್ತೀಚಿನ ಕಾಲಮಾನಗಳಲ್ಲಿ ನಿರ್ಮಿಸಿರಬೇಕು ಎಂದು ದೃಢಪಡುತ್ತದೆ.

## ಚೋಳರ ಕಾಲದ ಶೈವ ದೇವಾಲಯಗಳು

**ಅಕ್ಕೂರು : ಚೋಳೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 11ಕಿ.ಮೀ. ದೂರದಲ್ಲಿ ಅಕ್ಕೂರು ಗ್ರಾಮವಿದೆ. ಅಕ್ಕೂರಿನ ಈಶಾನ್ಯ ದಿಕ್ಕಿನಲ್ಲಿ ಚೋಳೇಶ್ವರ ದೇವಾಲಯವು ಸು.ಕ್ರಿ.ಶ. 12ನೇ ಶತಮಾನದಲ್ಲಿ ನಿರ್ಮಾಣವಾಗಿದೆ.[24] ಇದು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಇದು ಗರ್ಭಗುಡಿ, ಸುಕನಾಸಿಯನ್ನು ಮಾತ್ರ ಹೊಂದಿದ್ದು, ತೆರೆದ ಮುಖಮಂಟಪವಿದೆ.

**ಗರ್ಭಗುಡಿ:-** ಸುಮಾರು 5X5 ಉದ್ದ ಮತ್ತು ಅಗಲ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಮೇಲ್ಭಾಗದಲ್ಲಿ ತೆರೆದ ಕಮಲಾಕೃತಿಯ ಭುವನೇಶ್ವರಿಯಿದ್ದು, ಅದು ಮೂರು ಹಂತಗಳಿಂದ ಕೂಡಿದೆ.

**ಸುಕನಾಸಿ:-** ಸುಕನಾಸಿಯಲ್ಲಿ ಏಕಶಿಲಾ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿಯ ಬಲಭಾಗದಲ್ಲಿ ಚಂಡಿಕೇಶ್ವರಿ, ಲಕ್ಷ್ಮಿ, ನಾರಾಯಣ, ಗಣಪತಿಯ ವಿಗ್ರಹಗಳಿವೆ.
ಮುಖಮಂಟಪ: ದೇವಾಲಯದ ಮುಖಮಂಟಪದಲ್ಲಿ ಗಂಗರ ಕಾಲದ ಎರಡು ಕಂಬಗಳಿವೆ. ದೇವಾಲಯದ ಮುಂಭಾಗ ನಾಲ್ಕು ಅಡಿ ಎತ್ತರದ ಬಲಿಪೀಠವಿದೆ. ದೇವಾಲಯದ ಆಸುಪಾಸಿನಲ್ಲಿ ವೀರಗಲ್ಲುಗಳು ಮತ್ತು ಬಿಡಿಶಿಲ್ಪಗಳಿವೆ.

**ತಡಿಮಾಲಂಗಿ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 16 ಕಿ.ಮೀ. ದೂರದಲ್ಲಿ ತಡಿಮಾಲಂಗಿ ಗ್ರಾಮವಿದೆ. ಈ ಗ್ರಾಮಕ್ಕೆ ತಲಕಾಡಿನಿಂದ ಪೂರ್ವಕ್ಕೆ ದೋಣಿ ಮೂಲಕ ಹೊಳೆದಾಟಿ ಆಚೆ ದಡದಲ್ಲಿರುವ ತಡಿಮಾಲಂಗಿಯನ್ನು ತಲುಪಬಹುದಾಗಿದ್ದು, ಇದು

ಕೊಳ್ಳೇಗಾಲಕ್ಕೆ 8 ಕಿ.ಮೀ ದೂರದಲ್ಲಿದೆ. ಕಾವೇರಿ ನದಿಯ ಬಲದಂಡೆಯ ಮೇಲಿರುವ ಇದು ಹಿಂದೆ ಗಂಗರ ಕಾಲದಲ್ಲಿ ಪ್ರಮುಖ ಊರಾಗಿದ್ದು, ಚೋಳರ ಕಾಲದಲ್ಲಿ ಅಗ್ರಹಾರ ಪಟ್ಟಣವಾಗಿ, ವಿದ್ಯಾಕೇಂದ್ರವಾಗಿ ಮೆರೆದಿರುವ ಸ್ಥಳವಾಗಿದೆ.

**ಮಲ್ಲಿಕಾರ್ಜುನ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ಏಕಕೂಟ ಶೈವ ದೇವಾಲಯ ವಾಗಿದ್ದು, ಪೂರ್ವಾಭಿಮುಖವಾಗಿದೆ. ಇದು ಚೋಳರ ಕಾಲದ್ದಾಗಿದ್ದು, ಅದರ ಮೇಲಿರುವ 1043ರ ಶಾಸನ ಒಂದನೆಯ ರಾಜೇಂದ್ರ ಚೋಳನು ಶುದ್ಧಮಲ್ಲೇಶ್ವರ ದೇವರಿಗೆ ದಾನಬಿಟ್ಟ ಅಂಶವನ್ನು ದಾಖಲಿಸುತ್ತದೆ.[25] ಶಾಸನೋಕ್ತ ಮಲ್ಲೇಶ್ವರ ದೇವಾಲಯವೇ ಇದಾಗಿದ್ದು, ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿರುವ ಇದರ ಭಿತ್ತಿಯು ನಿರಾಡಂಬರವಾಗಿದ್ದು, ಅದನ್ನು ಜೀರ್ಣೋದ್ಧಾರ ಮಾಡಲಾಗಿದೆಯಾದರೂ ಗರ್ಭಗೃಹ ಭಾಗವು ಶಿಥಿಲಾವಸ್ಥೆಯಲ್ಲಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 10X8 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯು ವಿಶಾಲವಾಗಿದ್ದು, ಗರ್ಭಗುಡಿಯ ಮಧ್ಯಭಾಗದಲ್ಲಿ 2 ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡೂವರೆ ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ.ಸಂ-9) ಇದರ ಮೇಲ್ಛಾವಣಿಯಲ್ಲಿ ಕಮಲದ ಮೊಗ್ಗಿನಾಕೃತಿಯುಳ್ಳ ಭುವನೇಶ್ವರಿಯಿದ್ದು, ಇದು 2 ಹಂತಗಳಿಂದ ಕೂಡಿದೆ. ಭುವನೇಶ್ವರಿಯು ಕೂಡ ವಿಶಾಲವಾಗಿದ್ದು, ಸುಮಾರು 8X8 ಅಡಿ ಉದ್ದ ಅಗಲವನ್ನು ಹೊಂದಿದೆ. (ಚಿ. ಸಂ-10)

**ಸುಕನಾಸಿ:-** ಸುಕನಾಸಿಯು 6X6 ಅಡಿ ಸುತ್ತಳತೆಯನ್ನು ಹೊಂದಿದ್ದು, ಇದರ ಬಲಭಾಗದಲ್ಲಿ ಬಿಡಿಶಿಲ್ಪಗಳಿವೆ.

**ನವರಂಗ:-ನ**ವರಂಗವು 9 ಅಂಕಣಗಳಿಂದ ಕೂಡಿದ್ದು, ಪ್ರಧಾನವಾದ ನಾಲ್ಕು ಚೋಳ ಶೈಲಿಯ ಕಂಬಗಳಿವೆ. ನವರಂಗದಲ್ಲಿ ಚೌಡೇಶ್ವರಿ, ವೀರಭದ್ರ, ಶಿವಪಾರ್ವತಿ ಹಾಗೂ ನಂದಿಯ ಶಿಲ್ಪಗಳನ್ನು ಇರಿಸಲಾಗಿದೆ.[26]

**ತಿರುಮಕೂಡಲು ನರಸೀಪುರ : ಅಗಸ್ತ್ಯೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ಕಾವೇರಿ–ಕಪಿಲ ನದಿಗಳ ಸಂಗಮದಲ್ಲಿ ಅಗಸ್ತ್ಯೇಶ್ವರ ದೇವಾಲಯವಿದೆ. ಇಲ್ಲಿನ ಸ್ಥಳ ಪುರಾಣದ ಪ್ರಕಾರ ಈ ಸ್ಥಳದಲ್ಲಿ ಮಹರ್ಷಿ ಅಗಸ್ತ್ಯೇರು ಶಿವನ ಪೂಜೆಗೆ ಲಿಂಗವನ್ನು ಸ್ಥಾಪಿಸುವುದಕ್ಕಾಗಿ ಇಲ್ಲಿಗೆ ಬಂದರೆಂದು ತಿಳಿದುಬರುತ್ತದೆ.[27] ಈ ಮಾಹಿತಿಯ ಮೇರೆಗೆ ಹನುಮಂತನಿಗೆ ನರ್ಮದೆಯಿಂದ ಒಂದು ಲಿಂಗವನ್ನು ತರುವಂತೆ ಮಹರ್ಷಿಗಳು ಆಜ್ಞೆ ಮಾಡಿದರು. ಇದರಿಂದ ಹನುಮಂತನು ಲಿಂಗವನ್ನು ತೆಗೆದುಕೊಂಡು ಬರಲು ಸಾಧ್ಯವಾಗಲಿಲ್ಲ. ಆದ್ದರಿಂದ ಮಹರ್ಷಿಗಳು ಆ ಸ್ಥಳದಲ್ಲೇ ಮರಳಿನ ಒಂದು ಲಿಂಗವನ್ನು ಮಾಡಿ ಪೂಜಿಸಿದರು. ಆದರೆ ಹನುಮಂತನು ಲಿಂಗವನ್ನು ತಡವಾಗಿ ತಂದು ಮರಳಿನ ಲಿಂಗವನ್ನು ತೆಗೆದು, ತಂದ ಲಿಂಗವನ್ನು ಪ್ರತಿಷ್ಠಾಪಿಸಲು ಮುಂದಾದಾಗ ಮರಳಿನ ಲಿಂಗವು ಚೂರು ಚೂರಾಗಿ ಹೊರಬಂದಿತೇ ವಿನಃ ಪೂರ್ಣಲಿಂಗವನ್ನು ತೆಗೆಯಲಾಗಲಿಲ್ಲ. ಆದರಿಂದಾಗಿ ಈಗಿನ ಅಗಸ್ತ್ಯೇಶ್ವರ ಲಿಂಗವು ಸರಿಯಾದ ಮೇಲ್ಮೈಯನ್ನು ಹೊಂದದೆ ಇರುವ ಕಾರಣ ಮೇಲ್ಭಾಗದಲ್ಲಿ ಒಂದೆರಡು ಕುಳಿಗಳು ಕಂಡುಬಂದಿರುವುದನ್ನು ನಾವು ಕಾಣಬಹುದು. ಆದರೆ ಹನುಮಂತನು ತಂದ ಲಿಂಗವನ್ನು ಇಲ್ಲಿಯೇ ಹತ್ತಿರದಲ್ಲಿರುವ ಹನುಮಂತೇಶ್ವರನ ದೇವಾಲಯದಲ್ಲಿ ಪ್ರತಿಷ್ಠಾಪನೆ ಮಾಡಲಾಯಿತ್ತೆಂದು ಪ್ರತೀತಿ ಇದೆ.[28]

ಅಗಸ್ತ್ಯೇಶ್ವರ ದೇವಾಲಯವನ್ನು ಮೂರು ಹಂತಗಳಲ್ಲಿ ನಿರ್ಮಿಸಲಾಗಿದೆ. ಅವುಗಳಲ್ಲಿ ಗರ್ಭಗೃಹ, ಸುಕನಾಸಿ ಮತ್ತು ನವರಂಗವೆಲ್ಲವೂ ತಂಜಾವೂರಿನ ಚೋಳರ ಕಾಲಕ್ಕೆ ಸೇರಿದವು ಎಂದು ವಾಸ್ತುಶೈಲಿಯ ಲಕ್ಷಣದಿಂದ ಹೇಳಲಾಗಿದೆ. ಆದರೆ ದೇವಾಲಯದ ಮುಂಭಾಗದಲ್ಲಿ ಒಂದು ಬಲಿಪೀಠವನ್ನು ನಿರ್ಮಿಸಲಾಗಿದೆ ಮತ್ತು ದೊಡ್ಡದಾದ ನಂದಿಯ ವಿಗ್ರಹವನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ. ಇವುಗಳು ಹೊಯ್ಸಳ ಚಕ್ರವರ್ತಿ ೩ನೇ ವೀರನರಸಿಂಹನ ಕಾಲದವು ಎಂದು ಹೇಳಬಹುದು. ವಿಜಯನಗರ ಅರಸ ಕೃಷ್ಣದೇವರಾಯನ ಕಾಲದಲ್ಲಿ ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ದ್ವಾರಗಳನ್ನು ಹೊಂದಿರುವ ಒಂದು ಹಜಾರವನ್ನು ಮತ್ತು ಪಾರ್ವತಿ ಅಮ್ಮನವರಿಗೆ ಒಂದು ಸಣ್ಣಗುಡಿಯನ್ನು ನಿರ್ಮಿಸಲಾಯಿತು. ವಿಜಯನಗರದ ಆನಂತರದ ಕಾಲದಲ್ಲಿ ಇದೇ ದೇವಾಲಯಕ್ಕೆ ದೊಡ್ಡದಾದ ಒಂದು ಪ್ರಾಕಾರ ಅದರ ಒಳಮುಖದಲ್ಲಿ ಕಂಬದ ಸಾಲುಗಳು ಮತ್ತು ಸಣ್ಣ ಸಣ್ಣ ಕೋಣೆಗಳನ್ನು ನಿರ್ಮಿಸಲಾಗಿದೆ. ಈ ಪ್ರಾಕಾರಕ್ಕೆ ಪೂರ್ವ, ಉತ್ತರ ಮತ್ತು

ದಕ್ಷಿಣದಲ್ಲಿ ದ್ವಾರಗಳನ್ನು ಕಲ್ಪಿಸಲಾಗಿದೆ. ಈ ದ್ವಾರಗಳಲ್ಲಿ ಉತ್ತರ ದ್ವಾರದ ಮೇಲೆ ಎತ್ತರವಾದ ವಿಜಯನಗರ ಶೈಲಿಯ ಗೋಪುರ ಇರುವುದು ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶ.

**ಗರ್ಭಗುಡಿ**

ಈ ಗರ್ಭಗೃಹವು ಸುಮಾರು 2.3X2.3 ಮೀ.ಗಳಷ್ಟು ಚದರ ಸುತ್ತಳತೆಯನ್ನೊಂದಿದೆ. ನಾಲ್ಕು ಮೂಲೆಯಲ್ಲಿ ಗೋಡೆಗೆ ಸೇರಿಸಲಾಗಿರುವ ನಾಲ್ಕು ಕಂಬಗಳಿವೆ. ಗರ್ಭಗೃಹದ ಮಧ್ಯದಲ್ಲಿ ಪಾಣಿಪೀಠದ ಮೇಲೆ ಅಗಸ್ತೇಶ್ವರ ಸ್ವಾಮಿಯ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಕಡೆಯಲಾಗಿದ್ದು, ಭುವನೇಶ್ವರಿಯಲ್ಲಿ ಅರಳಿದ ಕಮಲದ ಕೆತ್ತನೆಯಿದೆ. ಗರ್ಭಗೃಹದ ದ್ವಾರವು ಸರಳವಾದ ಕೆತ್ತನೆಯನ್ನು ಹೊಂದಿದ್ದು ಗರ್ಭಗೃಹದ ಪ್ರವೇಶದ್ವಾರದ ಮೇಲಿನ ಲಲಾಟಬಿಂಬದಲ್ಲಿ ಯಾವುದೇ ಶಿಲ್ಪ ಕಂಡುಬರುವುದಿಲ್ಲ. ಗರ್ಭಗೃಹದಲ್ಲಿರುವ ಲಿಂಗದ ಮೇಲ್ಭಾಗವು ಜಜ್ಜಿದಂತೆ ಕಾಣುವುದರಿಂದ ಹನುಮಂತನ ಮುಷ್ಠಿಯ ಹೊಡೆತದಿಂದ ನಾಶವಾಗಿದೆ ಎಂದು ಸ್ಥಳಪುರಾಣದಿಂದ ತಿಳಿದುಬರುತ್ತದೆ.

**ಸುಕನಾಸಿ**

ಚೋಳರ ಕಾಲದ ಎಲ್ಲಾ ದೇವಾಲಯಗಳಲ್ಲೂ ಸುಂದರವಾದ ಲಿಂಗಗಳು ಕಂಡುಬಂದಿವೆ. ಆದರೆ ಅಗಸ್ತೇಶ್ವರ ದೇವಾಲಯದಲ್ಲಿ ಲಿಂಗದ ಮೇಲ್ಭಾಗ ಮಾತ್ರ ಸ್ವಲ್ಪ ತಗ್ಗಾದಂತೆ ಕಂಡುಬಂದಿದ್ದು, ಸುಕನಾಸಿ 2.3X1.5ಮೀ.ಗಳಷ್ಟಿದ್ದು ಇಲ್ಲಿಯೂ ಸಹ ಗರ್ಭಗೃಹದ ಮಾದರಿಯಲ್ಲಿಯೇ 4 ಗೋಡೆ ಕಂಬಗಳಿವೆ. ಭುವನೇಶ್ವರಿಯಲ್ಲಿ ಅರಳಿದ ಕಮಲದ ಕೆತ್ತನೆಯನ್ನು ಸುಂದರವಾಗಿ ಕಡೆಯಲಾಗಿದೆ.

**ನವರಂಗ**

ನವರಂಗವು 5X5ಮೀ. ಅಗಲವಿದ್ದು, ಚೌಕಾಕಾರದ ಮಾದರಿಯಾಗಿದೆ. ನವರಂಗದ ಮಧ್ಯದಲ್ಲಿ 4 ಕಂಬಗಳಿವೆ. ಇನ್ನುಳಿದ 14 ಕಂಬಗಳನ್ನು ನವರಂಗದ ಗೋಡೆಗೆ ಸೇರಿಸಲಾಗಿದೆ.

ನವರಂಗದ ಮಧ್ಯದಲ್ಲಿರುವ 4 ಕಂಬದ ಮಧ್ಯೆ ಒಂದು ಸುಂದರವಾದ ನಂದಿಯ ಶಿಲ್ಪವನ್ನು ಇಡಲಾಗಿದೆ.

ಪ್ರಾಯಶಃ ಈ ಶಿಲ್ಪವು ಚೋಳರ ನಂತರದ ಕಾಲದ ಶಿಲ್ಪವೆಂದು ಗುರುತಿಸಲಾಗಿದೆ. ನವರಂಗದ ಮಧ್ಯದಲ್ಲಿರುವ 4 ಕಂಬಗಳಲ್ಲಿ ಪ್ರತಿಯೊಂದು ಕಂಬವು ಪೀಠ, ಚೌಕಟ್ಟಾದ ಕೆಳಭಾಗ, ಹುರುಳಿಯಾಕಾರದ ದಿಂಡು, ದಿಂಡಿನಾಕಾರದ ಬೋದಿಗೆಯನ್ನು ನುಣುಪಾಗಿ ಕೆತ್ತಲಾಗಿದೆ. ಅಬ್ಯಾಕಸ್ ಭಾಗವು ಕೆಳಭಾಗದಲ್ಲಿ ಕಮಲದ ದಳದ ಕೆತ್ತನೆಯನ್ನು ಹೊಂದಿದ್ದು ಆಕರ್ಷಕವಾಗಿದೆ. ನವರಂಗಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಅನೇಕ ಕಂಬಗಳನ್ನು ಹೊಂದಿರುವ ದೊಡ್ಡದಾದ ಒಂದು ಹಜಾರವಿದೆ. ಈ ಹಜಾರಕ್ಕೆ ದಕ್ಷಿಣದಲ್ಲಿ 2 ಸಣ್ಣ ಸಣ್ಣ ಕೋಣೆಗಳಿವೆ. ಇವುಗಳಲ್ಲಿ ಶಿವ, ಪಾರ್ವತಿ, ನಟರಾಜ ಮುಂತಾದ ಉತ್ಸವ ಮೂರ್ತಿಗಳನ್ನು ಇಟ್ಟಿದ್ದಾರೆ. ಅಲ್ಲದೆ ಉತ್ತರ ದಿಕ್ಕಿನಲ್ಲಿ ಒಂದು ಮಂಟಪವಿದ್ದು, ಮಂಟಪದ ಮೇಲ್ಭಾಗದಲ್ಲಿ ಕುಮಾರ ಶಿಲ್ಪ (ಷಣ್ಮುಖನ ಶಿಲ್ಪ) ಸುಂದರವಾಗಿ ಮೂಡಿಬಂದಿದೆ. ಇದಲ್ಲದೆ ಸುಂದರವಾದ ಮಹಿಷಾಮರ್ದಿನಿ ಶಿಲ್ಪ ಕಂಡುಬರುತ್ತದೆ. ಹಜಾರದ ಕಂಬಗಳು ಒಟ್ಟು 6 ಇವುಗಳನ್ನು ಉತ್ತರ-ದಕ್ಷಿಣಾಭಿಮುಖವಾಗಿ ಮತ್ತು ಪೂರ್ವ-ಪಶ್ಚಿಮಾಭಿಮುಖವಾಗಿ ಎರಡು ಸಾಲುಗಳಲ್ಲಿ ನಿಲ್ಲಿಸಿದ್ದಾರೆ.

ಹಜಾರದಲ್ಲಿ ಬಾಗಿಲ ಇಕ್ಕೆಲಗಳ ನಿಲುಗಂಭದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪದ ಕೆತ್ತನೆಯಿದೆ. ಈ ದ್ವಾರಪಾಲಕರು ಚರ್ತುಭುಜಾಧಾರಿಗಳಾಗಿದ್ದು, ಕೈಗಳಲ್ಲಿ ಡಮರು, ತ್ರಿಶೂಲ, ಗದೆ ಮತ್ತು ಅಭಯಹಸ್ತವನ್ನು ನೀಡಿರುವಂತೆ ಕಾಣುತ್ತದೆ. ತಲೆಯ ಮೇಲೆ ಕಿರೀಟ, ಕೊರಳಿನಲ್ಲಿ ಕಂಠಾಭರಣ, ಸೊಂಟದಲ್ಲಿ ಸುಂದರವಾದ ಮಣಿಸರ (ಡಾಬು) ಇವುಗಳನ್ನು ಎರಡೂ ಕಡೆ ಇರುವ ದ್ವಾರಪಾಲಕರಲ್ಲಿಯೂ ಕಾಣುತ್ತೇವೆ. ಈ ಹಜಾರದ ಉತ್ತರ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ಇದು ವಿಜಯನಗರದ ಅರಸರ ಕಾಲದ ಸೇರ್ಪಡೆ ಎಂದು ಹೇಳಬಹುದಾಗಿದೆ. ಈ ಹಜಾರಕ್ಕೆ ಎರಡು ಸಣ್ಣ ಕೋಣೆಗಳನ್ನು ಕೂಡಿಸಲಾಗಿದೆ. ಇಲ್ಲಿರುವ ಕಂಬಗಳು ಸುಂದರವಾದ ಉಬ್ಬು ಕೆತ್ತನೆಗಳಿಂದ ಕೂಡಿದ್ದು ಆಕರ್ಷಕವಾಗಿವೆ. ವಿಜಯನಗರ ಶೈಲಿಯ ರೀತಿಯಲ್ಲಿ ಸುತ್ತಲೂ ಸಣ್ಣ ಸಣ್ಣ ಉಬ್ಬು ಕೆತ್ತನೆಗಳನ್ನು ಹೊಂದಿರುವ ಈ ಕಂಬಗಳಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವವುಳ್ಳ ಅನೇಕ ಶಿಲ್ಪಗಳನ್ನು ಕಾಣಬಹುದಾಗಿದೆ. ಉಬ್ಬುಶಿಲ್ಪಗಳಲ್ಲಿ ಮುಖ್ಯವಾದವುಗಳೆಂದರೆ ಲಕ್ಷ್ಮಿ, ಗಣೇಶ, ಶ್ರೀಪುರುಷ, ವ್ಯಾಳ, ಹಂಸ,

ಬೇಡರ, ಯೋಗಿ, ಚಾಮರಧಾರಿಣಿ, ವಿಷ್ಣು, ಶಿವ, ಪಾರ್ವತಿ, ಗೋಪಾಲ, ಬ್ರಹ್ಮ, ರಾಮ–ದಂಪತಿಗಳು, ಭೈರವಿ, ನೃತ್ಯಗಾರ್ತಿ, ಪುರುಷಮೃಗ, ನಟರಾಜ ಇತ್ಯಾದಿಗಳು ಮುಖಮಂಟಪದ ಅಥವಾ ಹಜಾರದಲ್ಲಿ ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿ ಚಿಕ್ಕಕೋಷ್ಠಕಗಳಿವೆ. ಈ ಗುಡಿಯನ್ನು 'ಹುಚ್ಚವರ ಗುಡಿ' ಎಂದು ಕರೆಯುತ್ತಾರೆ.

ಈ ಗುಡಿಯಲ್ಲಿ ಕಂಚಿನ ವಿಗ್ರಹಗಳಿವೆ. ಅವುಗಳೆಂದರೆ ನಟರಾಜ, ಅಮ್ಮನವರ ಮೂರ್ತಿ, ಉಮಾಮಹೇಶ್ವರಿ, ಚಂದ್ರಶೇಖರಸ್ವಾಮಿಯ ಕಂಚಿನ ಶಿಲ್ಪಗಳಿವೆ. ಈ ಗುಡಿಯ ಲಾಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪದ ಉಬ್ಬು ಕೆತ್ತನೆ ಇದೆ. ಎಡಭಾಗದಲ್ಲಿ ಚಾಮುಂಡೇಶ್ವರಿ, ಬಲಭಾಗಕ್ಕೆ ಗಣಪತಿ ವಿಗ್ರಹಗಳಿವೆ. ಅಗಸ್ತೇಶ್ವರ ದೇವಾಲಯದ ಅಧಿಷ್ಠಾನ ಬಹಳ ಸರಳವಾಗಿದ್ದು, ಮೂರು ದಿಂಡುಗಳು ಮಾತ್ರ ಹೊರಗೆ ಕಾಣಿಸುವಂತಿವೆ. ಅವುಗಳೆಂದರೆ ಉಪಾನ, ತ್ರಿಪಟ ಕುಮುದ, ಪ್ರತಿ ಅಧಿಷ್ಠಾನವು ಚೌಕಾಕಾರವಾಗಿ ಮತ್ತು ಆಯಾತಕಾರವಾಗಿ ಹಿನ್ಸರಿತ ಮುನ್ಸರಿತಗಳಾಗಿ ಸರಳವಾಗಿ ಕೆತ್ತನೆ ಮಾಡಿ ಜೋಡಿಸಲ್ಪಟ್ಟಿವೆ. ಭಿತ್ತಿಯ ಭಾಗ ಸರಳವಾಗಿದ್ದು, ಅರೆಗಂಬಗಳಗೂ ಹೊಂದಿಕೊಂಡಂತೆ ಭಿತ್ತಿಯ ಮೇಲ್ಭಾಗದಲ್ಲಿ ಕೂಡುಗಳಿರುವ ಕಪೋತವಿದೆ. ಭಿತ್ತಿಯಲ್ಲಿ ಕೋಷ್ಠಗಳು ಕಾಣಬರುತ್ತವೆ. ಇವೆಲ್ಲವು ಚೋಳ ಮಾದರಿಯ ಶೈಲಿಯಲ್ಲಿವೆ. ಇಲ್ಲಿ ಕೈಪಿಡಿ ಗೋಡೆ ಇಟ್ಟಿಗೆಗಳಿಂದ ನಿರ್ಮಿತವಾಗಿದ್ದು, ಇದನ್ನು ನಂತರದ ಕಾಲದ್ದೆಂದು ಹೇಳಬಹುದು.

ಮೂಲ ಗುಡಿಗೆ ಹೊಂದಿಕೊಂಡಂತೆ ಕಟ್ಟಲಾಗಿರುವ ವಿಜಯನಗರ ಕಾಲದ ಹಜಾರದ ಗೋಡೆಯ ಹೊರಭಾಗಕ್ಕೂ ಇದೇ ರೀತಿಯ ಅಲಂಕಾರವನ್ನು ಅಳವಡಿಸುವುದು ಶಿಲ್ಪಿಯ ಕುಶಲತೆಯನ್ನು ಪ್ರತಿಬಿಂಬಿಸುತ್ತದೆ. ಗರ್ಭಗೃಹದ ಮೇಲ್ಭಾಗದ ಶಿಖರವು ನೇರವಾಗಿ ಛಾವಣಿಯ ಮೇಲೆ ನಿಂತಿದೆ. ತೆಳುವಾದ ಗ್ರೀವ ಮತ್ತು ಅದರ ಮೇಲೆ ಗೊಮ್ಮಟಾಕಾರದ ಶಿಖರ ಇವೆಲ್ಲವೂ ಇಟ್ಟಿಗೆ ಗಾರೆಯಿಂದ ಮಾಡಲ್ಪಟ್ಟಿವೆ. ಇವು ಮೂಲ ಚೋಳರ ಮಾದರಿಯವೆಂದು ಹೇಳಬಹುದು. ವಿಜಯನಗರದ ನಂತರದ ಕಾಲದ ಪ್ರಾಕಾರದ ಒಳಮುಖದಲ್ಲಿ ಅನೇಕ ಕೋಣೆಗಳಿದ್ದು, ಅವುಗಳಲ್ಲಿ ಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ. ಕೋಣೆಗಳಲ್ಲದೆ ಕಂಬದ ಸಾಲನ್ನು ಹೊಂದಿರುವ ಕೈಸಾಲೆ ಇದೆ. ಮೂಲ ಗುಡಿಗೆ ವಾಯುವ್ಯದಲ್ಲಿ ಪೂರ್ವಮಂಗಳ ಕಾಮಾಕ್ಷಿ ಅಥವಾ ಪಾರ್ವತಿ ದೇವಿಯ ಸಣ್ಣ ಗುಡಿಯಿದೆ.

ವಿಜಯನಗರ ಕಾಲದ ಪ್ರಾಕಾರಕ್ಕೆ ಇರುವ ಉತ್ತರ ದ್ವಾರದ ಮೇಲ್ಭಾಗದಲ್ಲಿ ಇಟ್ಟಿಗೆ ಗಾರೆಯಿಂದ 3 ಹಂತಗಳಲ್ಲಿ ನಿರ್ಮಿತವಾದ ಸುಮಾರು 50 ಅಡಿ ಎತ್ತರದ ಗೋಪುರವಿದೆ. ಈ ಗೋಪುರದ ಹೊರಮೈ ಸಂಪೂರ್ಣವಾಗಿ ವಾಸ್ತು ಅಲಂಕರಣೆಯಿಂದ ಕೂಡಿದ್ದರೂ ಪ್ರತಿಹಂತದಲ್ಲೂ ದ್ವಾರಪಾಲಕರ ಗಚ್ಚುಶಿಲ್ಪಗಳಿವೆ. ಗೋಪುರದ ತುದಿಯ ಇಕ್ಕೆಲಗಳಲ್ಲಿ ಗೇವಲ್ ಆಕಾರದಲ್ಲಿ ಕೀರ್ತಿಮುಖ ಲಾಂಛನಗಳಿವೆ. ದೇವಾಲಯದ ಒಳಗೆ ಪ್ರಾಕಾರಕ್ಕೆ ಹೊಂದಿಕೊಂಡಂತೆ 1) ಕಪಿಲೇಶ್ವರ 2) ವಿರೂಪಾಕ್ಷೇಶ್ವರ 3) ಶ್ರೀಕಂಠೇಶ್ವರ 4) ತ್ರಿನೇತ್ರೇಶ್ವರ 5) ಗಂಗಾಧರೇಶ್ವರ 6) ಶೌರವ ನಾರಾಯಣ 7) ದೇಶೇಶ್ವರ 8) ತೇಜೋದೇಶ್ವರ 9) ಆತ್ಮಲಿಂಗೇಶ್ವರ 10) ಊರ್ದ್ವಲಿಂಗೇಶ್ವರ 11) ಸುವರ್ಣಲಿಂಗೇಶ್ವರ 12) ಅಲಿಂಗೇಶ್ವರ 13) ಅರ್ಕೇಶ್ವರ 14) ಉಮಾಮಹೇಶ್ವರಿ 15) ಭುಜಂಗೇಶ್ವರ 16) ಮೃತ್ಯುಂಜಯೇಶ್ವರ 17) ತ್ರಿಮಹೇಶ್ವರಿ 18) ಅನಂತೇಶ್ವರ 19) ತಾರಕೇಶ್ವರ 20) ದಿಗಂಬರೇಶ್ವರ 21) ಮುರುಡೇಶ್ವರ 22) ತ್ರಿನೇಶ್ವರ. ಹೀಗೆ 22 ಗುಡಿಗಳಿದ್ದು, ಪ್ರತಿಯೊಂದು ಗುಡಿಯಲ್ಲಿಯೂ ದೇವತೆ ಶಿಲ್ಪದ ಎದುರು ನಂದಿಶಿಲ್ಪಗಳಿರುವುದು ಕಂಡುಬರುತ್ತದೆ.

ಉತ್ತರ ದಿಕ್ಕಿನಲ್ಲಿರುವ ಎತ್ತರವಾದ ಅಖಂಡ ಶಿಲೆಯಿಂದ ಮಾಡಿದ ಚೋಳರ ಕಂಬವಿದೆ. ಇದನ್ನು ದೀಪಸ್ತಂಬವೆಂದು ಕರೆಯುತ್ತಾರೆ. ಇವುಗಳ ತಳಭಾಗದ ನಾಲ್ಕು ಮುಖಗಳಲ್ಲಿ ಗಣೇಶ, ವೀರಭದ್ರ, ನಂದಿ, ಭಕ್ತ ಹಂಸ ಮುಂತಾದ ಉಬ್ಬುಶಿಲ್ಪಗಳಿವೆ. ಇನ್ನೊಂದು ಮುಖ್ಯವಾದ ವಾಸ್ತು ರಚನೆ ಎಂದರೆ ಈ ದೀಪಕಂಬಕ್ಕೆ ಕಬ್ಬಿಣದ ಸರಪಳಿ ಇದ್ದು, ಈ ಸರಪಳಿಯನ್ನು ಇಂದಿಗೂ ಕಾಣಬಹುದು. ಏಕೆಂದರೆ ಈ ದೇವಾಲಯದ ಪೂರ್ವ ಮತ್ತು ದಕ್ಷಿಣ ದಿಕ್ಕಿಗೆ ಕಾವೇರಿ ಕಪಿಲ ನದಿ ಹರಿಯುವುದರಿಂದ ಬೆಳಕಿಗೋಸ್ಕರ ಈ ವ್ಯವಸ್ಥೆಯನ್ನು ಅಂದಿನ ಕಾಲದಲ್ಲಿಯೇ ಮಾಡಲಾಗಿರಬಹುದೆಂದು ಹೇಳಬಹುದಾಗಿದೆ. ಒಟ್ಟಿನಲ್ಲಿ ಈ ದೇವಾಲಯ ತಂಜಾವೂರಿನ ಚೋಳರ ಕಾಲದ ಬೃಹದೇಶ್ವರ ದೇವಾಲಯದಂತೆ ಇಂದಿಗೂ ಅದೇ ಸಂಸ್ಕೃತಿಗೆ ಪಾತ್ರವಾಗಿ ಉಳಿದುಕೊಂಡು ಬಂದಿದೆ ಎನ್ನಬಹುದು. ಇದರಿಂದ ದೇವಾಲಯದ ಗರ್ಭಗೃಹದ ದಕ್ಷಿಣ ಗೋಡೆಯ ಮೇಲೆ ಶಕವರ್ಷ 1478 ಅಂದರೆ ಕ್ರಿ.ಶ.1556ರ ನವೆಂಬರ್ 2 ರಂದು ಹಾಕಿಸಿರುವ ಶಾಸನ ಕಂಡುಬರುತ್ತದೆ.[29]

**ಹನುಮಂತೇಶ್ವರ ದೇವಾಲಯ**

ಈ ಹನುಮಂತೇಶ್ವರ ದೇವಾಲಯವು ಚೋಳರ ಕಾಲದಲ್ಲಿ ನಿರ್ಮಿತವಾದ ದೇವಾಲಯವಾಗಿದೆ.[30] ಈ ದೇವಾಲಯವು ತಿರುಮಕೂಡಲಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿದ್ದು ಸರಳವಾದ ತಳವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿ ಮತ್ತು ನವರಂಗವನ್ನು ಹೊಂದಿದೆ.

**ಗರ್ಭಗುಡಿ:–** ಈ ಗರ್ಭಗೃಹವು ೩x೩ಮೀ. ಚ.ಸುತ್ತಳತೆಯನ್ನು ಹೊಂದಿದ್ದು, ಒಂದು ಅಡಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವಿದ್ದು, ಸ್ವಲ್ಪ ಭಗ್ನಗೊಂಡಿದೆ. ಆದರೆ ಗರ್ಭಗೃಹದ ಒಳಭಾಗದ ಮೇಲ್ಭಾಗದಲ್ಲಿ ಭುವನೇಶ್ವರಿಯಿದ್ದು, ಭುವನೇಶ್ವರಿಯಲ್ಲಿ ನಾಭಿಚಂದ್ರ ರೂಪದ ಕೆತ್ತನೆ ಇದೆ. ಐತಿಹ್ಯದ ಪ್ರಕಾರ ಅಗಸ್ತೇಶ್ವರ ದೇವಾಲಯಕ್ಕೆಂದು ತಂದಿರುವ ಲಿಂಗವನ್ನು ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಲಾಗಿದೆ.[31] ಗರ್ಭಗೃಹ ಮತ್ತು ಸುಕನಾಸದ ಬಾಗಿಲುವಾಡಗಳು ಅಷ್ಟು ಅಲಂಕಾರಿಕವಿಲ್ಲದೆ ಇದ್ದರೂ ಸುಕನಾಸದ ಬಾಗಿಲುವಾಡದ ಮೇಲ್ಭಾಗದ ಲಾಲಾಟಬಿಂಬದಲ್ಲಿ ಸುಂದರವಾದ ಗಣೇಶನ ಉಬ್ಬುಶಿಲ್ಪವನ್ನು ಕಡೆಯಲಾಗಿದೆ.

**ಸುಕನಾಸಿ:–** ಸುಕನಾಸಿಯು ೩x೨ಮೀ. ಉದ್ದ ಅಗಲವನ್ನು ಹೊಂದಿದ್ದು, ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ:–** ನವರಂಗದಲ್ಲಿ ಮಾತ್ರ ನಾಲ್ಕು ಕಂಬಗಳು ಅಗಸ್ತೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬಗಳ ಮಾದರಿಯಲ್ಲಿವೆ. ಈ ಕಂಬಗಳು ಚೌಕಾಕಾರದ ಪೀಠ, ಚೌಕ ಮತ್ತು ಬಹುಮುಖ ದಿಂಡನ್ನು ಹೊಂದಿದೆ. ದೇವಾಲಯದ ಅಧಿಷ್ಠಾನವು ಸಂಪೂರ್ಣವಾಗಿ ನೆಲದಲ್ಲಿ ಮುಚ್ಚಿಹೋಗಿದೆ. ಪ್ರಾಯಶಃ ಇದು ಕೂಡ ಮೂರು ದಿಂಡುಗಳುಳ್ಳ ಅದಿಷ್ಠಾನವನ್ನು ಹೊಂದಿದಂತೆ ಕಾಣುತ್ತದೆ. ಏರುವಿನ್ಯಾಸದಲ್ಲಿ ನವರಂಗದ ಹೊರಭಾಗ ಅಗಸ್ತೇಶ್ವರ ದೇವಾಲಯದಲ್ಲಿರುವಂತೆ ದೇವಕೋಷ್ಠಗಳನ್ನೊಂದಿದೆ. ದೇವಸ್ಥಾನದ ಬಾಗಿಲುವಾಡವು ಒಳಚಾಚಿಕೊಂಡಂತಿದ್ದು, ಹೊರಭಾಗಕ್ಕೆ ಚೋಳ ಶೈಲಿಯ ಎರಡು ಅರೆಗಂಬಗಳಿವೆ. ದೇವಾಲಯದ ಗರ್ಭಗೃಹದ ಮೇಲೆ ವಿಮಾನ ಕಂಡುಬರುವುದಿಲ್ಲ. ಇದೊಂದು ತಂಜಾವೂರಿನ

ಚೋಳರ ಕಾಲದಲ್ಲಿ ನಿರ್ಮಾಣವಾಗಿರಬಹುದಾದ ಒಂದು ಸರಳವಾದ ದೇವಾಲಯವೆಂದು ಹೇಳಬಹುದಾಗಿದೆ.

**ತಿರುಮಕೂಡಲು ನರಸೀಪುರ : ವೀರಭದ್ರೇಶ್ವರ ದೇವಾಲಯ**

ಶ್ರೀವೀರಭದ್ರೇಶ್ವರಸ್ವಾಮಿ ದೇವಾಲಯವು ತಿರುಮಕೂಡಲು ನರಸೀಪುರ ತಾಲೂಕಿನ ಕಾವೇರಿ ಮತ್ತು ಕಪಿಲ ನದಿಗಳ ಸಂಗಮದಲ್ಲಿದೆ. ಈ ದೇವಾಲಯವು ಉತ್ತರಾಭಿಮುಖವಾಗಿರುವ ಒಂದು ಚಿಕ್ಕ ದೇವಾಲಯವಾಗಿದೆ. ಈ ದೇವಾಲಯದ ವಾಸ್ತು ಲಕ್ಷಣವನ್ನು ನೋಡಿದರೆ ಚೋಳರ ಕಾಲದ ದೇವಾಲಯಗಳ ಮಾದರಿಯಲ್ಲಿದೆ. ಈ ದೇವಾಲಯವು ಏಕಕೂಟವನ್ನು ಹೊಂದಿದ್ದು, ಶುದ್ಧ ದ್ರಾವಿಡ ಶೈಲಿಯ ದೇವಾಲಯವಾಗಿದೆಯೆಂದು ಹೇಳಬಹುದು. ಸುಮಾರು ಕ್ರಿ.ಶ.10ನೇ ಶತಮಾನದಲ್ಲಿ ನಿರ್ಮಾಣಗೊಂಡಂತಿದೆ.

**ಗರ್ಭಗುಡಿ**

ಗರ್ಭಗೃಹವು 10X10 ಅಡಿ ಉದ್ದ ಅಗಲದಿಂದ ಕೂಡಿದ್ದು ನಾಲ್ಕು ಮೂಲೆಯಲ್ಲಿ ಗೋಡೆಗೆ ಸೇರಿದಂತೆ ನಾಲ್ಕು ಕಂಬಗಳಿವೆ. ಗರ್ಭಗೃಹದ ಮಧ್ಯದಲ್ಲಿ ಕಲ್ಲುಪೀಠದ ಮೇಲೆ ಶ್ರೀವೀರಭದ್ರಸ್ವಾಮಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವು ಚತುರ್ಭುಜವನ್ನು ಹೊಂದಿದ್ದು, ಒಂದು ಕೈಯಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಬಾಣ, ಚಾಕು ಅಥವಾ ಖಡ್ಗ, ಮತ್ತೊಂದು ಕೈಯಲ್ಲಿ ಅಭಯಹಸ್ತವನ್ನು ತೋರಿಸುತ್ತಿರುವುದು ಕಂಡು ಬರುತ್ತದೆ. ಮೇಲ್ಭಾಗ ದಲ್ಲಿ ಭುವನೇಶ್ವರಿ ಇದ್ದು, ಈ ಭುವನೇಶ್ವರಿಯಲ್ಲಿ ನಕ್ಷತ್ರಕಾರವಾಗಿ ಕಲ್ಲು ಚಪ್ಪಡಿಗಳನ್ನು ಜೋಡಿಸಿದ್ದು, ಅದರ ಮೇಲಿನ ಭಾಗ ಚೌಕಾಕಾರವಾಗಿದ್ದು ಮಧ್ಯದಲ್ಲಿ ಸುಂದರವಾದ ಅರಳಿದ ಕಮಲದ ಕೆತ್ತನೆಯನ್ನು ಮಾಡಲಾಗಿದೆ.

**ಸುಕನಾಸಿ**

ಸುಕನಾಸಿಯು ಗರ್ಭಗೃಹದಷ್ಟೇ ಚದರ ಸುತ್ತಳತೆಯನ್ನು ಹೊಂದಿದೆ. ಗರ್ಭಗೃಹದ ಮಾದರಿಯಲ್ಲಿಯೇ 4 ಮೂಲೆಯಲ್ಲಿ ಗೋಡೆಗೆ ಸೇರಿದಂತೆ 4 ಕಂಬಗಳು ಇರುವುದು. ಇಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ. ಇಲ್ಲಿಯೂ ಸಹ ಮೇಲ್ಭಾಗದಲ್ಲಿ

ಭುವನೇಶ್ವರಿಯಿದ್ದೂ ಭುವನೇಶ್ವರಿಯಲ್ಲಿ ಸಿಂಹಮುಖ ಅಥವಾ ವ್ಯಾಳದ ಮುಖ ಇರುವ ರೀತಿಯ ಕೆತ್ತನೆ ಸೊಗಸಾಗಿ ಮೂಡಿಬಂದಿದೆ.

ದೇವಾಲಯವು ಜಗತಿ, ಅಧಿಷ್ಠಾನ ಮತ್ತು ಇನ್ನಿತರ ತಳವಿನ್ಯಾಸದ ಭಾಗವು ಭೂಮಿಯಲ್ಲಿ ಮುಳುಗಿಹೋಗಿದೆ. ಆದರೆ ಮೇಲಿನ ಭಾಗ ಆಯತಾಕಾರವಾಗಿದೆ. ದೇವಾಲಯದ ಹೊರಭಾಗದ ಭಿತ್ತಿಯಲ್ಲಿ ಸುತ್ತಲೂ ಸಣ್ಣ ಸಣ್ಣ ಚೋಳ ಮಾದರಿಯ ಅರೆಗಂಬಗಳಿವೆ. ಕಪೋತದ ಭಾಗವು ಇಂಗ್ಲೀಷ್‌ನ 'ಎಸ್' ಅಕ್ಷರದ ಆಕಾರದ ರೀತಿಯಲ್ಲಿ ಇಳಿಜಾರಾಗಿದ್ದು ಸರಳವಾದ ಕೆತ್ತನೆಯಿಂದ ಕೂಡಿದ ಚಪ್ಪಡಿಗಳಿಂದ ಜೋಡಿಸಲ್ಪಟ್ಟಿವೆ. ಹಾಗೂ ಕಪೋತದ ಸುತ್ತಲೂ ಕೂಡುಗಳಿದ್ದು, ಮೇಲ್ಭಾಗದಲ್ಲಿ ಯಾವುದೇ ರೀತಿಯ ಕೈಪಿಡಿ ಗೋಡೆಯಾಗಲೀ, ಶಿಖರವಾಗಲೀ ಕಂಡುಬರುವುದಿಲ್ಲ. ಈ ವೀರಭದ್ರಸ್ವಾಮಿಯ ದೇವಾಲಯವು ಒಂದು ಚಿಕ್ಕ ದೇವಾಲಯವಾಗಿದ್ದು, ಭೂಮಿಯಿಂದ ಮೇಲೆ ದೇವಾಲಯದ ಎತ್ತರ ಸುಮಾರು 8 ಅಡಿಗಳಿದ್ದು, ಪ್ರಾಯಶಃ ಇದು ಪ್ರಾಚೀನತೆಯಲ್ಲಿ ಗಂಗರ ಕಾಲದ ದೇವಾಲಯವಾಗಿರಬಹುದೆಂದು ಊಹಿಸಬಹುದಾದರೂ ತದನಂತರದ ಕಾಲದಲ್ಲಿ ಗಂಗರನ್ನು ಸೋಲಿಸಿ ಈ ಭಾಗದಲ್ಲಿ ಆಳ್ವಿಕೆ ನಡೆಸಿದ ತಂಜಾವೂರಿನ ಚೋಳ ಆಳ್ವಿಕೆಯ ಕಾಲದಲ್ಲಿಯೂ ಈ ದೇವಾಲಯ ಜೀರ್ಣೋದ್ಧಾರಗೊಂಡಿರಬಹುದು. ಈ ಹಿನ್ನೆಲೆಯಿಂದ ದೇವಾಲಯವನ್ನು ಚೋಳರ ಕಾಲಕ್ಕೆ ಹೋಲಿಸಬಹುದಾಗಿದೆ.

## ಹೊಯ್ಸಳರ ಕಾಲದ ಶೈವ ದೇವಾಲಯಗಳು

### ಮುಡುಕುತೊರೆ

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 18 ಕಿ.ಮೀ. ದೂರದಲ್ಲಿ, ತಲಕಾಡಿನಿಂದ 4 ಕಿ.ಮೀ ಉತ್ತರಕ್ಕೆ ಕಾವೇರಿಯ ಎಡದಂಡೆಯ ಮೇಲೆ ಟಿ.ಬೆಟ್ಟಹಳ್ಳಿ ಗ್ರಾಮದ ವ್ಯಾಪ್ತಿಯಲ್ಲಿರುವ ಯಾತ್ರಾಸ್ಥಳ ತಲಕಾಡಿನ ಪಂಚಲಿಂಗಗಳಲ್ಲಿ ಮುಡುಕುತೊರೆಯ ಮಲ್ಲಿಕಾರ್ಜುನ ಲಿಂಗವೂ ಒಂದಾಗಿರುವುದರಿಂದ ಪ್ರಸಿದ್ಧವಾಗಿದೆ. ಕಾವೇರಿ ನದಿಯು ಇಲ್ಲಿ ಪಶ್ಚಿಮ ದಕ್ಷಿಣಕ್ಕೆ ತಿರುಗುವುದರಿಂದ ಇದನ್ನು ಮುಡುಕುತೊರೆ ಎಂದು ಕರೆಯುತ್ತಾರೆ.[32]

**ಮಲ್ಲಿಕಾರ್ಜುನ ದೇವಾಲಯ**

ಮಲ್ಲಿಕಾರ್ಜುನ ದೇವಾಲಯ ಗಂಗರ ಕಾಲದಷ್ಟು ಪುರಾತನವೆನಿಸಿದರೂ, ಹೊಯ್ಸಳರ ಕಾಲದಿಂದ ಅದರ ಉಲ್ಲೇಖ ದೊರೆಯುತ್ತದೆ.[33] ಸುಮಾರು 400 ಮೆಟ್ಟಿಲುಗಳನ್ನೇರಿ, ಮುಮ್ಮಡಿ ಕೃಷ್ಣರಾಜ ಒಡೆಯರಿಂದ ನಿರ್ಮಾಣಗೊಂಡಿತ್ತೆಂದು ಹೇಳಲಾಗುವ ಕಿರಿದಾದ ದ್ವಾರಗೋಪುರದ ಮೂಲಕ ಪ್ರಾಕಾರವನ್ನು ಪ್ರವೇಶಿಸಿದರೆ ಎದುರಾಗುವುದೇ ಶಾಸನೋಕ್ತ ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯ. ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿರುವ ಈ ದೇವಾಲಯದ ಕಂಬಗಳು ಕಿರುಗಾತ್ರವಾಗಿದ್ದು, ದೇವಾಲಯವು ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ**:- ಈ ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗೃಹದಲ್ಲಿರುವ ಶಿವಲಿಂಗವು ಸ್ವಯಂಭುಲಿಂಗವಾಗಿ ಎರಡು ಅಡಿ ಎತ್ತರವಿದೆ. ಅದರ ಮೇಲೆ ಕಾಮಧೇನುವಿನ ಗೊರಸಿನ ಗುರುತಿದೆ ಎಂದು ಹೇಳಲಾಗುತ್ತದೆ. (ಚಿ. ಸಂ.-11)

**ನವರಂಗ**:- ಗಂಗರ ಕಾಲದ ನಾಲ್ಕು ಕಂಬಗಳು ನವರಂಗದಲ್ಲಿ ಕಂಡು ಬರುತ್ತವೆ. ನವರಂಗದ ಕಂಬದ ಮೇಲಿರುವ ರಾಮ ಲಕ್ಷ್ಮಣ, ಹನುಮಂತ, ನರ್ತಕಿಯರ ಮುಂತಾದ ಉಬ್ಬುಶಿಲ್ಪಗಳು, ಗಂಗಶಿಲ್ಪ ಲಕ್ಷಣವನ್ನು ಹೋಲುತ್ತವೆ.[34] ಗರ್ಭಗೃಹದ ಎಡಬದಿಯಲ್ಲಿರುವ ಭ್ರಮರಾಂಬ ಗುಡಿಯೂ ಸೇರಿದಂತೆ ಪ್ರಾಕಾರ ಇತ್ಯಾದಿಗಳು ವಿಜಯನಗರ ಕಾಲದ್ದಾಗಿವೆ. ಬದಿಯಲ್ಲಿರುವ ಚಿತ್ರಮಂಟಪದ ಭಿತ್ತಿಯ ಮೇಲೆ ಮೈಸೂರು ಅರಸರ ಕಾಲದ ವರ್ಣಚಿತ್ರಗಳಿವೆ. ಗಿರಿಜಾಕಲ್ಯಾಣದ ದೃಶ್ಯವನ್ನು ಒಳಗೊಂಡ ಕೈಲಾಸದ ಒಡ್ಡೋಲಗವನ್ನು ಅಲ್ಲಿ ಚಿತ್ರಿಸಲಾಗಿದ್ದು, ಇಂದು ಮಸುಕಾಗುತ್ತಿದ್ದು ಇಂದು ರಕ್ಷಿಸುವ ಅಗತ್ಯವಿದೆ.

ಈ ದೇವಾಲಯದ ಹಿಂಬದಿಯಲ್ಲಿರುವ 5 ಕಿರುಗುಡಿಗಳಲ್ಲಿ ಶಿವಲಿಂಗಗಳಿವೆ. ಮೂಲಗರ್ಭಗೃಹದ ಹೊರಭಿತ್ತಿಯ ಮೇಲೆ ಗಂಗಶಿಲ್ಪ ಲಕ್ಷಣವುಳ್ಳ ಮಹಿಷಮರ್ಧಿನಿಯ ಸುಂದರ ಶಿಲ್ಪವಿದೆ. ಬೆಟ್ಟದ ತಪ್ಪಲಿನಲ್ಲಿ ಮಾಘ ಪೂರ್ಣಿಮೆಯೆಂದು ಜರುಗುವ ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿ ತಲಕಾಡಿನ ತಾಂಡವೇಶ್ವರನನ್ನು ಇಲ್ಲಿ ತಂದಿರಿಸಲಾಗುತ್ತದೆ. ವಿನಾಯಕ, ಷಣ್ಮುಖ, ಭ್ರಮರಾಂಬ ಸಹಿತ ಮಲ್ಲಿಕಾರ್ಜುನ ದೇವರುಗಳಿಗಾಗಿ ಪ್ರತ್ಯೇಕ

ರಥಗಳನ್ನು ಏಕಕಾಲದಲ್ಲಿ ಎಳೆಯಲಾಗುತ್ತದೆ. ಆ ರಥಗಳಲ್ಲಿ ಮಲ್ಲಿಕಾರ್ಜುನ-ಪಾರ್ವತಿಯರ ರಥವು ಚಿತ್ತಾಕರ್ಷಕವಾಗಿರುತ್ತದೆ. ಈ ಜಾತ್ರೆಗೆ ಒಂದು ತಿಂಗಳು ಮೊದಲೇ ಆರಂಭವಾಗುವ ದನಗಳ ಜಾತ್ರೆಯೂ ಪ್ರಸಿದ್ಧವಾಗಿದ್ದು, ಜಾತ್ರೆಯ ಕೊನೆಯ ದಿನ ನಡೆಯುವ ದನಗಳ ಓಟದ ಸ್ಪರ್ಧೆಯಲ್ಲಿ ಗೆಲ್ಲುವ ಎತ್ತಿನ ಮೇಲೆ ಪಾರ್ವತಿಯನ್ನು ಕೂರಿಸಿಕೊಂಡು ಸುತ್ತಲಿನ ಊರುಗಳಲ್ಲಿ ಮೆರೆಸಿದ ನಂತರ ದೇವಿಗೆ ಮಡಿಲಕ್ಕಿ ತುಂಬಿ ಶ್ರೀಶೈಲದಲ್ಲಿ ನಡೆಯುವ ಮಲ್ಲಿಕಾರ್ಜುನನ ಜಾತ್ರೆಗೆ ಕಳುಹಿಸಲಾಗುತ್ತದೆ. ಅಲ್ಲಿಂದ ಹಿಂತಿರುಗಿದ ನಂತರ ಮತ್ತೆ ದೇವಿಯನ್ನು ಸುತ್ತಮುತ್ತಲಿನ ಊರಲ್ಲಿ ಮೆರೆಸಿ, ಗುಡಿಗೆ ಸೇರಿಸಲಾಗುತ್ತದೆ.[35] ಮುಡುಕುತೊರೆಯಲ್ಲಿ ವೀರಶೈವರ ಮಠ ಹಾಗೂ ಕಲ್ಯಾಣಮಂಟಪಗಳಿವೆ. ಅಲ್ಲದೇ ಅರಸು ಹಾಗೂ ಉಪ್ಪಾರ ಜನಾಂಗದವರ ಕಲ್ಯಾಣಮಂಟಪಗಳೂ ಇವೆ. ಮುಡುಕುತೊರೆಯ ಮಲ್ಲಿಕಾರ್ಜುನ ಲಿಂಗವು ಪಂಚಮುಖಿ ಶಿವನ ವಾಮದೇವ ಭಾಗವೆಂಬ ನಂಬಿಕೆಯಿದ್ದು, ತಲಕಾಡಿನ ಪಂಚಲಿಂಗದರ್ಶನ ಸಂದರ್ಭದಲ್ಲಿ ದರ್ಶನಾರ್ಥಿಗಳು ಸಂದರ್ಶಿಸಬೇಕಾದ ಐದು ಶಿವಲಿಂಗಗಳಲ್ಲಿ ಇದೂ ಒಂದಾಗಿದೆ. ಮುಡುಕುತೊರೆ ಬೆಟ್ಟದ ಮೇಲಿಂದ ಪಶ್ಚಿಮಕ್ಕೆ ದೃಷ್ಟಿ ಹಾಯಿಸಿದೆ ಕಾಣಸಿಗುವ, ಅಂಕುಡೊಂಕಾಗಿ ಹರಿಯುತ್ತಿರುವ ಕಾವೇರಿ ನದಿಯ ಹಸಿರು ಬಯಲಿನ ವಿಹಂಗಮ ನೋಟ ಮನಸ್ಸಿಗೆ ಆವರ್ಣನೀಯ ಆನಂದವನ್ನು ನೀಡುತ್ತವೆ.[36]

ತಲಕಾಡಿನ ಉತ್ತರಕ್ಕೆ 5 ಕಿ.ಮೀ ದೂರದಲ್ಲಿ 250 ಅಡಿ ಎತ್ತರದ ಮುಡುಕುತೊರೆ ಬೆಟ್ಟವಿದೆ. ಇದನ್ನು ಸೋಮಪರ್ವತ ಎನ್ನುತ್ತಾರೆ. ಈ ಬೆಟ್ಟದ ಮೇಲೆ ಗಂಗರ ಕಾಲದ ಮಲ್ಲಿಕಾರ್ಜುನ ಸ್ವಾಮಿ ದೇವಾಲಯವಿದೆ. ಇಲ್ಲಿ ವರ್ಷಕ್ಕೆ ಮೂರು ತೇರುಗಳಾಗುತ್ತದೆ. ಈ ಮೂಲ ದೇವಾಲಯವು ವಿಜಯನಗರದ ವಾಸ್ತು ಶೈಲಿಯಲ್ಲಿ ಜೀರ್ಣೋದ್ಧಾರವಾಗಿದೆ. ಈ ದೇವಾಲಯ ರಾಷ್ಟ್ರದಲ್ಲೇ ಪಶ್ಚಿಮಾಭಿಮುಖವಾದ ಏಕೈಕ ದೇವಾಲಯ.[37]

**ಸೋಮನಾಥಪುರ**

ತಿರುಮಕೂಡಲು ನರಸೀಪುರದಿಂದ 10 ಕಿ.ಮೀ. ಉತ್ತರಕ್ಕಾದಂತೆ ಬನ್ನೂರು ರಸ್ತೆಯಲ್ಲಿರುವ ಚಾರಿತ್ರಿಕ ಮಹತ್ವದ ಪ್ರವಾಸಿ ತಾಣವಾಗಿರುವ ಸೋಮನಾಥಪುರವನ್ನು ಮೊದಲು ವಿಧ್ಯಾನಿಧಿಪ್ರಸನ್ನ ಸೋಮನಾಥಪುರ ಎಂದು ಕರೆಯಲಾಗಿದೆ.[38]

**ಪಂಚಲಿಂಗೇಶ್ವರ ದೇವಾಲಯ: (ಶಿಥಿಲಾವಸ್ಥೆಯಲ್ಲಿದೆ)**

ಸೋಮನಾಥಪುರದ ಈಶಾನ್ಯ ಭಾಗದಲ್ಲಿ ಕೇಶವ ದೇವಾಲಯದಿಂದ ಅನತಿ ದೂರದಲ್ಲಿ ಪಂಚಲಿಂಗೇಶ್ವರ ಗುಡಿಯಿದೆ. (ಚಿ. ಸಂ.-12) ಈ ದೇವಾಲಯವು 1269ರಲ್ಲಿ ನಿರ್ಮಾಣಗೊಂಡಿದ್ದು, ಈ ದೇವಾಲಯವು ಪೂರ್ವಾಭಿಮುಖವಾಗಿದೆ.

ಪಂಚಲಿಂಗೇಶ್ವರ ಗುಡಿಯಲ್ಲಿ ಬಿಜ್ಜಲೇಶ್ವರ(ಮೂಲಲಿಂಗ), ಹೆಮ್ಮೇಶ್ವರ, ದವಳೇಶ್ವರ, ಸೋಮೇಶ್ವರ ಹಾಗೂ ಭೈರವೇಶ್ವರ ಎಂಬ ಸ್ಥಳೀಯ ಹೆಸರಿನಿಂದ ಗುರುತಿಸಲಾಗಿದೆಂದು ಹೇಳಲಾಗಿದೆ.[39] ಆದರೆ ಶಾಸನದಲ್ಲಿ ಹೇಳಿರುವಂತೆ ಇದು ಪಂಚಕೂಟವನ್ನು ಹೊಂದಿರದೆ, ಒಂದೇ ಸಾಲಿನಲ್ಲಿ ನಾಲ್ಕು ಗರ್ಭಗೃಹ ಹಾಗೂ ಅಂತರಾಳಗಳನ್ನು ಹೊಂದಿರುವ ಚತುಷ್ಕೂಟ ವಾಗಿದ್ದು, ನಾಲ್ಕಕ್ಕೂ ಸೇರಿದಂತೆ ವಿಶಾಲವಾದ ತೆರೆದ ಸಭಾಮಂಟಪವಿದೆ. (ಚಿ ಸಂ-13) ಇಲ್ಲಿ ಹೆಸರಿಸಿರುವ ಐದು ಲಿಂಗಗಳಲ್ಲಿ ಹೆಮ್ಮೇಶ್ವರ ಹಾಗೂ ರೇವಣೇಶ್ವರ ಲಿಂಗಗಳನ್ನು ದಂಡನಾಯಕನು ತನ್ನ ತಂದೆ-ತಾಯಿ ಹೆಸರಲ್ಲೂ, ಸೋಮನಾಥ ಲಿಂಗವನ್ನು ತನ್ನ ಹೆಸರಿನಲ್ಲೂ ಪ್ರತಿಷ್ಠಾಪಿಸಿರುವುದು ಉಲ್ಲೇಖಾರ್ಹವಾಗಿದೆ. (ತಳನಕ್ಷೆ-3) ಆದುದರಿಂದ ಇಲ್ಲಿ ಕೇವಲ ಪಾಣಿಪೀಠಗಳಷ್ಟೆ ಕಾಣಸಿಗುತ್ತವೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವಿಂದು ಶಿಥಿಲಾವಸ್ಥೆಯಲ್ಲಿದೆ.

ಗರ್ಭಗೃಹದ ಮೇಲಿರುವ ಆಕರ್ಷಕ ಶಿಖರ ಹಾಗೂ ಸಭಾಮಂಟಪದ ಹೊಯ್ಸಳ ಕಂಬಗಳಿಂದಾಗಿ ಉಲ್ಲೇಖಾರ್ಹವಾಗಿದೆ. ಈ ದೇವಾಲಯದ ದಕ್ಷಿಣ ಭಾಗದಲ್ಲಿ ಸೋಮೇಶ್ವರ ದೇವಾಲಯವಿತ್ತೆಂದು ಶಾಸನೋಲ್ಲೇಖವಿದೆಯಾದರೂ ಇಂದು ಆ ಹೆಸರಿನ ಯಾವುದೇ ದೇವಾಲಯವಿಲ್ಲ ಉಳಿದಿಲ್ಲ. ಈ ದೇವಾಲಯದ ಸುತ್ತಾ ಬೆಳೆದಿರುವ ಮುಳ್ಳುಗಂಟಿಯನ್ನು ಸ್ವಚ್ಛಪಡಿಸಿ, ಪ್ರವಾಸಿಗರ ವೀಕ್ಷಣೆಗೆ ಇದನ್ನು ಸಜ್ಜುಗೊಳಿಸುವ ಅಗತ್ಯವಿದೆ.

**ಬನ್ನೂರು : ಕೈಲಾಸೇಶ್ವರ ದೇವಾಲಯ**

ಕೈಲಾಸೇಶ್ವರ ದೇವಾಲಯವು ಹನುಮಂತೇಶ್ವರ ದೇವಾಲಯದ ವಾಯುವ್ಯ ದಿಕ್ಕಿನಲ್ಲಿದೆ. ಈ ದೇವಾಲಯವು ಉತ್ತರಾಭಿಮುಖವಾಗಿದೆ. ಇದು ಹೊಯ್ಸಳರ ಕಾಲದ್ದಾಗಿದ್ದು, ಸಾಕಷ್ಟು ಸೇರ್ಪಡೆಗಳೊಂದಿಗೆ ವಿಜಯನಗರ ಕಾಲದ್ದೆಂಬಂತೆ ಭಾಸವಾಗುತ್ತದೆ. ಈ ಗುಡಿಯಲ್ಲಿ

ಇರುವ ಕ್ರಿ.ಶ.1135ರ ಶಾಸನದಿಂದ ಮಹಾಜನರು ಸ್ಥಾಪಿಸಿದ ಅಗ್ಗಿಷ್ಟಕೆಗೆಂದು 12 ಗದ್ಯಾಣಗಳನ್ನು ದಾನ ಬಿಟ್ಟ ಅಂಶ ಗೊತ್ತಾದರೆ,[40] ಕ್ರಿ.ಶ.1192ರ ಇನ್ನೊಂದು ಶಾಸನದಿಂದ ಮಧುರಾಂತಕ ಚತುರ್ವೇದಿಮಂಗಲದ ಸಾಮವೇದಿ ಭಟ್ಟನ ಮಡದಿಯು ಈ ದೇವರ ನಂದಾದೀಪಕ್ಕೆಂದು ಮೂರು ಗದ್ಯಾಣವನ್ನು ದತ್ತಿ ಬಿಟ್ಟ ಅಂಶ ಗೊತ್ತಾಗುತ್ತದೆ.[41] ಅಲ್ಲೇ ಇರುವ ಕ್ರಿ.ಶ.1553ರ ಶಾಸನ ಗುಂಡಸಮುದ್ರ ತಟಾಕವನ್ನು ದೇವರಿಗೆ ದಾನಬಿಟ್ಟಿದ್ದನ್ನು ದಾಖಲಿಸುತ್ತದೆ. ಈ ದೇವಾಲಯವನ್ನು ಇಂದು ಸಂಪೂರ್ಣ ಜೀರ್ಣೋದ್ಧಾರ ಮಾಡಲಾಗಿದೆ. ಈ ಗುಡಿಯ ಸಮೀಪದಲ್ಲೇ ಕ್ರಿ.ಶ.19ನೆಯ ಶತಮಾನದಲ್ಲಿದ್ದ ಕರಿಯಪ್ಪಸ್ವಾಮಿ ಗದ್ದುಗೆ ಇದೆ ಹಾಗೂ ಕೈಲಾಸೇಶ್ವರ ದೇವಾಲಯದ ಬಗ್ಗೆ ತಿಳಿಸುತ್ತದೆ.[42]

**ಚಿದರವಳ್ಳಿ**

ತಿರುಮಕೂಡಲು ನರಸೀಪುರದಿಂದ 15 ಕಿ.ಮೀ. ದೂರದಲ್ಲಿ ಚಿದರವಳ್ಳಿ ಗ್ರಾಮವಿದೆ. ಈ ಗ್ರಾಮದಲ್ಲಿ ಗಣಪತಿ, ಸೋಮೇಶ್ವರ ದೇವಾಲಯಗಳು ಹಾಗೂ ಅನೇಕ ವೀರಗಲ್ಲು ಮಾಸ್ತಿಕಲ್ಲು ಹಾಗೂ ಬಿಡಿಶಿಲ್ಪಗಳು ಕಂಡುಬರುತ್ತವೆ.

**ಗಣಪತಿ ಗುಡಿ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, 3 ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಗರ್ಭಗುಡಿಯಲ್ಲಿ ಗಣಪತಿ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ಕ್ರಿ.ಶ. 13ನೇ ಶತಮಾನದಲ್ಲಿ ನಿರ್ಮಾಣವಾದ ಚಿಕ್ಕ ದೇವಾಲಯವಾಗಿದೆ.[43]

**ಗರ್ಭಗುಡಿ**

ಗರ್ಭಗುಡಿಯು 4X4 ಸುತ್ತಳತೆಯನ್ನು ಹೊಂದಿದ್ದು, ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಈ ದೇವಾಲಯವು ಏರುವಿನ್ಯಾಸದಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ ಹಾಗೂ ಗ್ರೀವದ ಮೇಲೆ ಶಿಖರದ ಬದಲು ದೇವಕೋಷ್ಠಕವನ್ನು ನಿರ್ಮಿಸಿ ಅದರ ಮಧ್ಯಭಾಗದಲ್ಲಿ ಪಾರ್ವತಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಪಾರ್ವತಿ ವಿಗ್ರಹದ ಎರಡು ಬದಿಗಳಲ್ಲಿಯೂ ದ್ರಾವಿಡ ಶೈಲಿಯ ಅರೆಗಂಭಗಳಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖದ ರಚನೆ

ಕಂಡುಬರುತ್ತದೆ. ಇದು ಯಾವುದೇ ಸುಕನಾಸಿ, ನವರಂಗ, ಮುಖಮಂಟಪಗಳನ್ನು ಹೊಂದಿರುವುದಿಲ್ಲ.

**ಸೋಮೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಬಸ್ ನಿಲ್ದಾಣದಲ್ಲಿರುವ ಏಕಕೂಟ ಶೈವ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯವು ಹೊಯ್ಸಳ ಶೈಲಿ ಹೊಂದಿದ್ದು, 2ನೇ ಬಲ್ಲಾಳನ ಕಾಲದಲ್ಲಿ ನಿರ್ಮಾಣವಾಗಿದೆ.[44] ಈ ದೇವಾಲಯವು ಚಿಕ್ಕ ದೇವಾಲಯವಾಗಿದ್ದು, ಗರ್ಭಗುಡಿ ಮತ್ತು ಸುಕನಾಸಿಯನ್ನು ಮಾತ್ರ ಹೊಂದಿದೆ.

**ಗರ್ಭಗುಡಿ:–** ಗರ್ಭಗುಡಿಯು 3X3 ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ:–** ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿಯ ಮುಂಭಾಗ ಬಾಗಿಲಿನ ಬಲಭಾಗದಲ್ಲಿ ಸ್ತ್ರೀ ದೇವತೆಯ ಪ್ರತಿಮೆಯನ್ನು, ಎಡಭಾಗದಲ್ಲಿ ಗಣಪತಿ ವಿಗ್ರಹವಿದೆ. ದೇವಾಲಯದ ಮುಂಭಾಗದಲ್ಲಿ ಎರಡು ಅಡಿ ಎತ್ತರದ ಬಲಿಪೀಠವಿದೆ.

**ತಡಿಮಾಲಂಗಿ** : **ಮಹಾಲಿಂಗೇಶ್ವರ ದೇವಾಲಯ**

ಮಹಾಲಿಂಗೇಶ್ವರ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿದ್ದು, ಪೂರ್ವಾಭಿಮುಖ ವಾಗಿರುವ ಏಕಕೂಟ ಶೈವ ದೇವಾಲಯವಾಗಿದೆ.

**ಗರ್ಭಗುಡಿ**

ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ದೇವಾಲಯದ ಗರ್ಭಗುಡಿ ಸುಮಾರು 3 ಅಡಿ ಎತ್ತರದ ಅಧಿಷ್ಠಾನದ ಮೇಲೆ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡೂವರೆ ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.–14) ಶಿವಲಿಂಗದ ಮುಂಭಾಗ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ.

ಸಂ.–15) ಈ ದೇವಾಲಯದ ನಿರ್ಮಾಣದ ಕಾಲಮಾನ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಇದು ಹೊಯ್ಸಳ ಕಾಲದ್ದಾಗಿದ್ದು, ಸುಮಾರು ಕ್ರಿ.ಶ.1290ರ ಶಾಸನವಿರುವುದು ಈ ಗುಡಿಯ ಬದಿಯಲ್ಲಿಯೇ.[45]

**ಕುರುಬೂರು : ಮಹಾಲಿಂಗೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 8 ಕಿ.ಮೀ. ದೂರದಲ್ಲಿ ಕುರುಬೂರು ಗ್ರಾಮವಿದೆ. ಕುರುಬೂರು ಗ್ರಾಮದ ಆಗ್ನೇಯ ದಿಕ್ಕಿಗೆ ತಿರುಮಕೂಡಲು ನರಸೀಪುರ–ಕೊಳ್ಳೇಗಾಲ ರಸ್ತೆಯಲ್ಲಿ ಮಹಾಲಿಂಗೇಶ್ವರ ದೇವಾಲಯವಿದೆ. ಇದು ಅತಿಚಿಕ್ಕ ದೇವಾಲಯ ವಾಗಿದ್ದು, ಗರ್ಭಗುಡಿ, ಸುಕನಾಸಿ ಮಾತ್ರವಿದೆ.

**ಗರ್ಭಗುಡಿ:–** ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಸುಮಾರು ಒಂದು ಅಡಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.–16) ಗರ್ಭಗುಡಿಯಲ್ಲಿ ಭುವನೇಶ್ವರಿ ಕಂಡುಬರುವುದಿಲ್ಲ.

**ಸುಕನಾಸಿ:–** ಸುಕನಾಸಿಯು 6X6 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.–17) ಈ ದೇವಾಲಯದ ನಿರ್ಮಾತೃ ಹೊಯ್ಸಳರ 3ನೇ ವೀರಬಲ್ಲಾಳನ ಕಾಲದಲ್ಲಿ ಕ್ರಿ.ಶ.13ನೇ ಶತಮಾನದಲ್ಲಿ ನಿರ್ಮಿಸಲಾಗಿದೆ.[46] ಇತ್ತೀಚೆಗೆ ಈ ದೇವಾಲಯವನ್ನು ಸಿಮೆಂಟ್, ಇಟ್ಟಿಗೆಗಳಿಂದ ಜೀರ್ಣೋದ್ಧಾರ ಮಾಡಿದ್ದಾರೆ.

**ತುಂಬಲ**

ತಿರುಮಕೂಡಲು ನರಸೀಪುರದಿಂದ 12 ಕಿ.ಮೀ ಅಂತರದಲ್ಲಿ ರಂಗಸಮುದ್ರ ರಸ್ತೆಬದಿಯಲ್ಲಿ ಕಾವೇರಿಯ ಬಲದಂಡೆ ಮೇಲಿರುವ ಚಾರಿತ್ರಿಕ ಮಹತ್ವದ ಸ್ಥಳವಾಗಿದೆ.

**ಕಾಶಿಲಿಂಗ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ಏಕಕೂಟ ಶೈವ ದೇವಾಲಯ ವಾಗಿದ್ದು, ಪೂರ್ವಾಭಿಮುಖವಾಗಿದೆ. ಈ ದೇವಾಲಯದ ಬಗ್ಗೆ ಖಚಿತ ಮಾಹಿತಿ

ದೊರೆಯದಿದ್ದರೂ ವಾಸ್ತು ಲಕ್ಷಣವನ್ನು ಗಮನಿಸಿದಾಗ ಹೊಯ್ಸಳರ ಕಾಲದ ನಿರ್ಮಾಣವೆಂದು ಹೇಳಬಹುದು.

**ಗರ್ಭಗುಡಿ:–** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಅರ್ಧಅಡಿ ಎತ್ತರದ ಪಾಣಿಪೀಠದ ಮೇಲೆ ಒಂದು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇತ್ತೀಚೆಗೆ ಕಂಚಿನಿಂದ ಮಾಡಿದ ಕಿರೀಟವನ್ನು ಹಾಕಲಾಗಿದೆ. ಶಿವಲಿಂಗದ ಎಡಭಾಗದಲ್ಲಿ ಕಂಚಿನಿಂದ ಮಾಡಿದ ನಾಗರಹಾವಿನ ಹೆಡೆಯ ವಿಗ್ರಹವನ್ನು ಇರಿಸಲಾಗಿದೆ. ಗರ್ಭಗುಡಿಯ ಮುಂದೆ ತೆರೆದ ಅಂತರಾಳವಿದ್ದು ಯಾವುದೇ ಶಿಲ್ಪಗಳಿಲ್ಲ. ದೇವಾಲಯದ ಮುಂಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

## ವಿಜಯನಗರ ಕಾಲದ ಶೈವ ದೇವಾಲಯಗಳು

**ಆಲಗೂಡು:ಲಕ್ಷ್ಮಿ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 3 ಕಿ.ಮೀ. ದೂರದಲ್ಲಿ ಆಲಗೂಡು ಗ್ರಾಮವಿದೆ. ಈ ದೇವಾಲಯವು ಪೂರ್ವ ದಿಕ್ಕಿನಲ್ಲಿದ್ದು ವಿಜಯನಗರ ಕಾಲದಲ್ಲಿ ನಿರ್ಮಾಣ ವಾದ ಶಾಕ್ತ ಪಂಥದ ದೇವಾಲಯವಾಗಿದೆ. ಇದು ಸಂಪೂರ್ಣವಾಗಿ ಇಟ್ಟಿಗೆ ಗಾರೆಯಿಂದ ನಿರ್ಮಿತವಾಗಿದ್ದು, ಶುದ್ಧ ದ್ರಾವಿಡ ಶೈಲಿಯ ವಿಮಾನ ಮಾದರಿಯನ್ನು ಹೊಂದಿದೆ. ಗರ್ಭಗುಡಿ: ಮೂಲಗರ್ಭಗುಡಿಯಲ್ಲಿ ಲಕ್ಷ್ಮಿದೇವಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲದೆ ಈ ದೇವಾಲಯಕ್ಕೆ 'ಕಾಮದೇವರ' ದೇವಾಲಯವೆಂದು ಕರೆಯುವ ವಾಡಿಕೆ! ಪ್ರಸ್ತುತ ಈ ದೇವಾಲಯದಲ್ಲಿ ಗಣಪತಿ ಶಿಲ್ಪ, ಮುರುಗ, ಷಣ್ಮುಖ (ಕುಮಾರ), ವೀರಾಂಜನೇಯ ಇವುಗಳನ್ನು ನವರಂಗದ ಭಾಗದಲ್ಲಿ ಇಡಲಾಗಿದೆ. ಅಂದರೆ ಗರ್ಭಗುಡಿಯ ಇಕ್ಕೆಲಗಳಲ್ಲಿ ಗಾರೆಗಚ್ಚಿನ ಪೀಠದ ಮೇಲೆ ಗಣಪತಿ ಮತ್ತು ಷಣ್ಮುಖನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಉತ್ತರ ದಿಕ್ಕಿನ ಗಾರೆಗಚ್ಚಿನ ಮೇಲೆ ವೀರಾಂಜನೇಯ ಶಿಲ್ಪವನ್ನು ಕೂರಿಸಲಾಗಿದೆ. ಗೋಡೆಗೆ ಹೊಂದಿಕೊಂಡಂತೆ ಗೋಡೆಯ ಮೇಲ್ಭಾಗದಲ್ಲಿ ಭುವನೇಶ್ವರಿ ಹಾಗೂ ಏಳು ವಿವಿಧ ರೂಪವನ್ನು ಹೊಂದಿರುವ ಲಕ್ಷ್ಮಿ ಶಿಲ್ಪಗಳನ್ನು ಸುಂದರವಾಗಿ ಕಡೆದು ಗೋಡೆಯ ಭಿತ್ತಿಯ ಮೇಲ್ಭಾಗದಲ್ಲಿ ಒಂದೊಂದು ಚಾಚು ಪೀಠವನ್ನು ಮಾಡಿ ಚಾಚು ಪೀಠಗಳ ಮೇಲ್ಭಾಗದಲ್ಲಿ ಲಕ್ಷ್ಮಿಯರ

ಶಿಲ್ಪಗಳನ್ನು ಕೂರಿಸಲಾಗಿದೆ. ಈ ಹಿನ್ನೆಲೆಯಿಂದ ಪ್ರಾಚೀನ ಪರಂಪರೆಯನ್ನು ಹೊಂದಿರುವ ಆಲಗೂಡು ಪ್ರಾಂತ್ಯದಲ್ಲಿ ಲಕ್ಷ್ಮೀ ದೇವಾಲಯಕ್ಕೆ ಅಲ್ಲದೆ ಲಕ್ಷ್ಮಿ ಶಿಲ್ಪಗಳಿಗೆ ಪ್ರೇರಣೆ ನೀಡಿರುವುದು ಇಲ್ಲಿರುವ ಶಿಲ್ಪಕಲೆಗಳಿಂದ ಕಾಣಬಹುದಾಗಿದೆ.

ಅಲ್ಲದೆ ಈ ದೇವಾಲಯದಲ್ಲಿ ವರ್ಷಕ್ಕೆ ಕೆಲವು ಬಾರಿ ಲಕ್ಷ್ಮಿ ಶಿಲ್ಪವನ್ನು ಉತ್ಸವಮೂರ್ತಿಯಾಗಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಈ ಊರಿನ ಪೂಜಾ ಕೈಂಕರ್ಯಗಳ ಆಚರಣೆ ಪ್ರಸ್ತುತಪಡಿಸುತ್ತದೆಯೆಂದು ಲಕ್ಷ್ಮಿ ದೇವಾಲಯದ ಆರ್ಚಕರಾದ ಸಿದ್ಧನಾಯಕ ಎಂಬುವವರು ತಿಳಿಸಿದರು.

**ನವರಂಗ:–** ನವರಂಗದಲ್ಲಿ ಯಾವುದೇ ಕಂಬಗಳು ಇರುವುದಿಲ್ಲ. ನವರಂಗದಲ್ಲಿ ಷಣ್ಮುಖನ ಶಿಲ್ಪವಿದ್ದು, ಈ ಶಿಲ್ಪವನ್ನು ಪೀಠದ ಮೇಲೆ ನಿಲ್ಲಿಸಿದ್ದಾರೆ. ಷಣ್ಮುಖನು ತನ್ನ ವಾಹನವಾದ ನವಿಲಿನ ಪಕ್ಕದಲ್ಲಿ ನಿಂತಿದ್ದು ಎರಡು ಕೈಗಳನ್ನು ಹೊಂದಿದ್ದು, ಒಂದು ಕೈಯಲ್ಲಿ ಭರ್ಜಿಯನ್ನು ಮತ್ತೊಂದು ಕೈಯಲ್ಲಿ ಫಲವನ್ನು ಹಿಡಿದಿರುವುದು ಹಾಗೂ ಕಾಲಿಗೆ ಗೆಜ್ಜೆಗಳನ್ನು ತೊಟ್ಟಿರುತ್ತಾನೆ. ಸೊಂಟಕ್ಕೆ ಹೊಂದಿಕೊಂಡಂತೆ ಸುಂದರವಾದ ನೆರಿಗೆಯಿಂದ ಕೂಡಿದ ವಸ್ತ್ರವನ್ನು, ಕಂಠದಲ್ಲಿ ಕಂಠಾಭರಣವನ್ನು, ತಲೆಯ ಮೇಲ್ಭಾಗದಲ್ಲಿ ಕಿರೀಟವನ್ನು ಕೈಗಳಲ್ಲಿ ಕೈಕಡಗ, ತೋಳುಬಂಧಿ ಧರಿಸಿರುವುದು ಕಂಡುಬರುವುದರಿಂದ ಈ ಶಿಲ್ಪವು ಇತ್ತೀಚಿನದ್ದೆಂದು ಪರಿಗಣಿಸಬಹುದು. ಪ್ರಾಚೀನ ಪರಂಪರೆಯನ್ನು ಈ ಶಿಲ್ಪ ಹೊಂದದಿದ್ದರೂ ಇದು ಪ್ರಾಚೀನ ಕಾಲದ ವ್ಯವಸ್ಥೆಯನ್ನು ದೃಢಪಡಿಸುತ್ತದೆ. ಷಣ್ಮುಖನು ಇಕ್ಕೆಲಗಳಲ್ಲಿ ಸುಂದರವಾಗಿ ಮೂಡಿ ಬಂದ ಪ್ರಭಾವಳಿ ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖವನ್ನು ಕಡೆಯಲಾಗಿದೆ. ಇಲ್ಲಿಯ ವಿಶೇಷತೆಯೆಂದರೆ "ಕುಮಾರ ನವಿಲಿನ ಮೇಲೆ ಕುಳಿತುಕೊಳ್ಳದೇ ಕಮಲದ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವುದೇ ಒಂದು ವಿಶೇಷತೆ" ಎಂದು ಹೇಳಬಹುದು ಎಂದು ಡಾ.ಎಂ.ಪಿ.ಮಹದೇವಯ್ಯನವರು ಹೇಳಿದ್ದಾರೆ.[47] ನವರಂಗದಲ್ಲಿ ಮತ್ತೊಂದು ಪೀಠದ ಮೇಲೆ ವೀರಾಂಜನೇಯನ ಶಿಲ್ಪವನ್ನು ಇಡಲಾಗಿದೆ. ವೀರಾಂಜನೇಯನ ಶಿಲ್ಪವು ಕರ್ನಾಟಕದಲ್ಲಿ ಹೆಸರುವಾಸಿಯಾದದ್ದು ವಿಜಯನಗರ ಅರಸರ ಕಾಲದಲ್ಲಿ ಎಂದು ಹೇಳಬಹುದು. ಏಕೆಂದರೆ ವಿಜಯನಗರ ಅರಸರ ಕಾಲದ ದೊರೆಗಳು ಹೆಚ್ಚಿನ ಸಂಖ್ಯೆಯಲ್ಲಿ ವೀರಾಂಜನೇಯನ ಗುಡಿಗಳನ್ನು ಮತ್ತು ವೀರಾಂಜನೇಯನ ಚಪ್ಪಡಿಯ ಮೇಲೆ ಮೂಡಿಬಂದಂತಹ ಶಿಲ್ಪಗಳನ್ನು ಮೂಡಿಸಿರುವುದು ಆಯಾ ಪ್ರಾಂತ್ಯಗಳಲ್ಲಿ ಕಂಡುಬರುತ್ತದೆ.

ಈ ಹಿನ್ನೆಲೆಯಿಂದ ಆಲಗೂಡು ನೆಲೆಯಲ್ಲಿ ಇತ್ತೀಚಿನ ಕಾಲಕ್ಕೆ ಹೋಲಿಕೆ ಮಾಡಬಹುದಾದ ಒಂದು ವೀರಾಂಜನೇಯನ ಶಿಲ್ಪವನ್ನು ಇಡಲಾಗಿದೆ. ಇದು ರಾಮಾಯಣಕ್ಕೆ ಸಂಬಂಧಪಟ್ಟಿದೆಯಾದರೂ ನಂತರದ ಕಾಲದ ಬೆಳವಣಿಗೆಯಲ್ಲಿ ಇದು ಪ್ರಚಾರ ಕಂಡಿತು ಎಂದು ಪರಿಗಣಿಸಬಹುದು. ಈ ಶಿಲ್ಪವು ಸುಮಾರು 2 ಅಡಿ ಎತ್ತರವಿದ್ದು, ವೀರಯೋಧನಂತೆ ಹೋರಾಟದ ದೃಶ್ಯ ಇಲ್ಲಿ ಮೂಡಿಬಂದಿದ್ದು, ವೀರಾಂಜನೇಯನು ಎರಡು ಕೈ ಹಾಗೂ ಎರಡು ಕಾಲುಗಳನ್ನು ಹೊಂದಿದ್ದು, ಒಂದು ಕೈಯಲ್ಲಿ ಸುಂದರವಾದ ಗಧೆ, ಮತ್ತೊಂದು ಕೈಯಲ್ಲಿ ಅಭಯ ಮುದ್ರೆಯನ್ನು ತೋರಿಸುತ್ತಿರುವುದು ಹಾಗೂ ಸುಂದರವಾಗಿ ಅಲಂಕೃತನಾಗಿದ್ದು ಕಚ್ಚೆಯನ್ನು ಕಟ್ಟಿದ್ದಾನೆ. ವೀರಾಂಜನೇಯನಿಗೆ ತಲೆಯ ಮೇಲೆ ವೃತ್ತಾಕಾರದ ಕಿರೀಟವನ್ನು ಧರಿಸಿದ್ದು ಕರ್ಣಕುಂಡಲವು ಕಂಡುಬಂದಿದೆ. ಕೈ ಕಡಗ, ತೋಳುಬಂಧಿ ಧರಿಸಿದ್ದು, ತನ್ನ ಬಾಲವನ್ನು ಹಿಂಭಾಗದಿಂದ ಮೇಲಕ್ಕೆ ಎತ್ತಿರುವುದು ಸೊಗಸಾಗಿ ಮೂಡಿಬಂದಿದೆ.

ಈ ದೇವಾಲಯದ ಮೇಲ್ಭಾಗದಲ್ಲಿ ಅಂದರೆ ಗರ್ಭಗುಡಿ, ಸುಕನಾಸಿಗೆ ಹೊಂದಿಕೊಂಡಂತೆ ವಿಮಾನವನ್ನು ನಿರ್ಮಿಸಲಾಗಿದೆ. ಈ ವಿಮಾನವು ಇಟ್ಟಿಗೆ ಗಾರೆಯಿಂದ ನಿರ್ಮಿಸಲ್ಪಟ್ಟಿದ್ದು, ದ್ರಾವಿಡ ಶೈಲಿಯ ಹೋಲಿಕೆಯ ಮಾದರಿಯನ್ನು ಅನುಸರಿಸಿದೆ. ಈ ವಿಮಾನವು ಸುಮಾರು 15 ಅಡಿ ಎತ್ತರವನ್ನೊಂದಿದ್ದು ಸೊಗಸಾಗಿ ಮೂಡಿಬಂದಿದೆ. ಈ ವಿಮಾನಕ್ಕೆ ಐದು ಮಾದರಿ ಅಂತಸ್ತುಗಳನ್ನು ಗುರುತಿಸಬಹುದಾಗಿದೆ. ಕೆಳ ಅಂತಸ್ತಿನ ಮಾದರಿಯು ಆಯತಾಕಾರವಾಗಿದ್ದು ಹಿನ್ಸರಿತ ಮುನ್ಸರಿತಗಳಿಂದ ಕೂಡಿದೆ. ಅದರ ಮೇಲ್ಭಾಗದಲ್ಲಿ ದೇವಕೋಷ್ಠಗಳಿದ್ದು, ಕೊಷ್ಠಗಳಲ್ಲಿ ದೇವತೆಯ ಶಿಲ್ಪಗಳನ್ನು ಕಡೆಯಲಾಗಿದೆ. ಅದರ ಮೇಲೆ ವೃತ್ತಾಕಾರದ ಗೋಪುರ, ಮೇಲ್ಭಾಗದಲ್ಲಿ ಸ್ತೂಪಿ ಮತ್ತು ಸ್ತೂಪಿಯ ಮೇಲ್ಭಾಗದಲ್ಲಿ ಕಳಸವನ್ನು ಇಡಲಾಗಿದೆ.

ಒಟ್ಟಾರೆಯಾಗಿ ಈ ವಿಮಾನ ಇತ್ತೀಚಿನ ಕಾಲದ ನಿರ್ಮಿತಿಯಾದರೂ ದ್ರಾವಿಡ ವಾಸ್ತು ಮಾದರಿಯನ್ನು ಹೋಲುತ್ತದೆ ಎಂದು ಹೇಳಬಹುದು.

**ಆಲಗೂಡು : ಮಾರಮ್ಮನ ದೇವಾಲಯ**:- ಈ ದೇವಾಲಯವು ಗ್ರಾಮ ಮಧ್ಯಭಾಗದಲ್ಲಿದ್ದು ಮೈಸೂರಿನಿಂದ ಕೊಳ್ಳೇಗಾಲಕ್ಕೆ ಹೋಗುವ ಮುಖ್ಯ ರಸ್ತೆಯಲ್ಲಿ ಕಂಡುಬರುತ್ತದೆ. ಇದು

ವಿಜಯನಗರ ಅರಸರ ಕಾಲಕ್ಕೆ ಸೇರಿದ ದೇವಾಲಯವಾಗಿದ್ದರೂ ಸಹ ಇತ್ತೀಚಿನ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ.

**ಗರ್ಭಗುಡಿ**:– ಮೂಲಗರ್ಭಗುಡಿಯಲ್ಲಿ ಮಾರಮ್ಮನ ಶಿಲ್ಪಗಳನ್ನು ಇಡಲಾಗಿದೆ. ದೇವಾಲಯದ ಮುಂಭಾಗದಲ್ಲಿ ಗೋಡೆಗೆ ಸೇರಿದಂತೆ ವಿವಿಧ ರೀತಿಯ ಬಿಡಿ ಶಿಲ್ಪಗಳು ಕಂಡುಬರುತ್ತವೆ. ಇಲ್ಲಿರುವ ಎಲ್ಲಾ ಶಿಲ್ಪಗಳು ಹೋರಾಟದ ಮನೋಭಾವನೆಯನ್ನು ವ್ಯಕ್ತಪಡಿಸುವಂತಹ ಶಿಲ್ಪಗಳೇ ಆಗಿವೆ. ಈ ಶಿಲ್ಪಗಳನ್ನು ಮಹಿಷಮಂಡಲ ಪ್ರಾಂತ್ಯದಲ್ಲಿ ವಿಭಿನ್ನ ರೀತಿಯ ಹೆಸರುಗಳಿಂದ ಕರೆಯುವ ವಾಡಿಕೆ ಪ್ರಚಲಿತದಲ್ಲಿದೆ. ಇಲ್ಲಿರುವ ಶಿಲ್ಪಗಳನ್ನು ಸ್ಮಾರಕ ಶಿಲ್ಪಗಳೆಂದು ಪರಿಗಣಿಸಲಾಗಿದೆ. ಆದರೆ ಈ ದೇವಾಲಯದ ವಾಸ್ತು ರಚನೆಯನ್ನು ನೋಡುವುದಾದರೆ ಸ್ಥಳೀಯ ಪ್ರಾಂತ್ಯದ ಹಬ್ಬ ಹರಿದಿನಗಳ ಆಚರಣೆಯ ಹಿನ್ನೆಲೆಯಿಂದ ಶಿಲ್ಪಕಲೆಯನ್ನು ನಿರ್ಮಿಸಿದ್ದಾರೆಂಬುದು ಮಾತ್ರ ಸತ್ಯ. ಪ್ರಾಚೀನ ಪರಂಪರೆಯಿಂದಲೂ ಶಕ್ತಿ ಪ್ರಧಾನವಾಗಿರುವ ದೇವತೆಗಳನ್ನು ಪೂಜೆ ಪುನಸ್ಕಾರ ಮತ್ತು ಆರಾಧನೆಯನ್ನು ಮಾಡಿಕೊಂಡು ಬಂದಿರುವುದು ಒಂದು ವಿಶೇಷತೆ. ಈ ಹಿನ್ನೆಲೆಯಿಂದ ದೇವಾಲಯದ ಮೇಲ್ಭಾಗದಲ್ಲಿ ಕೆಲವು ಕೋಷ್ಠಗಳನ್ನು ನಿರ್ಮಿಸಿ ಕೋಷ್ಠಗಳ ಮಧ್ಯಭಾಗದಲ್ಲಿ ಇಂತಹ ಶಕ್ತಿದೇವತೆಯಾದ ಮಾರಮ್ಮನ ಶಿಲ್ಪಗಳನ್ನು ನಿರ್ಮಿಸಿರುವುದು ವಾಡಿಕೆ ಮತ್ತು ಪ್ರಸ್ತುತ ಎಂದು ಹೇಳಬಹುದಾಗಿದೆ.

**ಬನ್ನೂರು : ತೀರ್ಥ (ಗದ್ದೆ) ರಾಮೇಶ್ವರ ಗುಡಿ**

ಬನ್ನೂರು ಮಳವಳ್ಳಿ ಮುಖ್ಯರಸ್ತೆಯಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಈ ದೇವಾಲಯವು ಸಂಪೂರ್ಣ ಜೀರ್ಣೋದ್ಧಾರಗೊಂಡಿರುವ ಪುರಾತನ ಗುಡಿಯಾಗಿದ್ದು, ಸುಮಾರು 16ನೆಯ ಶತಮಾನದ ಶಾಸನವೊಂದು ಅದರ ತಳಪಾದಿ ಕಲ್ಲಿನ ಮೇಲಿದೆ.

**ಗರ್ಭಗುಡಿ**

ಗರ್ಭಗುಡಿಯು 5X5 ಸುತ್ತಳತೆಯನ್ನು ಹೊಂದಿದ್ದು, ಎರಡು ಅಡಿ ಪಾಣಿಪೀಠದ ಮೇಲೆ ಮೂರು ಅಡಿ ಎತ್ತರದ ಲಿಂಗನ್ನು ಪ್ರತಿಷ್ಠಾಪಿಸಲಾಗಿದೆ. ಈ ಗುಡಿಯಲ್ಲಿರುವ ಮಹಿಷಮರ್ಧಿನಿ ಶಿಲ್ಪವು ಗಮನಾರ್ಹವಾಗಿದೆ.[48] ಇದು ನವರಂಗವನ್ನು ಹೊಂದಿದ್ದು, ಯಾವುದೇ ಕಂಬಗಳನ್ನು ಹೊಂದಿಲ್ಲದೆ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿರುವ ದೇವಾಲಯವಾಗಿದೆ.

**ಹೇಮಾದ್ರಮ್ಮನ ಗುಡಿ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ಹೇಮಾದ್ರಮ್ಮನ ಗುಡಿ ಕಂಭಗಳ ಆಧಾರದ ಮೇಲೆ ವಿಜಯನಗರ ಕಾಲದ ದೇವಾಲಯ ಎಂದು ಹೇಳಬಹುದಾಗಿದೆ.

**ಗರ್ಭಗುಡಿ**:- ಗರ್ಭಗುಡಿಯು 4X4 ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿನ ಮೂಲಮೂರ್ತಿಯು ಚತುರ್ಭುಜವನ್ನು ಹೊಂದಿತ್ತೇಂದು, ನಂತರದಲ್ಲಿ ಕಳುವಾಯಿತ್ತೇಂದು ಸ್ಥಳೀಯರ ಅಭಿಪ್ರಾಯವಾಗಿದೆ. ಈಗಿರುವ ಮೂರ್ತಿಯು ಅದರ ಪ್ರತಿರೂಪವಾಗಿದ್ದು, ಮಾಘಶುದ್ಧ ಪೌರ್ಣಮಿ ಸಂದರ್ಭದಲ್ಲಿ ಜರುಗುವ ದೇವಿಯ ಐದು ದಿನಗಳ ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿ ಮೆರೆಸಿದ ನಂತರ ದೇವಿ ಮೂರ್ತಿಯನ್ನು ತಾಲೂಕು ಖಜಾನೆಯಲ್ಲಿ ಸಂರಕ್ಷಿಸಿಡಲಾಗುತ್ತದೆ. ದೇವಾಲಯ ನವರಂಗವನ್ನು ಹೊಂದಿದ್ದು ಯಾವುದೇ ಕಂಬಗಳನ್ನು ಹೊಂದಿರುವುದಿಲ್ಲ. ಇದು ಇತ್ತೀಚಿಗೆ ಜೀರ್ಣೋದ್ಧಾರಗೊಂಡಿರುವ ದೇವಾಲಯವಾಗಿದೆ.

**ಸರೋವರಾಂಜನೇಯ ದೇವಾಲಯ**

ಈ ದೇವಾಲಯವು ಬನ್ನೂರಿನ ಬಸ್ ನಿಲ್ದಾಣದ ವಾಯುವ್ಯ ದಿಕ್ಕಿನಲ್ಲಿರುವ ಏಕಕೂಟವಾಗಿದ್ದು, ಪೂರ್ವಾಭಿಮುಖವಾಗಿದೆ. ದೇವಾಲಯದಲ್ಲಿ ಗರ್ಭಗುಡಿ ಮಾತ್ರಯಿದ್ದು, ಇದೊಂದು ಚಿಕ್ಕ ದೇವಾಲಯವಾಗಿದೆ.

**ಗರ್ಭಗುಡಿ**:-ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಆಂಜನೇಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

**ನವರಂಗ**:- ನವರಂಗದಲ್ಲಿ ಎರಡು ಕಂಬಗಳದ್ದು ಯಾವುದೇ ಅಲಂಕರಣವನ್ನು ಹೊಂದಿರುವುದಿಲ್ಲ. ಹಾಗೂ ದೇವಾಲಯದ ಮುಂಭಾಗ ಎರಡು ಅಡಿ ಎತ್ತರದ ಬಲಿಪೀಠವಿದೆ. ಈ ದೇವಾಲಯವು ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದೆಯೆಂದು ಹೇಳಬಹುದಾಗಿದೆ. ಇದು ಸಣ್ಣ ಹೊಂಡದ ಬಳಿ ಇರುವುದರಿಂದ ಇದನ್ನು ಸರೋವರಾಂಜನೇಯ ದೇವಾಲಯ ಎಂದು ಕರೆಯಲಾಗಿದೆ.

**ಕರುಹಟ್ಟಿ : ಬಸವೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರದಿಂದ 5 ಕಿ.ಮೀ. ದೂರದಲ್ಲಿರುವ ಕರುಹಟ್ಟಿ ಗ್ರಾಮದ ಆಗ್ನೇಯ ದಿಕ್ಕಿನಲ್ಲಿ ಊರಿನಿಂದ ಹೊರಗಿರುವ ಕೃಷಿ ಭೂಮಿಯಲ್ಲಿ ಕ್ರಿ.ಶ.ಸು. 14ನೇ ಶತಮಾನದಲ್ಲಿ ನಿರ್ಮಿಸಲಾದ ಬಸವೇಶ್ವರ ದೇವಾಲಯವಿದೆ.[49] ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ.

ಮೂರು ಅಡಿ ಎತ್ತರದ ಅಧಿಷ್ಠಾನದ ಮೇಲೆ 5 ಕಂಬಗಳನ್ನೊಳಗೊಂಡ ಮಂಟಪವಿದ್ದು, ಈ ಮಂಟಪದ ಮೇಲೆ ಕಿರು ಮಂಟಪವಿದ್ದು, ಸುಮಾರು ಎರಡೂವರೆ ಅಡಿ ಎತ್ತರದ ಕಂಬಗಳನ್ನೊಳಗೊಂಡಿದ್ದು, ಆ ಮಂಟಪದ ಮಧ್ಯಭಾಗದಲ್ಲಿ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಮಂಟಪದ ಮುಂಭಾಗ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ನಂದಿ ವಿಗ್ರಹಗಳನ್ನು, ಮಧ್ಯಭಾಗದಲ್ಲಿ ಕೀರ್ತಿಮುಖವನ್ನು ಕೆತ್ತಲಾಗಿದೆ.

ಗರ್ಭಗುಡಿಯ ಮೇಲೆ ದ್ರಾವಿಡ ಶೈಲಿಯ ಶಿಖರವನ್ನು ನಿರ್ಮಿಸಲಾಗಿದೆ. ಶಿಖರದ ನಾಲ್ಕು ಮೂಲೆಗಳಲ್ಲಿಯೂ ನಂದಿ ವಿಗ್ರಹವನ್ನು ಕೆತ್ತನೆ ಮಾಡಲಾಗಿದ್ದು, ನಂದಿ ವಿಗ್ರಹಗಳ ಮಧ್ಯಭಾಗದಲ್ಲಿ ಶಿವಭಕ್ತನ ವಿಗ್ರಹಗಳನ್ನು ಕೆತ್ತನೆ ಮಾಡಲಾಗಿದೆ. ಶಿಖರದ ಸುತ್ತ ಕಮಲದ ಆಕೃತಿಯುಳ್ಳ ಚಿತ್ರಗಳನ್ನು ಕೆತ್ತನೆ ಮಾಡಿದ್ದು, ಅದರ ಮೇಲ್ಭಾಗದಲ್ಲಿ ನಾಗರ ಹೆಡೆಯ ವಿಗ್ರಹವನ್ನು ಶಿಖರದ ನಾಲ್ಕು ದಿಕ್ಕಿನಲ್ಲಿಯೂ ಕೆತ್ತನೆ ಮಾಡಲಾಗಿದೆ. ಶಿಖರದ ಮೇಲ್ಭಾಗದಲ್ಲಿ ಸ್ತೂಪಿ ಪ್ರಸ್ತುತದಲ್ಲಿ ಇರುವುದಿಲ್ಲ. ಅಥವಾ ನಿರ್ಮಾಣ ಕಾಲದಲ್ಲಿ ಪ್ರತಿಷ್ಠಾಪಿಸಿದ್ದು, ಕಾಲಾನಂತರದಲ್ಲಿ ಭಗ್ನಗೊಂಡಿರಬಹುದಾಗಿದೆ. ದೇವಾಲಯದ ಮುಂಭಾಗ ವಾಯುವ್ಯ ದಿಕ್ಕಿಗೆ ಗರ್ಭಗುಡಿಯಿಂದ ಸುಮಾರು 30 ಮೀಟರ್ ಅಂತರದಲ್ಲಿ ಬಲಿಪೀಠವಿದೆ. ದೇವಾಲಯದ ಆಸುಪಾಸಿನಲ್ಲಿ ರಾವಳೇಶ್ವರನ ಶಿಲ್ಪಗಳು ಹಾಗೂ ಕೆಲವು ಸ್ತ್ರೀ ದೇವತಾ ಶಿಲ್ಪಗಳು ಕಂಡುಬರುತ್ತವೆ. ನೆಲಮಾಳಿಗೆಯಿಂದ ಸುಮಾರು 7 ಅಡಿ ಎತ್ತರದಲ್ಲಿ ಕಿರುಮಂಟಪದಲ್ಲಿ ಗರ್ಭಗುಡಿ ಯಲ್ಲಿರುವ ಬಸವನ ವಿಗ್ರಹವನ್ನು ಪೂಜಿಸಲು ಕಲ್ಲಿನಿಂದ ಮೆಟ್ಟಿಲುಗಳನ್ನು ಮಾಡಲಾಗಿದೆ.

ಇತ್ತೀಚೆಗೆ ಸಿಮೆಂಟ್ ಗಾರೆಯಿಂದ ಕೆತ್ತನೆ ಮಾಡಿರುವ ತೆರೆದ ಕಮಲದ ಚಿತ್ರಗಳು, ನಾಗರಹೆಡೆ, ಬಸವನ ವಿಗ್ರಹಗಳು ಅತ್ಯಾಕರ್ಷಕವಾಗಿರುವುದು ಈ ದೇವಾಲಯದ

ವಿಶೇಷವಾದರೆ, ಮಂಟಪದ ಮೇಲೊಂದು ಕಿರುಮಂಟಪವಿದ್ದು, ಅಲ್ಲಿ ಗರ್ಭಗುಡಿ ನಿರ್ಮಿಸಿ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಿ, ನೆಲಮಾಳಿಗೆಯಿಂದ ಮೆಟ್ಟಿಲುಗಳನ್ನು ನಿರ್ಮಿಸಿರುವುದು ಮತ್ತೊಂದು ದೇವಾಲಯದ ವಿಶೇಷವೆನಿಸಿದೆ.

**ಕಲಿಯೂರು : ಮಲ್ಲಿಕಾರ್ಜುನ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 18 ಕಿ.ಮೀ. ದೂರದಲ್ಲಿ ಕಲಿಯೂರು ಗ್ರಾಮವಿದೆ. ಗ್ರಾಮದ ವಾಯುವ್ಯ ದಿಕ್ಕಿನಲ್ಲಿರುವ ಈ ದೇವಾಲಯದಲ್ಲಿ ಪ್ರತಿವರ್ಷ ಶಬರಿ ಮಲೆಗೆ ಹೋಗುವ ಭಕ್ತಾಧಿಗಳು 48 ದಿನಗಳು ಪೂಜಾಕಾರ್ಯಗಳನ್ನು ಮಾಡುತ್ತಾರೆ. ಇದು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಈ ದೇವಾಲಯವು ಕ್ರಿ.ಶ. ಸು.16ನೇ ಶತಮಾನದಲ್ಲಿ ನಿರ್ಮಾಣವಾಗಿದೆ.[50]

**ಗರ್ಭಗುಡಿ:-** ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಮಾರು 3 ಅಡಿ ಎತ್ತರದ ಅಧಿಷ್ಠಾನದ ಮೇಲೆ ಒಂದು ಅಡಿ ಪಾಣಿಪೀಠವಿದ್ದು, ಅದರ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ:-** ಸುಕನಾಸಿಯು 3X3 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ.

**ನವರಂಗ:-** ಈ ದೇವಾಲಯದ ನವರಂಗವು 9 ಅಂಕಣಗಳಿಂದ ಕೂಡಿದ್ದು, ಪ್ರಧಾನವಾದ 4 ಕಂಬಗಳನ್ನು ಹೊಂದಿದೆ. ನವರಂಗದ ಬಲಭಾಗದಲ್ಲಿ ಗಣಪತಿ ಹಾಗೂ ಎಡಭಾಗದಲ್ಲಿ ಚೌಡೇಶ್ವರಿ ಪ್ರತಿಮೆಗಳನ್ನು ಇರಿಸಿದ್ದಾರೆ.

**ಮುಖಮಂಟಪ:-** ಮುಖಮಂಟಪವು ನಾಲ್ಕು ಕಂಬಗಳನ್ನು, ನಾಲ್ಕು ಅರೆಗಂಬಗಳನ್ನು ಹೊಂದಿದೆ. ದೇವಾಲಯದ ಮುಂಭಾಗ 2 ಅಡಿ ಎತ್ತರದ ಬಲಿಪೀಠವಿದೆ. ದ್ರಾವಿಡ ಶೈಲಿಯ ವಿಮಾನವಿದ್ದು, ಸ್ತೂಪಿಯು ಭಗ್ನವಾಗಿದೆ. ನವರಂಗದ ಮೇಲ್ಭಾಗ ಇತ್ತೀಚೆಗೆ ಸಿಮೆಂಟ್ ಗಾರೆಗಳಿಂದ ನಿರ್ಮಿಸಿದ ಏಕಶಿಲಾ ನಂದಿಯ ಪ್ರತಿಮೆಯನ್ನು ಕೆತ್ತನೆ ಮಾಡಲಾಗಿದೆ.

ದೇವಾಲಯದ ನೈರುತ್ಯ ಭಾಗದಲ್ಲಿ ವೀರಗಲ್ಲು, ಮಾಸ್ತಿಗಲ್ಲು ಹಾಗೂ ಬಿಡಿಶಿಲ್ಪಗಳಿವೆ. ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ತೆರೆದ ಬಾವಿಯನ್ನು ನಿರ್ಮಿಸಲಾಗಿದೆ.

**ತಲಕಾಡು : ವೀರಭದ್ರ ದೇವಾಲಯ**

ಈ ದೇವಾಲಯವು ವೈದ್ಯನಾಥೇಶ್ವರ ದೇವಾಲಯದ ಪಕ್ಕದಲ್ಲಿರುವ ಏಕಕೂಟ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಸುಮಾರು 5 ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ.

**ಸುಕನಾಸಿ:-** ಈ ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ:-** ನವರಂಗವು 9 ಅಂಕಣಗಳಿಂದ ಕೂಡಿದ್ದು, 4 ಕಂಬಗಳನ್ನು ಹೊಂದಿದೆ. ಇತ್ತೀಚೆಗೆ ಅಂದರೆ ಒಂದು ವರ್ಷಗಳ ಹಿಂದೆ ನವರಂಗದ ಎಡಭಾಗದಲ್ಲಿ ಭದ್ರಕಾಳಮ್ಮ ಗುಡಿಯನ್ನು ನಿರ್ಮಿಸಿದ್ದಾರೆ. ನವರಂಗದ ಬಲಭಾಗದಲ್ಲಿ ನಂದಿ, ಗಣಪತಿ, ನಾಗರ ಶಿಲ್ಪಗಳಿವೆ.

**ಮುಖಮಂಟಪ:-** ದೇವಾಲಯದ ಮುಖಮಂಟಪದ ಎರಡೂ ಕಡೆಗಳಲ್ಲಿಯೂ ಕಕ್ಷಾಸನವಿದೆ. ಮುಖಮಂಟಪದ ದ್ವಾರದ ಎರಡು ಕಡೆಗಳಲ್ಲಿಯೂ ದ್ವಾರಪಾಲಕರಿದ್ದು, ಇವರನ್ನು 'ತಲ' ಮತ್ತು 'ಕಾಡು' ಎಂಬುದಾಗಿ ಕರೆಯಲಾಗಿದೆ. ದೇವಾಲಯ ನಿರ್ಮಾಣದ ಬಗ್ಗೆ ಸ್ಪಷ್ಟ ಮಾಹಿತಿ ದೊರೆತಿಲ್ಲ. ವಾಸ್ತುಶೈಲಿಯು ವಿಜಯನಗರ ಕಾಲದ್ದಾಗಿದ್ದು, ಸುಮಾರು 16ನೇ ಶತಮಾನದಲ್ಲಿ ನಿರ್ಮಾಣವಾದಂತೆ ತೋರುತ್ತದೆ. ದೇವಾಲಯದ ಮುಂಭಾಗ ಎರಡು ಅಡಿ ಎತ್ತರದ ಬಲಿಪೀಠವಿದೆ.

**ತುಂಬಲ : ಉಪ್ಪರಿಗೆ ಬಸವೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಹೊರಗಡೆ ಹೊಳೆಗೆ ಹೋಗುವ ದಾರಿಯಲ್ಲಿರುವ ಪಶ್ಚಿಮಾಭಿಮುಖವಾದ ಏಕಕೂಟ ಶೈವ ದೇವಾಲಯವಾಗಿದೆ. ಸುಮಾರು 6 ಅಡಿ ಎತ್ತರದ ಮಂಟಪದ ಮೇಲೆ ಗರ್ಭಗುಡಿ ನಿರ್ಮಿಸಿದ್ದು, ಗರ್ಭಗುಡಿ ಮಧ್ಯಭಾಗದಲ್ಲಿ ಏಕನಂದಿಯನ್ನು

ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಗೆ ಹೋಗಲು ಭೂಮಿಯ ಮೇಲ್ಭಾಗದಿಂದ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ. ಈ ದೇವಾಲಯವು ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿರುವಂತೆ ಕಂಡುಬರುತ್ತದೆ.

**ತುರುಗನೂರು : ನಡುಗದ್ದೇಶ್ವರಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರದಿಂದ 22 ಕಿ.ಮೀ ದೂರದಲ್ಲಿ ತುರುಗನೂರು ಗ್ರಾಮವಿದೆ. ಈ ಗ್ರಾಮದ ಮಧ್ಯಭಾಗದಲ್ಲಿರುವ ಅತಿ ಪ್ರಾಚೀನವಾದ ನಡುಗದ್ದೇಶ್ವರಸ್ವಾಮಿ ದೇವಾಲಯವಿದೆ. ಇದು ಏಕಕೂಟ ಶೈವ ದೇವಾಲಯವಾಗಿದ್ದು, ದಕ್ಷಿಣಾಭಿಮುಖವಾಗಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡೂವರೆ ಅಡಿ ಎತ್ತರದ ಶಿವಲಿಂಗವಿದೆ. ಗರ್ಭಗುಡಿಯ ಮೇಲ್ಚಾವಣಿಯಲ್ಲಿ ತೆರೆದ ಕಮಲಾಕೃತಿಯ ಭುವನೇಶ್ವರಿಯಿದೆ.

**ಸುಕನಾಸಿ:-** ಈ ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ.

**ನವರಂಗ:-** ನವರಂಗವು 9 ಅಂಕಣಗಳಿಂದ ಕೂಡಿದ್ದು, 12 ಅರೆಗಂಬಗಳನ್ನು ಹೊಂದಿದೆ. ನವರಂಗವು ಪ್ರಧಾನವಾದ 4 ವಿಜಯನಗರ ಕಾಲದ ಕಂಬಗಳನ್ನು ಹೊಂದಿದೆ. ಈ ಕಂಬಗಳಲ್ಲಿ ನೃತ್ಯ ಮಾಡುತ್ತಿರುವ ಸ್ತ್ರೀ ಶಿಲ್ಪಗಳನ್ನು ಕೆತ್ತಲಾಗಿದೆ.

ನವರಂಗದ ಉತ್ತರ ದಿಕ್ಕಿನ ಎರಡು ವಿಜಯನಗರ ಕಂಬಗಳ ಮಧ್ಯಭಾಗದಲ್ಲಿ ಏಕಶಿಲಾ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಸುತ್ತಲೂ ಸುಮಾರು 5 ಅಡಿ ಎತ್ತರದ ಪ್ರಾಕಾರವಿದೆ. ದೇವಾಲಯದ ಬಲಭಾಗದಲ್ಲಿ ಒಂದು ಕೊಳವಿದೆ. ದೇವಾಲಯದ ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿ ಪ್ರವೇಶ ದ್ವಾರಗಳಿವೆ. ದೇವಾಲಯದ ಮುಂಭಾಗದಲ್ಲಿ ಸುಮಾರು 16 ಅಡಿ ಎತ್ತರದ ದೀಪಸ್ತಂಭವಿದ್ದು, ಅಧಿಷ್ಠಾನದ 4 ಮೂಲೆಗಳಲ್ಲಿಯೂ ಬಸವ, ಲಿಂಗ, ತ್ರಿಶೂಲ, ಗಣಪತಿಯರ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ದೀಪಸ್ತಂಭದ ಮುಂಭಾಗ

ನಂದಿ ಮಂಟಪವಿದೆ. ಸುಮಾರು 3 ಅಡಿ ಎತ್ತರದ ಕಂಬದ ಮೇಲೆ ಅರ್ಧ ಅಡಿ ಎತ್ತರದ ಪಾಣಿಪೀಠವಿದ್ದು, ಅದರ ಮೇಲೆ ಬಸವನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ.

**ಯರಹಳ್ಳಿ : ಶ್ರೀ ಸಿದ್ದೇಶ್ವರಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರದಿಂದ 25 ಕಿ.ಮೀ. ದೂರದಲ್ಲಿ ಯರಹಳ್ಳಿ ಗ್ರಾಮವಿದೆ. ಈ ಗ್ರಾಮದ ಹೊರಗಡೆ ಪ್ರಾಚೀನ ಸಿದ್ದೇಶ್ವರಸ್ವಾಮಿ ದೇವಾಲಯವಿದೆ. ಇದು ಏಕಕೂಟ ಶೈವ ದೇವಾಲಯವಾಗಿದ್ದು, ದಕ್ಷಿಣಾಭಿಮುಖವಾಗಿದೆ,

**ಗರ್ಭಗುಡಿ**:- ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯ ಮಧ್ಯಭಾಗದಲ್ಲಿ ಸಿದ್ದೇಶ್ವರನ ಸು. 3 ಅಡಿ ಎತ್ತರದ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.-18) ಗರ್ಭಗುಡಿಯ ದ್ವಾರದ ಲಲಾಟಬಿಂಬದಲ್ಲಿ ಶಿವಲಿಂಗವನ್ನು ಕೆತ್ತನೆ ಮಾಡಲಾಗಿದೆ.

**ಅಂತರಾಳ**:- ಗರ್ಭಗುಡಿಯ ಮುಂಭಾಗ ತೆರೆದ ಅಂತರಾಳವಿದ್ದು, ವಿಜಯನಗರ ಕಾಲದ 2 ಕಂಬಗಳಿವೆ. (ಚಿ. ಸಂ.-19) ಈ ದೇವಾಲಯದ ಮುಂಭಾಗ ಏಕಶಿಲಾ ನಂದಿಯ ವಿಗ್ರಹ ಹಾಗೂ ಬಲಿಪೀಠವಿದೆ. ದೇವಾಲಯದ ವಾಯುವ್ಯ ದಿಕ್ಕಿನಲ್ಲಿ ವಿಜಯನಗರದ ಶೈಲಿಯ ಗಣೇಶನ ವಿಗ್ರಹವನ್ನು ಪ್ರತಿಷ್ಠಾಪಿಸಿ, ಕಿರುಗುಡಿಯನ್ನು ನಿರ್ಮಿಸಿದ್ದಾರೆ.

**ಸೋಸಲೆ**

ಸೋಸಲೆ ಗ್ರಾಮವು ತಿರುಮಕೂಡಲು ನರಸೀಪುರದಿಂದ 4 ಕಿ.ಮೀ. ಅಂತರದಲ್ಲಿ ಕಾವೇರಿ ಎಡದಂಡೆಯ ಮೇಲಿರುವ ಹೋಬಳಿ ಕೇಂದ್ರವಾಗಿದೆ. ಸೋಸಲೆ ಗ್ರಾಮ ಈಗ ಮೂರು ಗ್ರಾಮಗಳಾಗಿ ಚದುರಿದ್ದು ಅಗ್ರಹಾರ, ವ್ಯಾಸರಾಜಪುರ ಮತ್ತು ಸೋಸಲೆ ಎಂದಾಗಿದೆ. ಇತ್ತೀಚಿಗೆ ದೊರೆತ ಶಾಸನವೊಂದರ ಆಧಾರದ ಮೇಲೆ ಈ ಊರು ಕ್ರಿ.ಶ. 6ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದು, ಜೈನ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ.[51] ಹಿಂದೆ ಬಡಗೆರೆ 3000 ನಾಡಿನಲ್ಲಿದ್ದ ಇದು, ಗಂಗರಷ್ಟು ಪುರಾತನ ನೆಲೆಯಾಗಿದ್ದು, ಕ್ರಿ.ಶ. 8-9ನೆಯೆ ಶತಮಾನಕ್ಕೆ ಸೇರಿದ ಗಂಗ ಶಾಸನವಿಲ್ಲಿದೆ. ಇಲ್ಲಿ ವೀರಭದ್ರ, ಹೊನ್ನಾದೇವಿ, ಕೊಳಲು ಗೋಪಾಲಕೃಷ್ಣ, ಕೋಟೆಗಣಪತಿ ಮುಂತಾದ ದೇವಾಲಯಗಳಿವೆ.

**ವೀರಭದ್ರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ತ್ರಿಕೂಟ ಶೈವ ದೇವಾಲಯ ವಾಗಿದ್ದು, ಪೂರ್ವಾಭಿಮುಖವಾಗಿದೆ. ಇದು ಹೊಯ್ಸಳ ಶೈಲಿಯ ಗರ್ಭಗೃಹ ಹಾಗೂ ಅರ್ಧಮಂಟಪಗಳನ್ನು ಹೊಂದಿದ್ದು, ನಂತರದಲ್ಲಿ ಸೇರ್ಪಡೆಯಾಗಿರಬಹುದಾದ ನವರಂಗಕ್ಕೆ ದ್ವಾರಪಾಲಕ ಶಿಲ್ಪಗಳಿವೆ.[52]

**ಗರ್ಭಗುಡಿ:-** ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ನಂದಿ ಪೀಠದ ಮೇಲೆ ಸುಮಾರು 5 ಅಡಿ ಎತ್ತರದ ವೀರಭದ್ರನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.-20) ಗುಡಿಯ ಇಕ್ಕೆಲದಲ್ಲಿರುವ ಗರ್ಭಗೃಹ ಒಂದರಲ್ಲಿ ಅರ್ಕೇಶ್ವರ ಲಿಂಗ ಹಾಗೂ ವಿಜಯನಗರ ಕಾಲದ ಭೈರವ ಶಿಲ್ಪಗಳಿದ್ದರೆ, ಇನ್ನೊಂದರಲ್ಲಿ ವೈದ್ಯೇಶ್ವರ ಲಿಂಗವಿದೆ.

**ನವರಂಗ** :- ನವರಂಗವು ಹನ್ನೆರಡು ಅಂಕಣಗಳಿಂದ ಕೂಡಿದ್ದು, ಮೈಸೂರು ಒಡೆಯರ ಕಾಲದ ಆರು ಕಂಬಗಳನ್ನೊಳಗೊಂಡಿದ್ದು, 20 ಅರೆಗಂಬಗಳಿಂದ ಕೂಡಿದೆ. ನವರಂಗದ ಮಧ್ಯಭಾಗದಲ್ಲಿ ಭುವನೇಶ್ವರಿ ಎರಡು ಹಂತಗಳಿಂದ ಕೂಡಿದ್ದು, ಸುಂದರವಾದ ಕಮಲದ ಮೊಗ್ಗಿನಾಕೃತಿಯನ್ನು ಹೊಂದಿದೆ. ನವರಂಗ ದ್ವಾರದ ಲಲಾಟ ಬಿಂಬದಲ್ಲಿ ಶಿವಲಿಂಗವನ್ನು ಕೆತ್ತನೆ ಮಾಡಲಾಗಿದೆ. ದ್ವಾರದ ಇಕ್ಕೆಲಗಳಲ್ಲಿಯೂ ಶೈವ ದ್ವಾರಪಾಲಕರಿದ್ದಾರೆ. ದ್ವಾರ ಶಾಖೆಗಳಲ್ಲಿ ಲತಾ-ಹೂ ಬಳ್ಳಿಯ ಅಲಂಕಾರದ ರಚನೆಗಳಿರುವುದನ್ನು ಕಾಣಬಹುದಾಗಿದೆ.

**ಮುಖಮಂಟಪ**

ಮುಖಮಂಟಪವು 4 ಕಂಬಗಳು ಹಾಗೂ 4 ಅರೆಗಂಬಗಳನ್ನು ಹೊಂದಿದ್ದು, ಮುಖಮಂಟಪದ ಮಧ್ಯಭಾಗದಲ್ಲಿ ಕಮಲದ ಮೊಗ್ಗಿನಾಕೃತಿಯ ಭುವನೇಶ್ವರಿಯಿದೆ. ಇದು 3 ಹಂತಗಳಿಂದ ಕೂಡಿದ್ದು, ಕೆಳಭಾಗದಲ್ಲಿ ತೆರೆದ ಕಮಲದ ಕೆತ್ತನೆಯನ್ನು ಮಾಡಲಾಗಿದೆ.

ದೇವಾಲಯದ ಮುಖಮಂಟಪದ ಮುಂಭಾಗ 4 ಅಡಿ ಎತ್ತರದ ಅದಿಷ್ಠಾನದ ಮೇಲೆ ಒಂದು ಅಡಿ ಎತ್ತರದ ತಲೆಕೆಳಗಾದ ಕಮಲಾಕೃತಿಯ ಬಲಿಪೀಠವನ್ನು ಇರಿಸಲಾಗಿದೆ. ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ತೆರೆದ ಬಾವಿಯಿದೆ. ದೇವಾಲಯದ ಸುತ್ತಲೂ ಸುಮಾರು 5

ಅಡಿ ಎತ್ತರದ ಸಿಮೆಂಟ್ ಗಾರೆಗಳಿಂದ ನಿರ್ಮಿಸಿದ ಪ್ರಾಕಾರವಿದೆ. ದೇವಾಲಯದ ಏರುವಿನ್ಯಾಸ ರಚನೆಯಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿಯಿದೆ. ಅಧಿಷ್ಠಾನವು ಮೂರು ಅಡಿ ಎತ್ತರವಿದ್ದು, ಉಪಾನ, ಜಗತಿ, ಕುಮುದ ಹೊಂದಿದ ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ.[53]

ಪ್ರಸ್ತರವು ಕಮಲದ ಆಕೃತಿಯನ್ನು ಹೊಂದಿದ್ದು, ಕಪೋತ ಮಾದರಿಯಲ್ಲಿದೆ. ಗ್ರೀವದಲ್ಲಿ ದೇವತಾ ಶಿಲ್ಪಗಳಿದ್ದು, ನಾಲ್ಕು ದಿಕ್ಕಿನಲ್ಲಿಯೂ ಕುಳಿತ ನಂದಿಯ ವಿಗ್ರಹವನ್ನು ಕೆತ್ತನೆ ಮಾಡಿದ್ದು, ಅದರ ಮೇಲ್ಭಾಗ ಕೀರ್ತಿಮುಖದ ರಚನೆಯಿದೆ. ಶಿಖರವು ದ್ರಾವಿಡ ಶೈಲಿ ಹೊಂದಿದ್ದು, ಚಚ್ಚೌಕವಾಗಿದ್ದು, ಸ್ತೂಪಿಯನ್ನು ಹೊಂದಿದೆ.

**ಭೈರಾಪುರ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 2 ಕಿ.ಮೀ. ದೂರದಲ್ಲಿ ಭೈರಾಪುರ ಗ್ರಾಮವಿದೆ. ತಿರುಮಕೂಡಲು ನರಸೀಪುರ ಪಟ್ಟಣಕ್ಕೆ ಸೇರಿದ ಭೈರಾಪುರವು ಪಟ್ಟಣದ ವಾಯುವ್ಯ ದಿಕ್ಕಿನಲ್ಲಿದೆ. ಈ ಗ್ರಾಮದಲ್ಲಿರುವ ಬಸವೇಶ್ವರ ದೇವಾಲಯವು ಗ್ರಾಮದಿಂದ ಹೊರಭಾಗದಲ್ಲಿದೆ.

**ಬಸವೇಶ್ವರ ದೇವಾಲಯ**

ಈ ದೇವಾಲಯವು ಕ್ರಿ.ಶ.14ನೇ ಶತಮಾನದಲ್ಲಿ ನಿರ್ಮಾಣವಾಗಿರುವ ಶೈವ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ.[54]

**ಗರ್ಭಗುಡಿ:–** ಗರ್ಭಗುಡಿಯು 3X3 ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ 6 ಅಡಿ ಎತ್ತರದ ಮಂಟಪದ ಮೇಲೆ ಗರ್ಭಗುಡಿಯ ಮಧ್ಯಭಾಗದಲ್ಲಿ ಪ್ರತಿಷ್ಠಾಪಿಸಿರುವ ಏಕಶಿಲಾ ನಂದಿಯನ್ನು ಪೂಜಿಸಲು ನೆಲಮಾಳಿಗೆಯಿಂದ ಮೆಟ್ಟಿಲುಗಳನ್ನು ಕಲ್ಲುಗಳಿಂದ ನಿರ್ಮಿಸಲಾಗಿದೆ. ಗರ್ಭಗುಡಿಯಲ್ಲಿ ಬಸವನ ಶಿಲ್ಪವನ್ನು ಬಿಟ್ಟು ಗರ್ಭಗುಡಿಯ ಒಳಗಡೆ ಯಾವುದೇ ಶಿಲ್ಪವಿಲ್ಲ. ಈ ದೇವಾಲಯದ ಮುಂಭಾಗದಲ್ಲಿ ಎರಡು ಅಡಿ ಎತ್ತರದ ಬಲಿಪೀಠವಿದೆ.

## ಮೈಸೂರು ಒಡೆಯರ ಕಾಲದ ಶೈವದೇವಾಲಯಗಳು

**ಚಿಮಿಲ**

ತಿರುಮಕೂಡಲು ನರಸೀಪುರದಿಂದ 20 ಕಿ.ಮೀ ದೂರದಲ್ಲಿ ಚಿಮಿಲ ಎಂಬ ಗ್ರಾಮವಿದೆ. ಈ ಗ್ರಾಮವು ಮಂಡ್ಯ ಜಿಲ್ಲೆಗೆ ಹತ್ತಿರದಲ್ಲಿದೆ. ಗ್ರಾಮದ ಅತಿ ಪ್ರಾಚೀನ ದೇವಾಲಯವೆಂದರೆ ಸೋಮೇಶ್ವರ ದೇವಾಲಯ. ಇದು ಗ್ರಾಮದ ಪೂರ್ವ ದಿಕ್ಕಿನಲ್ಲಿ ಊರಿನಿಂದ ಹೊರಗಡೆಯಿದೆ.

**ಸೋಮೇಶ್ವರ ದೇವಾಲಯ**

ಇದು ಗ್ರಾಮದ ಹೊರಗಡೆ ಪೂರ್ವ ದಿಕ್ಕಿನಲ್ಲಿರುವ ಈ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯವು ಕ್ರಿ.ಶ. 17ನೇ ಶತಮಾನದಲ್ಲಿ ನಿರ್ಮಾಣವಾಗಿದೆ.[55] ಈ ದೇವಾಲಯವು ಗರ್ಭಗುಡಿ ಮತ್ತು ಸುಕನಾಸಿಯನ್ನು ಹೊಂದಿರುವ ಚಿಕ್ಕ ದೇವಾಲಯವಾಗಿದೆ.

**ಗರ್ಭಗುಡಿ:-** ಇದು 4X4 ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯ ಮಧ್ಯಭಾಗದಲ್ಲಿ ಒಂದು ಅಡಿ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ:-** ಈ ದೇವಾಲಯವು ಸುಕನಾಸಿಯನ್ನು ಮಾತ್ರ ಹೊಂದಿದ್ದು, ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿ ದ್ವಾರದ ಬಲಭಾಗದಲ್ಲಿ ಗಣಪತಿ ವಿಗ್ರಹ ಹಾಗೂ ಬಲಭಾಗದಲ್ಲಿ ಮಹಿಷಮರ್ಧಿನಿ ಶಿಲ್ಪವನ್ನು ಇರಿಸಲಾಗಿದೆ. ದೇವಾಲಯದ ಮುಂಭಾಗ ಎರಡು ಅಡಿ ಎತ್ತರದ ಬಲಿಪೀಠವಿದೆ.

**ತಿರುಮಕೂಡಲು ನರಸೀಪುರ : ಮೂಲಸ್ಥಾನೇಶ್ವರಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರದ ಪೂರ್ವ ದಿಕ್ಕಿಗೆ ಅಂದರೆ ಮಾದಪುರ-ಹೆಮ್ಮಿಗೆ ಮುಖ್ಯರಸ್ತೆಯ ಹಳೆಯ ಸಂತೆಮಾಳದಲ್ಲಿ ಮೂಲಸ್ಥಾನೇಶ್ವರ ಮತ್ತು ಶಿವಕಾಮಸುಂದರಿಯಮ್ಮನ ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಮೂಲಸ್ಥಾನೇಶ್ವರ ದೇವಾಲಯವು ಒಂದು ಪ್ರಮುಖವಾದ ದ್ರಾವಿಡ ಶೈಲಿಯ ದೇವಾಲಯವಾಗಿದೆ. ಈ

ದೇವಾಲಯವು ಪೂರ್ವಾಭಿಮುಖವಾದ ಏಕಕೂಟ ದೇವಾಲಯವಾಗಿದ್ದು, ಗರ್ಭಗುಡಿ, ಸುಕನಾಸಿ, ಸುಕನಾಸಿಗೆ ಹೊಂದಿಕೊಂಡಂತೆ ಅಂತರಾಳ, ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗವಿದೆ. ನವರಂಗದ ಮುಂಭಾಗದಲ್ಲಿ ದ್ವಾರಮಂಟಪವನ್ನು ಸೇರಿಸಲಾಗಿದೆ.

**ಗರ್ಭಗುಡಿ**:- ಮೂಲಗರ್ಭಗುಡಿಯು 10X10 ಚದರ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯ ಮಧ್ಯಭಾಗದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ನಾಲ್ಕು ಮೂಲೆಗೂ ನಾಲ್ಕು ಗೋಡೆಕಂಬಗಳಿವೆ. ಮೇಲ್ಭಾಗದಲ್ಲಿ ಭುವನೇಶ್ವರಿ ಇದ್ದು, ಭುವನೇಶ್ವರಿಯು ನಾಲ್ಕು ಹಂತಗಳನ್ನು ಹೊಂದಿದ್ದು, ಚೌಕ, ನಕ್ಷತ್ರ ಮತ್ತು ಆಯತಾಕಾರದಿಂದ ಕೂಡಿದ್ದು, ಮಧ್ಯದಲ್ಲಿ ಅರಳಿದ ಕಮಲದ ಹೂವಿನಾಕಾರದ ಕೆತ್ತನೆಯನ್ನು ಕಡೆಯಲಾಗಿದೆ. ಅದರ ಮುಂದೆ ಸುಕನಾಸಿಯ ಭಾಗವಿದ್ದು, ಸುಕನಾಸಿಯಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ.

**ಸುಕನಾಸಿ**:-ಸುಕನಾಸಿಯ ದ್ವಾರದ ಮೇಲ್ಭಾಗದ ಲಾಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ನಲುಗಂಬಗಳು ಸರಳವಾಗಿದ್ದು ಇದರ ಮುಂದೆ ತೆರೆದ ಅಂತರಾಳವಿದೆ.

**ನವರಂಗ**:- ಸುಕನಾಸಿಯ ಮುಂದಿನ ಭಾಗವೇ ನವರಂಗ. ಈ ನವರಂಗದ ಮಧ್ಯದಲ್ಲಿ ಆರು ಕಂಬಗಳಿವೆ. ಈ ಕಂಬಗಳ ವಾಸ್ತು ವಿನ್ಯಾಸವನ್ನು ಗಮನಿಸಿದರೆ ಮೈಸೂರು ಒಡೆಯರ ಕಾಲದ ಮಾದರಿಯನ್ನು ಹೋಲುತ್ತವೆ. ಈ ಕಂಬಗಳು ಪೀಠದಲ್ಲಿ ಚೌಕಾಕಾರವಾಗಿದ್ದು, ಅದರ ಮೇಲಿನ ಭಾಗ ನಾಲ್ಕು ಮುಖ ಹೊಂದಿದ್ದು, ನಾಲ್ಕು ಮುಖಗಳಲ್ಲಿ ಸರ್ಪವು ಎಡೆ ಬಿಚ್ಚಿರುವಂತೆ ಅಥವಾ ಅರಳಿ ಎಲೆಯ ಮಾದರಿಯನ್ನು ಹೋಲಿಕೆ ಮಾಡುವಂತಿದೆ. ಅದರ ಮೇಲಿನ ಭಾಗ ಹದಿನಾರು ಮುಖವನ್ನು ಹೊಂದಿದ್ದು, ಅದರ ಮೇಲಿನ ಭಾಗ 32 ಮುಖಗಳನ್ನು ಹೊಂದಿರುವುದು ಕಂಡುಬರುತ್ತದೆ. ಮತ್ತೊಂದು ಭಾಗವು ಚೌಕಾಕಾರವಾಗಿದ್ದು ಉಬ್ಬುಶಿಲ್ಪಗಳನ್ನು ಕಡೆಯಲಾಗಿದೆ. ಅದರ ಮೇಲಿನ ಭಾಗದಲ್ಲಿ ಆಯತಾಕಾರದ ಚಾಚು ಬೋದಿಗೆಯ ಮೇಲೆ ಆಯತಾಕಾರದ ತೊಲೆಗಳನ್ನು ಜೋಡಿಸಿದ್ದು ಅದರ ಮೇಲೆ ಚಪ್ಪಡಿಗಳನ್ನು ಹಾಸಲಾಗಿದೆ.

ಈ ದೇವಾಲಯದ ನವರಂಗದಲ್ಲಿ ಉತ್ತರ ದಿಕ್ಕಿಗೆ ಒಂದು ಕೋಷ್ಠಗುಡಿಯಿದೆ. ಅದೇ ದಿಕ್ಕಿಗೆ ಇತ್ತೀಚಿನ ಒಂದು ಪೀಠವನ್ನು ನಿರ್ಮಿಸಿ ಈ ಪೀಠದ ಮೇಲೆ ನವಗ್ರಹಗಳನ್ನೂ

ಇಡಲಾಗಿದೆ. ಪ್ರವೇಶದ್ವಾರದ ಇಕ್ಕೆಲಗಳಲ್ಲಿ ದ್ವಾರಗಂಬಗಳನ್ನು ಸೇರಿಸಲಾಗಿದೆ. ಪ್ರವೇಶದ್ವಾರ ಉತ್ತರದಿಕ್ಕಿಗೆ ಸಚಿತ್ರಾನಂದಸ್ವಾಮಿಯ ಶಿಲ್ಪವಿದ್ದು, ದಕ್ಷಿಣ ದಿಕ್ಕಿಗೆ ಒಂದು ಕೋಷ್ಠ ಗುಡಿಯಿದೆ. ಈ ಕೋಷ್ಠ ಗುಡಿಯಲ್ಲಿ ಲಕ್ಷ್ಮಿನಾರಾಯಣ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಕೋಷ್ಠ ಗುಡಿಯ ಪಕ್ಕದ ಗೋಡೆಯ ಭಿತ್ತಿಯಲ್ಲಿ 1.1/2 ಅಡಿ ಉದ್ದದ ಒಂದು ಮೀನಿನ ಉಬ್ಬುಶಿಲ್ಪದ ಕೆತ್ತನೆಯನ್ನು ಮಾಡಲಾಗಿದೆ.

**ಮುಖಮಂಟಪ:–** ಮುಖಮಂಟಪದಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳು ಮೈಸೂರು ಒಡೆಯರ ಕಾಲಕ್ಕೆ ಸೇರಿದ ಕಂಬಗಳಾಗಿದ್ದವೆಂದು ಹೇಳಬಹುದು. ಮುಖಮಂಟಪಕ್ಕೆ ಹೊಂದಿಕೊಂಡಂತೆ ದೇವಾಲಯ ಹತ್ತುವುದಕ್ಕೆ ಮೆಟ್ಟಿಲುಗಳಿದ್ದು ಇಕ್ಕೆಲಗಳಲ್ಲಿ ಆನೆಯ ಮುಖವನ್ನು ಹೊಂದಿರುವಂತಹ ಚಪ್ಪಡಿಗಳಿವೆ. ಇವುಗಳ ಹೊರಭಾಗದಲ್ಲಿ ವ್ಯಾಳವಾರಿ ಉಬ್ಬುಶಿಲ್ಪದ ಕೆತ್ತನೆಯು ಕಂಡುಬಂದಿದ್ದು, ಇದರ ಮುಂದೆ ಒಂದು ಕಂಬವಿದೆ. ಈ ಕಂಬವು ಗಂಗರ ವಾಸ್ತು ನೋಟವನ್ನು ಹೊಂದಿದಂತಹ ಕಂಬವಾಗಿದೆ. ಈ ಕಂಬದ ಮೇಲೆ ಪೀಠವನ್ನು ಇರಿಸಿ ಕರ್ಪೂರದ ನೈವೇದ್ಯವನ್ನು ಮಾಡುವುದಕ್ಕಾಗಿ ನೆಟ್ಟಿರಬೇಕು ಎಂದು ಹೇಳಬಹುದಾಗಿದೆ. ಪ್ರಾಯಶಃ ಈ ಕಂಬವನ್ನು ಬೇರೆ ಕಡೆಯಿಂದ ತಂದು ನೆಟ್ಟಿರಬಹುದು. ಈ ದೇವಾಲಯದ ಗರ್ಭಗುಡಿ ಸುಕನಾಸಿಯ ಹೊರಭಾಗದ ಭಿತ್ತಿಯನ್ನು ಗಮನಿಸಿದರೆ ಇಲ್ಲಿ ಸುಂದರವಾದ ಅರೆಗಂಬಗಳನ್ನು ಮತ್ತು ಕೋಷ್ಠ ಮಂಟಪಗಳನ್ನು ಸೇರಿಸಲಾಗಿರುವುದು ಸೊಗಸಾಗಿ ಮೂಡಿಬಂದಿದೆ. ಇದರ ಮೇಲ್ಭಾಗದಲ್ಲಿ ಇಳಿಜಾರಾದ ಕಪೋತವನ್ನು ಕಾಣಬಹುದು. ಈ ಕಪೋತದ ಮಧ್ಯದಲ್ಲಿ ಕೀರ್ತಿಮುಖಗಳ ಕೆತ್ತನೆಯನ್ನು ಕಡೆಯಲಾಗಿದೆ. ಮೇಲ್ಭಾಗದಲ್ಲಿ ಗಾರೆಯಿಂದ ಮಾಡಲ್ಪಟ್ಟ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ. ದೇವಾಲಯದ ಮೇಲ್ಭಾಗದಲ್ಲಿ ಗರ್ಭಗುಡಿ, ಅಂತರಾಳ ಮತ್ತು ನವರಂಗದ ಗಾರೆಯಿಂದ ಮಾಡಲ್ಪಟ್ಟಂತಹ ಆರು ನಂದಿಶಿಲ್ಪಗಳನ್ನು ಕಾಣಬಹುದಾಗಿದೆ ಮತ್ತು ದೇವಾಲಯದ ಮುಂಭಾಗಕ್ಕೆ ಹೊಂದಿಕೊಂಡಂತೆ ಮಧ್ಯದಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ. ಈ ಹಿನ್ನೆಲೆಯಿಂದ ಒಟ್ಟು ಏಳು ಗಾರೆಯ ನಂದಿಶಿಲ್ಪಗಳು ದೇವಾಲಯದ ಮೇಲ್ಭಾಗದಲ್ಲಿ ಕಂಡುಬರುತ್ತವೆ ಹಾಗೂ ಮೂಲಸ್ಥಾನೇಶ್ವರ ದೇವಾಲಯದ ಉತ್ತರ ದಿಕ್ಕಿಗೆ ಪ್ರನಾಳವಿದೆ. ಈ ಪ್ರನಾಳದ ಮೇಲ್ಭಾಗದಲ್ಲಿ ಕೋಷ್ಠಗುಡಿಯಿದ್ದು, ಈ ಕೋಷ್ಠಗುಡಿಯಲ್ಲಿ ಗಣೇಶನ ಉಬ್ಬುಶಿಲ್ಪವನ್ನು ಕಡೆಯಲಾಗಿದೆ. ಮತ್ತೊಂದು ಕೋಷ್ಠ ಗುಡಿಯಲ್ಲಿ ವಿಷ್ಣುವಿನ ಉಬ್ಬುಶಿಲ್ಪವನ್ನು ಕೆತ್ತಿರುವುದು ಕಂಡುಬರುತ್ತದೆ.

ದೇವಾಲಯದ ಹಿಂಭಾಗದಲ್ಲಿ ಒಂದು ಚಪ್ಪಡಿಯಿದ್ದು, ಈ ಚಪ್ಪಡಿಯಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಜಿನನ ಶಿಲ್ಪವನ್ನು ಪತ್ತೆ ಮಾಡಲಾಗಿದೆ.

**ತಿರುಮಕೂಡಲು ನರಸೀಪುರ : ಶಿವಕಾಮಸುಂದರಿಯಮ್ಮದೇವಿ ದೇವಾಲಯ**

ಈ ದೇವಾಲಯವು ಮೂಲಸ್ಥಾನೇಶ್ವರ ದೇವಾಲಯದ ಉತ್ತರ ದಿಕ್ಕಿಗೆ ಪೂರ್ವಾಭಿಮುಖವಾಗಿದ್ದು, ದ್ರಾವಿಡ ಶೈಲಿಯ ತಳವಿನ್ಯಾಸವನ್ನು ಹೊಂದಿರುವ ದೇವಾಲಯವಾಗಿದೆ. ಈ ದೇವಾಲಯವು ಗರ್ಭಗುಡಿ ಮತ್ತು ವಿಶಾಲವಾದ ನವರಂಗವನ್ನು ಹೊಂದಿದೆ. ನವರಂಗದ ಮಧ್ಯಭಾಗದಲ್ಲಿ ಆರು ಕಂಬಗಳನ್ನು ಸೇರಿಸಲಾಗಿದೆ. ಈ ಕಂಬಗಳ ವಾಸ್ತುರಚನಾ ನೋಟದಿಂದ ಇಲ್ಲಿರುವ ಕಂಬಗಳೂ ಮೈಸೂರು ಒಡೆಯರ ಕಾಲಕ್ಕೆ ಸಂಬಂಧಿಸಿದ ಕಾಲದಲ್ಲಿಯೇ ನಿರ್ಮಾಣವಾಗಿರುವ ದೇವಾಲಯವೆಂದು ಪರಿಗಣಿಸಲಾಗಿದೆ.

**ಗರ್ಭಗುಡಿ**:– ಈ ಗರ್ಭಗುಡಿಯು 5x5 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭಗುಡಿಯಲ್ಲಿ ಕಲ್ಲುಪೀಠದ ಮೇಲೆ ದೇವಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದೊಂದು ಶಕ್ತಿ ದೇವತೆಯಾಗಿದ್ದು ಇಂದಿಗೂ ಶಿವ ಸುಂದರಿಯಮ್ಮದೇವಿಯನ್ನು ಈ ಪ್ರಾಂತ್ಯದಲ್ಲಿ 'ಶಕ್ತಿ ಪ್ರಧಾನವಾದ ದೇವತೆ' ಎಂದು ಆರಾಧಿಸುತ್ತಾರೆ.

**ನವರಂಗ**:– ನವರಂಗವು ೯ ಅಂಕಣಗಳಿಂದ ಕೂಡಿದ್ದು, ನಾಲ್ಕು ಕಂಬಗಳನ್ನು ಒಳಗೊಂಡಿದೆ. ಪ್ರಸ್ತುತ ದೇವಾಲಯದ ಮುಂಭಾಗದಲ್ಲಿ ಪ್ರವೇಶದ್ವಾರಕ್ಕೆ ಹೊಂದಿಕೊಂಡಂತಿರುವ ದ್ವಾರ ಮೆಟ್ಟಿಲುಗಳನ್ನು ಸೇರಿಸಲಾಗಿದೆ. ದೇವಾಲಯದ ಮೇಲ್ಭಾಗದಲ್ಲಿ ಇಟ್ಟಿಗೆ ಗಾರೆಯಿಂದ ನಿರ್ಮಿಸಲ್ಪಟ್ಟ ಕೈಪಿಡಿ ಗೋಡೆಯನ್ನು ಕಟ್ಟಲಾಗಿದ್ದು, ಪ್ರವೇಶ ದ್ವಾರಕ್ಕೆ ಹೊಂದಿಕೊಂಡಂತೆ ಮೇಲ್ಭಾಗದಲ್ಲಿ ಗಾರೆಯಿಂದ ನಿರ್ಮಿತವಾದ ಕೋಷ್ಠ ಗುಡಿಯಿದೆ. ಆದರೆ ಕೋಷ್ಠದಲ್ಲಿ ಯಾವುದೇ ಶಿಲ್ಪವಿಲ್ಲ. ಈ ಕೋಷ್ಠ ಗುಡಿಯು ಸುಂದರವಾಗಿ ಅಲಂಕೃತಗೊಂಡಿದ್ದು, ಮೇಲ್ಭಾಗದಲ್ಲಿ ಸಿಂಹದ ಮುಖವು ಬಾಯಿ ತೆರೆದಿರುವಂತೆ ಮೂಡಿಬಂದಿದೆ. ಪ್ರಾಯಶಃ ಇದೊಂದು ಶಕ್ತಿ ದೇವಾಲಯವಾಗಿರುವುದರಿಂದ ಈ ಕೋಷ್ಠಕದಲ್ಲಿ ವಾಸ್ತುಕಲೆ ಮೂಡಿಬಂದಿದೆ ಎಂದು ಹೇಳಬಹುದು.

**ತಿರುಮಕೂಡಲು ನರಸೀಪುರ : ಭಿಕ್ಷೇಶ್ವರ ದೇವಾಲಯ**

ಈ ದೇವಾಲಯವು ತಿರುಮಕೂಡಲು ನರಸೀಪುರದ ಎರಡು ನದಿಗಳ ಸಂಗಮದ ಅಂದರೆ ಕಾವೇರಿ ನದಿಯ ಎಡದಂಡೆಯ ಮೇಲೆ ನಿರ್ಮಾಣವಾದ 'ಭಿಕ್ಷೇಶ್ವರ' ದೇವಾಲಯವು ಒಂದು ಪ್ರಮುಖವಾದ ದೇವಾಲಯವೆಂದೇ ಪರಿಗಣಿಸಬಹುದಾಗಿದೆ. ಏಕೆಂದರೆ ಕಡಲತೀರ ದೇವಾಲಯದ ಮಾದರಿಯಲ್ಲಿಯೇ ನಿರ್ಮಾಣವಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಸಂಪೂರ್ಣ ಗ್ರಾನೈಟ್ ಕಲ್ಲಿನಿಂದ ನಿರ್ಮಿತವಾಗಿದೆ. ತಳವಿನ್ಯಾಸದಲ್ಲಿ ಗರ್ಭಗುಡಿ, ಸುಕನಾಸಿ, ನವರಂಗವನ್ನು ಹೊಂದಿದೆ.

**ಗರ್ಭಗುಡಿ**:- ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು, ಶಿವಲಿಂಗದ ಪ್ರಾಚೀನತೆಯನ್ನು ದೃಢಪಡಿಸುತ್ತದೆ ಹಾಗೂ ಸುಕನಾಸಿ ಭಾಗದಲ್ಲಿ ನಂದಿ ಶಿಲ್ಪವನ್ನು ಇಡಲಾಗಿದ್ದು, ಸರಳವಾದ ದ್ವಾರಗಳನ್ನು ಹೊಂದಿದೆ.

**ನವರಂಗ**:- ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು, ಈ ನಾಲ್ಕು ಕಂಬಗಳ ಪೀಠವು ಚೌಕಾಕಾರವಾಗಿದ್ದು ದಿಂಡಿನ ಭಾಗವು ಸುಮಾರು 32 ಮುಖಗಳನ್ನು ಹೊಂದಿವೆ. ದಿಂಡಿನ ಮೇಲ್ಭಾಗದಲ್ಲಿ ಆಯತಾಕಾರದ ಚಾಚು ಬೋದಿಗೆಯ ಮೇಲೆ ತೊಲೆಗಳನ್ನು ಜೋಡಿಸಲಾಗಿದೆ.

ದೇವಾಲಯದ ಹೊರಭಾಗವನ್ನು ನೋಡುವುದಾದರೆ ತಳವಿನ್ಯಾಸದ ಮೇಲೆ ಜಗತಿಯು ಮೂಡಿಬಂದಿದ್ದು, ಅದರ ಮೇಲ್ಭಾಗದಲ್ಲಿ ಮೂರು ಮೂಲವನ್ನು ಹೊಂದಿರುವ ಕುಮುದವನ್ನು ಕಾಣಬಹುದು. ಹಾರ ಮತ್ತು ಪ್ರತಿಯನ್ನು ಭಿಕ್ಷೇಶ್ವರ ದೇವಾಲಯದ ಜಗತಿಯು ಹಿನ್ಸರಿತ ಮತ್ತು ಮುನ್ಸರಿತಗಳಿಂದ ಕೂಡಿದ್ದು, ಮೂಲಗರ್ಭಗುಡಿಯ ಮೇಲ್ಭಾಗದಲ್ಲಿ ಶುದ್ಧ ದ್ರಾವಿಡ ಶೈಲಿಯ ವಿಮಾನವು ಕಂಡುಬರುತ್ತದೆ. ಈ ವಿಮಾನವು ಐದು ಅಂತಸ್ತುಗಳಿಂದ ಕೂಡಿದ್ದು ಮೇಲ್ಭಾಗದಲ್ಲಿ ವೃತ್ತಾಕಾರದ ಬೋದಿಗೆಯನ್ನು ಹೊಂದಿದ್ದು ಅದರ ಮೇಲೆ ಸ್ತೂಪಿಯನ್ನು ಕಡೆಯಲಾಗಿದೆ. ವಿಮಾನದಲ್ಲಿ ಕಂಡುಬರುವ ಅರೆಗಂಬಗಳನ್ನು ನೋಡುವುದಾದರೆ ಚೋಳರ ಕಾಲದ ವಾಸ್ತು ಅಲಂಕೃತಿಗಳನ್ನು ಹೊಂದಿರುವ ಅರೆಗಂಬಗಳ ಮಾದರಿಯಲ್ಲಿ ನಿರ್ಮಿಸಲಾಗಿದೆ. ಪ್ರಾಯಶಃ ಈ ವಿಮಾನವು ಮೈಸೂರು ಒಡೆಯರ ಕಾಲದ

ವಾಸ್ತುರಚನೆ ಎಂದು ಹೇಳಬಹುದು. ಆದರೂ ಮೈಸೂರಿನ ಒಡೆಯರು ಕರ್ನಾಟಕದಲ್ಲಿ ಆಳಿ ದೇವಾಲಯಗಳನ್ನು ನಿರ್ಮಿಸಿ ಹೋದಂತಹ ತಂಜಾವೂರಿನ ಚೋಳರ ವಾಸ್ತುಶೈಲಿಯನ್ನು ಈ ಭಾಗದಲ್ಲಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ.

ಐದನೇ ಅಂತಸ್ತಿನ ನಾಲ್ಕು ದಿಕ್ಕಿಗೂ ಸೇರಿದಂತೆ ನಾಲ್ಕು ಸಿಂಹದ ಮುಖಗಳನ್ನು ಕೆತ್ತಲಾಗಿದೆ. ಅದರ ಕೆಳಭಾಗದಲ್ಲಿ ನಾಲ್ಕು ದಿಕ್ಕಿಗೂ ನಾಲ್ಕು ನಂದಿಯ ಶಿಲ್ಪಗಳನ್ನು ಸೇರಿಸಲಾಗಿದೆ. ಈ ಭಿಕ್ಷೇಶ್ವರ ದೇವಾಲಯವು ಕಾವೇರಿ ನದಿ ದಂಡೆಯ ಮೇಲೆ ಸುಮಾರು ೩೦ ಅಡಿ ಎತ್ತರದ ಮಣ್ಣಿನ ದಿಣ್ಣೆಯ ಮೇಲೆ ನಿರ್ಮಿಸಲಾಗಿದೆ. ಪ್ರಾಯಶಃ ಅಂದಿನ ಕಾಲದಲ್ಲಿ ಈ ಪ್ರದೇಶ ಎತ್ತರವಾಗಿದ್ದು, ಇತ್ತೀಚಿನ ಕಾಲಘಟ್ಟದಲ್ಲಿ ನದಿಗಳ ನೀರಿನ ಕೊರೆತಕ್ಕಿಡಾಗಿ ಸವೆದಿರುವುದು ಕಂಡುಬರುತ್ತದೆ.

**ತಿರುಮಕೂಡಲು ನರಸೀಪುರ : ಆನಂದೇಶ್ವರ ದೇವಾಲಯ**

ಈ ದೇವಾಲಯವು ತಿರುಮಕೂಡಲು ನರಸೀಪುರದ ಎರಡು ನದಿಗಳ ಸಂಗಮದ ಅಂದರೆ ಕಾವೇರಿ ನದಿಯ ಎಡದಂಡೆಯ ಮೇಲೆ ನಿರ್ಮಾಣವಾಗಿದೆ. ಈ ದೇವಾಲಯವು ಭಿಕ್ಷೇಶ್ವರ ದೇವಾಲಯಕ್ಕೆ ದಕ್ಷಿಣಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗುಡಿ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಈ ದೇವಾಲಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ಮೈಸೂರು ಒಡೆಯರ ಕಾಲದಲ್ಲಿಯೇ ನಿರ್ಮಿತವಾಗಿರುವ ದೇವಾಲಯವೆಂದೇ ಹೇಳಬಹುದಾಗಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಯಾವುದೇ ಶಿಲ್ಪವಿಲ್ಲ. ಗರ್ಭಗುಡಿಗೆ ಹೊಂದಿಕೊಂಡಂತೆ ಸುಕನಾಸಿಯನ್ನು ಹೊಂದಿದೆ ಹಾಗೂ ಪಶ್ಚಿಮ ದಿಕ್ಕಿಗೆ ಎರಡು ಗರ್ಭಗುಡಿಯನ್ನು ಹೊಂದಿರುವುದು ಒಂದು ವಿಶೇಷತೆ ಎಂದು ಹೇಳಬಹುದು.

**ಮುಖಮಂಟಪ:–** ಮುಖಮಂಟಪದಲ್ಲಿ ನಾಲ್ಕು ಕಂಬಗಳನ್ನು ಸೇರಿಸಲಾಗಿದ್ದು, ಮುಖಮಂಟಪಕ್ಕೆ ಹೊಂದಿಕೊಂಡಂತೆ ಐದು ಕಂಬಗಳನ್ನು ಹೊಂದಿದೆ. ಅಲ್ಲದೆ ಸುತ್ತಲೂ ಗೋಡೆಗೆ ಸೇರಿದಂತೆ ಕಂಬಗಳನ್ನು ಸೇರಿಸಲಾಗಿದೆ. ಈ ಕಂಬಗಳಲ್ಲಿ ಯಾವುದೇ ರೀತಿಯ ಉಬ್ಬುಶಿಲ್ಪಗಳನ್ನು

ಕಡೆಯಲಾಗಿಲ್ಲ. ಆದ್ದರಿಂದ ಇವುಗಳು ಸಾಧಾರಣವಾಗಿ ನಿರ್ಮಿತಗೊಂಡಿರುವ ಕಂಬಗಳೆಂದು ಹೇಳಬಹುದು. ಹಾಗೂ ಈ ದೇವಾಲಯದಲ್ಲಿ ಯಾವುದೇ ಬಿಡಿಶಿಲ್ಪಗಳು ಕಂಡುಬರುವುದಿಲ್ಲ.

**ತಿರುಮಕೂಡಲು ನರಸೀಪುರ : ಚೌಡೇಶ್ವರಿ ದೇವಾಲಯ**

ತಿರುಮಕೂಡಲಿನ 'ಚೌಡೇಶ್ವರಿ ದೇವಾಲಯ' ಕಾವೇರಿ ನದಿಯ ಬಲದಂಡೆಯ ಮೇಲೆ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದೆ. ಈ ದೇವಾಲಯವು ಪ್ರಾಚೀನ ದೇವಾಲಯ ವಾಗಿದ್ದು, ಗರ್ಭಗುಡಿ, ನವರಂಗವನ್ನು ಮಾತ್ರ ಹೊಂದಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 5X3 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭ ಗುಡಿಯಲ್ಲಿ ಶ್ರೀಚೌಡೇಶ್ವರಿ ದೇವಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಮೂಲಗರ್ಭಗುಡಿಯಲ್ಲಿ ಶಕ್ತಿ ಪ್ರಧಾನವಾದ 'ಶ್ರೀಚೌಡೇಶ್ವರಿ ಅಮ್ಮನ' ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದು ಇಲ್ಲಿ ಶಕ್ತಿ ಪ್ರಧಾನವಾದ ದೇವಾಲಯವೂ ಹೌದು. ಗರ್ಭಗುಡಿಯ ಒಳಭಾಗದಲ್ಲಿ ಹುಟ್ಟು ನಿರ್ವಾಣದಲ್ಲಿರುವ ಕಾಲಭೈರವನ ಶಿಲ್ಪವನ್ನು ಇಡಲಾಗಿದೆ. ಭೈರವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಅಭಯ ಹಸ್ತ, ಖಡ್ಗ, ಸರ್ಪ ಮತ್ತು ಫಲವನ್ನು ಹಿಡಿದಿರುವುದು ಗೋಚರವಾಗುತ್ತದೆ. ಭೈರವನು ಮೀಸೆಯನ್ನು ಹೊಂದಿದ್ದು ತಲೆಯ ಮೇಲೆ ವಿಚಿತ್ರವಾಗಿ ಕೇಶಾಲಂಕಾರ ಮಾಡಿಕೊಂಡಿರುವುದು ಕಂಡುಬರುತ್ತದೆ. ಕಂಠದಲ್ಲಿ ರುದ್ರಾಕ್ಷಿಮಾಲೆಯನ್ನು ಧರಿಸಿದ್ದು, ಕರ್ಣಕುಂಡಲವೂ ಅಗಲವಾಗಿ ಮತ್ತು ಸೊಗಸಾಗಿ ಕಂಡುಬರುತ್ತವೆ.

**ನವರಂಗ:–** ನವರಂಗದ ಭಾಗದಲ್ಲಿ ಎರಡು ಕಂಬಗಳಿದ್ದು ಈ ಕಂಬವನ್ನು ನೋಡಿದರೆ ನಂಜನಗೂಡಿನ ನಂಜುಂಡೇಶ್ವರ, ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯ ಮತ್ತು ನಾರಾಯಣಸ್ವಾಮಿ ದೇವಾಲಯದ ಕಂಬಗಳ ಮಾದರಿಯಲ್ಲಿಯೇ ನಿರ್ಮಿಸಲಾಗಿದೆ. ಕಂಬದ ಪೀಠ ಆಯತಾಕಾರವಾಗಿದ್ದು ಅದರ ಮೇಲೆ ನಾಲ್ಕು ಮೂಲೆಗೂ ಸೇರಿದಂತೆ ಸರ್ಪದ ಹೆಡೆಯ ಮಾದರಿಯಲ್ಲಿ ಕಡೆಯಲಾಗಿದೆ. ಅದರ ಮೇಲ್ಭಾಗದಲ್ಲಿ ಎರಡು ಅಂತಸ್ತಿನಲ್ಲಿ ಹದಿನಾಲ್ಕು ಮುಖಗಳನ್ನು ಹೊಂದಿರುವ ಮಾದರಿಯ ದಿಂಡನ್ನು ಕಡೆಯಲಾಗಿದೆ. ಅದರ ಮೇಲ್ಭಾಗವು ಚೌಕಾಕಾರವಾಗಿದ್ದು ಆಯತಾಕಾರದ ಬೋದಿಗೆಯನ್ನು ಮತ್ತು ಮೇಲ್ಭಾಗದಲ್ಲಿ ತೊಲೆಯನ್ನು ಸೇರಿಸಲಾಗಿದೆ. ಇದು ಮೈಸೂರು ಒಡೆಯರ ಕಾಲದ ವಾಸ್ತುರಚನೆ ಎಂದು ಪರಿಗಣಿಸಬಹುದು.

ಉತ್ತರ ದಿಕ್ಕಿಗಿರುವ ಕಂಬದಲ್ಲಿ ರಾಜ ಒಡೆಯರ ಉಬ್ಬುಶಿಲ್ಪವನ್ನು ಮತ್ತು ದಕ್ಷಿಣ ದಿಕ್ಕಿನ ಕಂಬದಲ್ಲಿ ಸಿಂಹದ ಚಿತ್ರವನ್ನು ಕೆತ್ತಿದ್ದು, ಈ ದೇವಾಲಯದ ನವರಂಗದ ದಕ್ಷಿಣ ದಿಕ್ಕಿಗೆ ಒಂದು ಸುಂದರವಾದ ಮೂರು ಅಡಿ ಎತ್ತರವಿರುವ ಮಹಿಷಾಮರ್ದಿನಿ ಶಿಲ್ಪವನ್ನು ಇಡಲಾಗಿದೆ.

ಈ ಶಿಲ್ಪವು ಅತ್ಯಂತ ಸುಂದರವಾದ ಶಿಲ್ಪಕಲೆಯನ್ನು ಹೊಂದಿದೆ. ಈ ಶಿಲ್ಪವನ್ನು ನೋಡಿದರೆ ಹೊಯ್ಸಳರ ಕಾಲಕ್ಕೆ ಹೋಲಿಕೆ ಮಾಡಬಹುದಾದ ಶಿಲ್ಪವೆಂದು ಇಲ್ಲಿ ಪರಿಗಣಿಸಬಹುದು. ಏಕೆಂದರೆ ದೇವತೆಯು ಆರು ಕೈಗಳನ್ನು ಹೊಂದಿದ್ದು ಆರು ಕೈಗಳಲ್ಲಿಯೂ ಆಯುಧಗಳನ್ನು ಹಿಡಿದಿರುವುದು ಒಂದು ವಿಶೇಷತೆ ಎಂದು ಹೇಳಬಹುದು. ಆದರೆ ಈ ಶಿಲ್ಪದಲ್ಲಿ ಕೋಣ ಅಥವಾ ಎಮ್ಮೆ ನೆಲಕ್ಕೆ ಅಪ್ಪಿಕೊಂಡಿರುವ ಮಾದರಿಯಲ್ಲಿ ಬಿದ್ದಿದೆ. ಅಂದರೆ ಮಹಿಷಾಮರ್ದಿನಿ ಕೋಣವನ್ನು ಅತ್ಯಂತ ಬಲಯುತವಾಗಿ ಶೌರ್ಯದಿಂದ ಕೊಲ್ಲುತ್ತಿರುವ ದೃಶ್ಯ ಅಮೋಘವಾದುದ್ದು, ಮತ್ತೆ ದೇವತೆಯು ಹೆಚ್ಚು ಹೆಚ್ಚು ಆಭರಣಗಳಿಂದ ಅಲಂಕೃತವಾಗಿರುವುದು ಶಿಲ್ಪಕಲೆಯಲ್ಲಿ ಮೂಡಿಬಂದಿದೆ. ಇದರಿಂದ ಈ ಶಿಲ್ಪವು ಹೊಯ್ಸಳರ ಪ್ರಭಾವದಿಂದಲೇ ಆದಂತಹ ಶಿಲ್ಪವೆಂದು ಹೇಳಲಾಗಿದೆ.

**ವೈಷ್ಣವ ದೇವಾಲಯಗಳು**

**ಪೀಠಿಕೆ**

ಭಾರತದ ಪ್ರಮುಖ ಧರ್ಮಗಳಲ್ಲಿ ವೈಷ್ಣವ ಧರ್ಮವು ಒಂದು. ವಿಷ್ಣು ಪಾರಮ್ಯವನ್ನು ಸಾರುವ ವೈಷ್ಣವ ಧರ್ಮ ಕರ್ನಾಟಕದಲ್ಲಿ ರಾಮಾನುಜರ ಆಗಮನಕ್ಕಿಂತ ಬಹಳ ಹಿಂದಿನಿಂದಲೇ ಪ್ರಚಾರದಲ್ಲಿತ್ತು. ಕದಂಬರ ಹಲ್ಮಿಡಿ ಶಾಸನದ ವಿಷ್ಣುವಿನ ಪ್ರಾರ್ಥನೆ, ಬಾದಾಮಿ ಗುಹೆಗಳಲ್ಲಿ ವರಾಹಮೂರ್ತಿ, ತ್ರಿವಿಕ್ರಮ ಶಿಲ್ಪಗಳು ಕಾಣಿಸಿಕೊಂಡಿವೆ. ರಾಮಾನುಜರ ಆಗಮನದ ನಂತರ ಹೊಯ್ಸಳರ ರಾಜ್ಯದಲ್ಲಿ ವೈಷ್ಣವ ಧರ್ಮವು ಭದ್ರವಾಗಿ ನೆಲೆನಿಂತು, ಔನ್ನತ್ಯವನ್ನು ಪಡೆಯಿತು. ಭಾಗವತ ಮೂಲದ ವಿಷ್ಣುವಿನ ಆರಾಧನೆ, ರಾಮಾನುಜ ಪ್ರಣೀತ ಶ್ರೀ ವೈಷ್ಣವ ಪಂಥ, ಮಧ್ವಾಚಾರ್ಯರ ಮಾಧ್ವಸಂಪ್ರದಾಯ, ಕೀರ್ತನ ಪರಂಪರೆಗಳು ಮುಂದುವರೆದು ಮಧ್ಯಕಾಲೀನ ಕರ್ನಾಟಕದಲ್ಲಿ ವೈಷ್ಣವ ಧರ್ಮ ಅತ್ಯಂತ ಪ್ರಭಾವಶಾಲಿಯಾಗಿ ರಾಜಾಶ್ರಯವನ್ನು ಪಡೆದುದಲ್ಲದೆ, ಸಿರಿವಂತರು, ಅಧಿಕಾರಿಗಳು, ವರ್ತಕರು, ಸಾಮಾನ್ಯರನ್ನು

ತನ್ನ ಕಡೆಗೆ ಆಕರ್ಷಿಸತೊಡಗಿತು. ಸಮಾಜ, ಸಂಸ್ಕೃತಿ, ಸಾಹಿತ್ಯ ಕಲೆಯ ಕ್ಷೇತ್ರದಲ್ಲಿ ವೈಷ್ಣವ ಧರ್ಮದ ಪ್ರಭಾವ ಕಾಣಿಸಿಕೊಳ್ಳತೊಡಗಿತು.

ಇಂತಹ ಕೆಲವು ಪ್ರಮುಖ ವೈಷ್ಣವ ದೇವಾಲಯಗಳನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿ ಹಾಗೂ ಕೆಲವು ಮೂಲಾಧಾರಗಳನ್ನು ಅಭ್ಯಾಸಮಾಡಿ ಅವುಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ವಿವರಣೆಯನ್ನು ಕೊಡಲಾಗಿದೆ.

## ಗಂಗರ ಕಾಲದ ವೈಷ್ಣವ ದೇವಾಲಯಗಳು

**ಸೋಸಲೆ : ಹೊನ್ನಾದೇವಿ ದೇವಾಲಯ**

ಹೊನ್ನಾದೇವಿ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ತ್ರಿಕೂಟಚಲವಾಗಿದ್ದು, ಪೂರ್ವಾಭಿಮುಖವಾಗಿದೆ. (ಚಿ. ಸಂ.–21)

**ಗರ್ಭಗುಡಿ**:– ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಪ್ರಧಾನ ದೇವತೆ ವೈಷ್ಣವಿಯೊಂದಿಗೆ ಸಪ್ತಮಾತೃಕಾ ಶಿಲ್ಪಗಳು ಇವೆ. ಮೈಸೂರು ಕಡೆಯ ಪ್ರಸಿದ್ಧವಾದ ಸಪ್ತಮಾತೃಕಾ ಕ್ಷೇತ್ರಗಳಲ್ಲಿ ಇದು ಒಂದು.[56] ಬಹುಶಃ ಗಂಗರ ಕಾಲದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ.[57]

**ನವರಂಗ**:– ನವರಂಗದಲ್ಲಿ 9 ಅಂಕಣವಿದ್ದು, 12 ಕಂಬಗಳು, 8 ಅರೆಗಂಬಗಳಿವೆ. (ಚಿ. ಸಂ.–22)9 ಅಂಕಣಗಳಲ್ಲಿಯೂ ಭುವನೇಶ್ವರಿಯಿದೆ. ನವರಂಗದಲ್ಲಿ 4 ವಿಜಯನಗರ ಕಂಬಗಳಿದ್ದು, ಉಳಿದವು ಗಂಗರ ಕಾಲದಲ್ಲಿ ನಿರ್ಮಿಸಿದ ಕಂಬಗಳಾಗಿವೆ. ನವರಂಗದಲ್ಲಿ ಆಕರ್ಷಕವಾದ ಭುವನೇಶ್ವರಿ ಇದೆ. (ಚಿತ್ರ ಸಂಖ್ಯೆ–22)

**ಮುಖಮಂಟಪ**:– ಮುಖಮಂಟಪವು 4 ಕಂಬಗಳನ್ನು, 4 ಅರೆಗಂಬಗಳನ್ನು ಹೊಂದಿದೆ. ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ನವಗ್ರಹ ಮಂಟಪವಿದೆ. ಮುಖಮಂಟಪದ ಮುಂಭಾಗ ಮೆಟ್ಟಿಲುಗಳಿವೆ. ಸಿಂಹವಕ್ತ್ರ ಪ್ರಾಣಿಯಿದೆ. ದ್ರಾವಿಡ ಶೈಲಿಯ ವಿಮಾನವಿದೆ, ಗ್ರೀವದ ದೇವಕೋಷ್ಠಕದಲ್ಲಿ ಸ್ತ್ರೀದೇವತಾ ಶಿಲ್ಪಗಳಿದ್ದು, ಪ್ರಭಾವಳಿಯಲ್ಲಿ ಕೀರ್ತಿಮುಖದ ರಚನೆಯಿದೆ. ಚಚ್ಚೌಕಾರವಾದ ಶಿಖರವಿಲ್ಲ ಕಂಚಿನಿಂದ ಮಾಡಲಾದ ಸ್ತೂಪಿಯಿದೆ.

ಎರಡು ಅಡಿ ಎತ್ತರದ ಉಪಪೀಠದ ಮೇಲೆ ಅದಿಷ್ಠಾನವನ್ನು ನಿರ್ಮಿಸಲಾಗಿದೆ. ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ದೇವಾಲಯದ ಸುತ್ತಲೂ ೮ ಅಡಿ ಎತ್ತರದ ಪ್ರಾಕಾರವಿದೆ. ದೇವಾಲಯದ ಉತ್ತರ ಹಾಗೂ ಪೂರ್ವದಲ್ಲಿ ಪ್ರವೇಶ ದ್ವಾರವಿದೆ. ದೇವಾಲಯದ ಪೂರ್ವದಲ್ಲಿ ಕೊಳವಿದೆ.

**ಆಲಗೂಡು : ಚಲುವರಾಯಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ ೩ ಕಿ.ಮೀ. ದೂರದಲ್ಲಿ ಆಲಗೂಡು ಗ್ರಾಮವಿದೆ. ಗ್ರಾಮದ ಮಧ್ಯಭಾಗದಲ್ಲಿರುವ ಚಲುವರಾಯಸ್ವಾಮಿ ದೇವಾಲಯವು ತಿರುಮಕೂಡಲು ನರಸೀಪುರದ ಆಲಗೂಡಿನಲ್ಲಿರುವ ಒಂದು ಪ್ರಾಚೀನ ದೇವಾಲಯವಾಗಿದೆ. ಇದು ಗ್ರಾನೈಟ್ ಶಿಲೆ ಮತ್ತು ಗಾರೆಗಚ್ಚಿನಿಂದ ನಿರ್ಮಿತವಾದ ಶುದ್ಧ ದ್ರಾವಿಡ ಶೈಲಿಯ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಈ ದೇವಾಲಯ ಸಂಪೂರ್ಣ ದುಃಸ್ಥಿತಿಯ ಹಂತದಲ್ಲಿದೆ. ದೇವಾಲಯದ ವಾಸ್ತುಶಿಲ್ಪ ನೋಟವನ್ನು ಗಮನಿಸಿದರೆ ಇದು ಗಂಗರ ಕಾಲದ ದೇವಾಲಯವಾಗಿದ್ದರೂ ತದನಂತರದ ಕಾಲದಲ್ಲಿ ಕೆಲವು ಬದಲಾವಣೆಯಾಗಿರುವುದು ವಾಸ್ತುಶಿಲ್ಪ ಕಲೆಯಿಂದ ಕಾಣಬಹುದಾಗಿದೆ. ಏಕೆಂದರೆ ನವರಂಗದ ಮಧ್ಯದಲ್ಲಿ ಇರುವ ಕಂಬಗಳು ಮತ್ತು ದೇವಾಲಯದ ಮುಖಮಂಟಪದಲ್ಲಿರುವ ಕಂಬಗಳನ್ನು ಗಮನಿಸಿದರೆ ಗಂಗರ ಕಾಲದಲ್ಲಿ ನಿರ್ಮಿಸಿರುವಂತಹ ದೇವಾಲಯವೆಂದೇ ಹೇಳಬಹುದು. ದೇವಾಲಯದ ಗರ್ಭಗುಡಿಯ ಪೀಠದ ಮೇಲೆ ನಿಲ್ಲಿಸಿರುವ ಶಿಲ್ಪವನ್ನು ಗಮನಿಸಿದಾಗ ಹೊಯ್ಸಳರ ಕಾಲದ ಶಿಲ್ಪವೆಂದು ಪರಿಗಣಿಸಬಹುದಾಗಿದೆ. ಈ ಹಿನ್ನೆಲೆಯಿಂದ ಆಲಗೂಡಿನಲ್ಲಿ ಹಲವಾರು ರಾಜವಂಶಸ್ಥರು ಆಳ್ವಿಕೆ ಮಾಡಿರುವುದು ಶಾಸನಾಧಾರಗಳಿಂದ ಧೃಡಪಡುತ್ತದೆ. ಆದರೆ ಚಲುವರಾಯಸ್ವಾಮಿ ದೇವಾಲಯದ ಅಂದಿನ ಮತ್ತು ನಂತರದ ವಾಸ್ತುಶಿಲ್ಪ ಅಧ್ಯಯನ ಮಾಡಿದರೆ ಹಲವು ಕಾಲದಲ್ಲಿ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಈ ದೇವಾಲಯವು ಗರ್ಭಗುಡಿ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ.

ನವರಂಗವು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ೩೦ ಅಡಿ, ಉತ್ತರ–ದಕ್ಷಿಣಾಭಿಮುಖವಾಗಿ ೨೫ ಅಡಿ ಉದ್ದ ಮತ್ತು ಅಗಲವನ್ನು ಹೊಂದಿದೆ. ಮುಖಮಂಟಪವು

10X10 ಚ.ಅಡಿ ಸುತ್ತಳತೆಯನ್ನು ಹೊಂದಿದೆ. ಗರ್ಭಗುಡಿಯಲ್ಲಿ 1.5 ಅಡಿ ಕಲ್ಲುಪೀಠದ ಮೇಲೆ ಸುಮಾರು 5 ಅಡಿ ಎತ್ತರವಿರುವ ಚೆಲುವರಾಯಸ್ವಾಮಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

**ಗರ್ಭಗುಡಿ:-** ಗರ್ಭಗುಡಿಯು 10X10 ಚ.ಅಡಿ ಸುತ್ತಳತೆಯನ್ನು ಹೊಂದಿದೆ. ಒಂದು ಅಡಿ ಪಾಣಿಪೀಠದ ಮೇಲೆ ನಾಲ್ಕು ಅಡಿ ಎತ್ತರದ ಚಲುವರಾಯ ಶಿಲ್ಪವು ಚತುರ್ಭುಜಧಾರಿಯಾಗಿದ್ದು ಮೇಲಿನ ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು, ಕೆಳಗಿನ ಎರಡು ಕೈಗಳಲ್ಲಿ ಗದೆ ಮತ್ತು ಫಲವನ್ನು ಹಿಡಿದಿರುವುದು ಮೂಡಿಬಂದಿದೆ. ತಲೆಯ ಮೇಲ್ಭಾಗದಲ್ಲಿ ಎತ್ತರವಾದ ಕಿರೀಟವನ್ನು ಧರಿಸಿದ್ದು, ಪ್ರಭಾವಳಿಯಲ್ಲಿ ಸೂರ್ಯನ ಮಾದರಿಯ ಶಿಲ್ಪವನ್ನು ಕಡೆಯಲಾಗಿದೆ. ಹಿಂಭಾಗದ ಪ್ರಭಾವಳಿಯಲ್ಲಿ ಲತೆಗಳಿಂದ ಆವೃತವಾಗಿದ್ದು, ಮೇಲ್ಬಾಗದಲ್ಲಿ ಸಿಂಹದ ಮುಖವನ್ನು ಕಡೆಯಲಾಗಿದೆ. ಈ ಶಿಲ್ಪವು ವಿಶೇಷ ಶಿಲ್ಪವಾಗಿದ್ದು ಪ್ರಭಾವಳಿಯಲ್ಲಿ ನಾನಾ ರೀತಿಯ ಉಬ್ಬುಶಿಲ್ಪಗಳನ್ನು ಕಡೆಯಲಾಗಿದೆ. ಜೊತೆಗೆ ನವಗ್ರಹದ ಶಿಲ್ಪದ ಕೆತ್ತನೆ ಕಂಡುಬಂದಿರುವುದನ್ನು ಇಲ್ಲಿ ಪ್ರಸ್ತುತಪಡಿಸಿರುತ್ತೇನೆ. ಶಿಲ್ಪದ ಇಕ್ಕೆಲಗಳಲ್ಲಿ ಗಂಗೆ-ಯಮುನೆಯರ ಶಿಲ್ಪವನ್ನು ಕಡೆಯಲಾಗಿದೆ. ಈ ಶಿಲ್ಪಕಲೆಯನ್ನು ನೋಡಿದರೆ ಹೊಯ್ಸಳರ ಶಿಲ್ಪ ಮಾದರಿಯನ್ನು ಮರೆಯುವಂತಿಲ್ಲ. ಈ ಶಿಲ್ಪದ ಪೀಠದ ಮೇಲೆ ಗರುಡನ ಉಬ್ಬುಶಿಲ್ಪವೂ ಮೂಡಿಬಂದಿದೆ. ಈ ಹಿನ್ನೆಲೆಯಿಂದ ಇದೊಂದು ವೈಷ್ಣವ ಧರ್ಮಕ್ಕೆ ಪೂರಕವಾಗಿರುವಂತಹ ಶಿಲ್ಪವಾಗಿದೆಯೆಂದು ಹೇಳಬಹುದು. ಅಲ್ಲದೆ ಕಲ್ಲುಪೀಠವೂ ಹೆಚ್ಚು ಕಡಿಮೆ ಹೊಯ್ಸಳರ ಕಾಲದ ದೇವಪೀಠಗಳ ಮಾದರಿಯಲ್ಲಿಯೇ ಕಂಡುಬರುತ್ತದೆ.

ಗರ್ಭಗುಡಿಯ ಮೇಲ್ಭಾಗದಲ್ಲಿ ಭುವನೇಶ್ವರಿ ಇದ್ದು ಈ ಭುವನೇಶ್ವರಿಯೂ ಕಲ್ಲು ಚಪ್ಪಡಿಗಳಿಂದ ಆವೃತ್ತವಾಗಿದ್ದು ಕಲ್ಲು ಚಪ್ಪಡಿಯು ನಕ್ಷತ್ರಾಕಾರ, ಚೌಕಾಕಾರ ಮತ್ತು ವೃತ್ತಾಕಾರವನ್ನು ಹೊಂದಿದೆ. ಭುವನೇಶ್ವರಿಯ ಕಲ್ಲು ಚಪ್ಪಡಿಯಲ್ಲಿ ಎಲ್ಲಾ ಭಾಗದಲ್ಲಿಯೂ ಕಮಲದ ಕೆತ್ತನೆಯನ್ನು ಕೆತ್ತಲಾಗಿದೆ.

**ಸುಕನಾಸಿ:-**ಸುಕನಾಸಿಯ ಅಂಕಣವು 7X7 ಚ.ಅಡಿ ಸುತ್ತಳತೆ ಹೊಂದಿದೆ. ಈ ಸುಕನಾಸಿಯಲ್ಲಿ ಉತ್ತರ ದಿಕ್ಕಿನ ಗೋಡೆಗೆ ಸೇರಿದಂತೆ ಒಂದು ವೇದಿಕೆಯನ್ನು ನಿರ್ಮಿಸಲ್ಪಟ್ಟಿದ್ದು ಅದರ ಮೇಲ್ಭಾಗದಲ್ಲಿ ಸರ್ಪದ ಕಲ್ಲು, ವೀರಾಂಜನೇಯ, ಆಳ್ವರ್ ಮತ್ತೊಂದು ವೀರ ಯೋಧನ

ಬಿಡಿಶಿಲ್ಪಗಳನ್ನು ಇಡಲಾಗಿದೆ. ಈ ಎಲ್ಲಾ ಶಿಲ್ಪಗಳು ಒಂದೇ ಮಾದರಿಯ ಎತ್ತರವನ್ನು ಹೊಂದಿವೆ. ಸುಕನಾಸಿಯ ಮೇಲ್ಭಾಗದಲ್ಲಿ ಭುವನೇಶ್ವರಿಯನ್ನು ಹೊಂದಿದೆ.

**ನವರಂಗ:–** ನವರಂಗದ ಮಧ್ಯಭಾಗದಲ್ಲಿ ನಾಲ್ಕು ಕಂಬಗಳು ಮತ್ತು ಸುತ್ತಲೂ ಹನ್ನೆರಡು ಗೋಡೆ ಕಂಬಗಳಿವೆ. ಮಧ್ಯದಲ್ಲಿರುವ ನಾಲ್ಕು ಕಂಬಗಳು ಒಂದೇ ಮಾದರಿಯಲ್ಲಿದ್ದು, ಈ ಕಂಬಗಳನ್ನು ನೋಡಿದರೆ ತಲಕಾಡಿನ ಗಂಗರ ವಾಸ್ತುಶೈಲಿಯನ್ನು ಹೊಂದಿರುವ ಕಂಬಗಳೇ ಆಗಿದ್ದವೆಂದು ಹೇಳಬಹುದು. ಆದರೂ ಮೇಲ್ಭಾಗದಲ್ಲಿ ಹೊಯ್ಸಳರ ಶೈಲಿಯ ಚಾಚು ಪೀಠವನ್ನು ಅದರ ಮೇಲ್ಭಾಗದಲ್ಲಿ ಆಯತಾಕಾರದ ತೊಲೆಗಳನ್ನು ಸೇರಿಸಲಾಗಿದೆ. ಪ್ರಾಯಶಃ ಈ ದೇವಾಲಯವು ಗಂಗರ ಕಾಲದ ದೇವಾಲಯವಾಗಿದ್ದರೂ ಗರ್ಭಗುಡಿಯಲ್ಲಿ ಚೆಲುವರಾಯಸ್ವಾಮಿ ಶಿಲ್ಪದ ವಾಸ್ತುಶೈಲಿಯನ್ನು ನೋಡಿದರೆ ಹೊಯ್ಸಳರ ಕಾಲದಲ್ಲಿ ಶಿಲ್ಪವನ್ನು ಮಾಡಿರಬಹುದು ಎಂದು ಊಹಿಸಲಾಗಿದೆ.

**ಮುಖಮಂಟಪ:–** ಮುಖಮಂಟಪವನ್ನು ನೋಡಿದರೆ ಗಂಗರ ಕಾಲಕ್ಕೆ ಸೇರಿದ ಕಂಬಗಳೆಂದು ಹೇಳಬಹುದಾಗಿದೆ. ಮುಖಮಂಟಪದ ಮೇಲ್ಭಾಗದಲ್ಲಿ ಭುವನೇಶ್ವರಿ ಇದ್ದು, ದೇವಾಲಯದ ಗರ್ಭಗುಡಿಯ ಮೇಲ್ಭಾಗದಲ್ಲಿ ಇಟ್ಟಿಗೆ ಗಾರೆಯಿಂದ ನಿರ್ಮಿತವಾದ ವಿಮಾನವಿದೆ. ಈ ವಿಮಾನವು ನಾಲ್ಕು ಅಂತಸ್ತುಗಳಿಂದ ಕೂಡಿದ್ದು ಮೇಲ್ಭಾಗದಲ್ಲಿ ವೃತ್ತಾಕಾರವಾಗಿದೆ. ಈ ವಾಸ್ತುಶೈಲಿಯನ್ನು ನೋಡಿದರೆ ಚೋಳರ ಕಾಲದಲ್ಲಿ ದೇವಾಲಯದ ವಿಮಾನ ನಿರ್ಮಾಣವಾಗಿತ್ತೆಂದು ಹೇಳಬಹುದು. ಈ ದೇವಾಲಯವು ಸಂಪೂರ್ಣ ಗ್ರಾನೈಟ್ ಶಿಲೆಯಿಂದ ನಿರ್ಮಿತವಾಗಿ ಈಗ ಸಂಪೂರ್ಣ ಭಗ್ನವಾಗಿದ್ದು ದುಃಸ್ಥಿತಿಯ ಹಂತವನ್ನು ತಲುಪಿದೆ. ಆದ್ದರಿಂದ ಚೆಲುವರಾಯಸ್ವಾಮಿ ದೇವಾಲಯದ ತಳವಿನ್ಯಾಸ ಮತ್ತು ಜಗತಿಯನ್ನು ನೋಡಿದರೆ ಸರಳವಾಗಿ ನಿರ್ಮಾಣವಾಗಿರುವುದು ಕಂಡುಬರುತ್ತದೆ.

**ಬನ್ನೂರು : ಕೋದಂಡರಾಮಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 16 ಕಿ.ಮೀ. ದೂರದಲ್ಲಿ ಬನ್ನೂರು ಗ್ರಾಮವಿದೆ. ಗ್ರಾಮದ ಬಸ್ ನಿಲ್ದಾಣದ ಬಳಿ ಇರುವ ಕೋದಂಡರಾಮಸ್ವಾಮಿ ದೇವಾಲಯವು ಉತ್ತರಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳನ್ನು ಹೊಂದಿದೆ.

ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥವಿದ್ದು, ಗುಡಿಯ ಸುತ್ತ ಪ್ರಾಕಾರವಿದೆ.[58] ಈ ದೇವಾಲಯದ ಪರಿಸರದಲ್ಲೇ ಗಂಗರ ಕಾಲದ ನಾಲ್ಕು ಶಾಸನಗಳು ಪತ್ತೆಯಾಗಿದೆ. ಆದ್ದರಿಂದ ಇದು ಗಂಗರ ಕಾಲದಲ್ಲೇ ಅಸ್ತಿತ್ವದಲ್ಲಿದ್ದು, ನಂತರದಲ್ಲಿ ಸಾಕಷ್ಟು ಮಾರ್ಪಾಡುಗಳೊಂದಿಗೆ ವಿಸ್ತಾರಗೊಂಡಿರುವಂತೆ ಭಾಸವಾಗುತ್ತದೆ. ನೆರೆಯ ಅತ್ತಿಹಳ್ಳಿಯ 1367ರ ಶಾಸನದಲ್ಲಿ ಅನಾದಿ ಅಗ್ರಹಾರ ಶ್ರೀರಾಮಪುರವಾದ ಬನ್ನೂರ ಮಹಾಜನಗಳು ಅತ್ತಿಹಳ್ಳಿಯಲ್ಲಿ ದತ್ತಿಬಿಟ್ಟ ಉಲ್ಲೇಖವಿದೆ. ಈ ಶಾಸನದಿಂದ ಆ ವೇಳೆಗೆ ಬನ್ನೂರಿಗೆ ಶ್ರೀರಾಮ ದೇವಾಲಯದಿಂದಾಗಿ, 'ಶ್ರೀರಾಮಪುರ' ಎಂಬ ವಿಶೇಷ ಅಭಿದಾನ ಲಭಿಸಿದ್ದ ಅಂಶ ವೇದ್ಯವಾಗುತ್ತದೆ. ಕೈಲಾಸೇಶ್ವರ ಗುಡಿಯಲ್ಲಿರುವ 1615ರ ಶಾಸನದಿಂದ, ಮೈಸೂರು ಅರಸ ರಾಜೊಡೆಯರು ಬನ್ನೂರ ರಘುಪತಿ ಸ್ವಾಮಿಯ ಅರ್ಚನೆಗೆಂದು ನೆರೆಯ ಬೇವಿನಹಳ್ಳಿಯನ್ನು ದಾನ ಬಿಟ್ಟ ಅಂಶ ಗೊತ್ತಾಗುತ್ತದೆ. ಈ ದೇವರ ಜಾತ್ರೆಯು ರಾಮನವಮಿಯಂದು ವಿಜೃಂಭಣೆಯಿಂದ ನಡೆಯುತ್ತದೆ. ಈ ಗುಡಿಯ ಆವರಣದಲ್ಲೇ ಮಧ್ವಯತಿ ವ್ಯಾಸತೀರ್ಥರು ಪ್ರತಿಷ್ಠಾಪಿಸಿದರೆಂದು ಹೇಳಲಾಗುವ ಪ್ರಾಣದೇವರು ಜನ್ಮಾಂಜನೇಯನ ಸುಂದರ ಕಿರುಮೂರ್ತಿ ಇದೆ.

**ಗರ್ಭಗುಡಿ**:- ಗರ್ಭಗುಡಿಯು 8X8 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಪಾಣಿಪೀಠದ ಮೇಲೆ ರಾಮ. ಲಕ್ಷ್ಮಣ ಮತ್ತು ಸೀತೆಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ**:- ಸುಕನಾಸಿಯು 8X8 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯಿದ್ದು ಯಾವುದೇ ಶಿಲ್ಪಗಳಾಗಲಿ, ಭುವನೇಶ್ವರಿಯಾಗಲಿ ಕಂಡುಬರುವುದಿಲ್ಲ. ಸುಕನಾಸಿಯ ದ್ವಾರದಲ್ಲಿ ಬಾಗಿಲುವಾಡದಲ್ಲಿ ದಶಾವತಾರದ ಶಿಲ್ಪಗಳನ್ನು ಕಡೆಯಲಾಗಿದೆ.

**ನವರಂಗ**:- ನವರಂಗವು ಪ್ರಧಾನವಾದ ನಾಲ್ಕು ಕಂಬಗಳನ್ನು ಒಳಗೊಂಡಿದ್ದು, 12 ಅರೆಗಂಬಗಳು ಕಂಡುಬರುತ್ತವೆ. ನವರಂಗದಲ್ಲಿ ನಮ್ಮಾಳ್ವಾರ್, ಭಗವತ್ ರಾಮಾನುಜರ್, ವೇದಾಂತ ಕೇಶಿಕರು, ಗಣಪತಿ, ವ್ಯಾಸರಾಯರು ನಿರ್ಮಿಸಿದ ಮುಖ್ಯ ಪ್ರಾಣ, ಸುದರ್ಶನ್ ಆಳ್ವಾರರ ಶಿಲ್ಪಗಳು ಕಂಡುಬರುತ್ತವೆ. ನವರಂಗದ ಪೂರ್ವದಲ್ಲಿ 8X8 ಅಡಿ ಸುತ್ತಳತೆಯನ್ನು ಹೊಂದಿರುವ ಗುಡಿಯಿದ್ದು 2 ಅಡಿ ಎತ್ತರದ ಅಧಿಷ್ಠಾನದಲ್ಲಿ ಉತ್ಸವ ಮೂರ್ತಿಗಳಾದ ರಾಮ,

ಸೀತೆ, ಲಕ್ಷ್ಮಣರ ಪಂಚಲೋಹದ ಶಿಲ್ಪಗಳನ್ನು ಇಡಲಾಗಿದೆ. ಶಿಲ್ಪಗಳ ಮೇಲ್ಭಾಗದಲ್ಲಿ ಎರಡು ಹಂತದ ಭುವನೇಶ್ವರಿಯು ಕಂಡುಬರುತ್ತದೆ. ನವರಂಗದ ದ್ವಾರದಲ್ಲಿ ಜಯ–ವಿಜಯರ 3 ಅಡಿ ಎತ್ತರದ ಶಿಲ್ಪಗಳನ್ನು ಇಕ್ಕೆಲಗಳಲ್ಲಿ ಕಾಣಬಹುದಾಗಿದೆ.

**ಮುಖಮಂಟಪ**:– ಮುಖಮಂಟಪವು ವಿಶಾಲವಾಗಿದ್ದು, 18 ಕಂಬಗಳಿಂದ ಕೂಡಿದೆ. ಮುಖಮಂಟಪದ ಮಧ್ಯಭಾಗದಲ್ಲಿ 10 ಅಡಿ ಎತ್ತರದ ಕಂಚಿನ ಕಂಬವನ್ನು ನಿಲ್ಲಿಸಲಾಗಿದೆ.

**ಪ್ರಾಕಾರ**:– ಪ್ರಾಕಾರವು 10 ಅಡಿ ಎತ್ತರವಾಗಿದ್ದು, ವಿಶಾಲವಾಗಿದೆ. ಈ ವಿಶಾಲವಾದ ಪ್ರಾಕಾರದಲ್ಲಿ ಮುಖಮಂಟಪಕ್ಕೆ ಹೊಂದಿಕೊಂಡಂತೆ ಜನಾರ್ಧನ ದೇವಾಲಯವು ನಿರ್ಮಾಣವಾಗಿದೆ. ಪ್ರಾಕಾರದ ಒಳಗಡೆ ತೆರೆದ ಬಾವಿಯು ಕಂಡುಬರುತ್ತದೆ.

**ಜನಾರ್ಧನ ದೇವಾಲಯ**

**ಗರ್ಭಗುಡಿ**:– ಗರ್ಭಗುಡಿಯು 8X8 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ 1.5 ಅಡಿ ಪಾಣಿಪೀಠದ ಮೇಲೆ 4 ಅಡಿ ಎತ್ತರದ ಜನಾರ್ಧನನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪವು ಶಂಖ, ಚಕ್ರ, ಗದಾ, ಹಸ್ತವನ್ನು ಹಿಡಿದಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಭುವನೇಶ್ವರಿ ಇದೆ.

**ಸುಕನಾಸಿ**:– ಸುಕನಾಸಿಯು 6X6 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಈ ದೇವಾಲಯದ ವಿಶೇಷತೆವೇನೆಂದರೆ ಕೊದಂಡರಾಮಸ್ವಾಮಿ ದೇವಾಲಯದ ಮುಖಮಂಟಪಕ್ಕೆ ಹೊಂದಿಕೊಂಡಂತೆ ಇರುವುದೇ ವಿಶೇಷವೆಂದು ಹೇಳಬಹುದಾಗಿದೆ. ಮಹಾದ್ವಾರದ ಮುಂಭಾಗದಲ್ಲಿ 3 ಕಿರುಗುಡಿಗಳಿದ್ದು, ರಾಮ, ಲಕ್ಷ್ಮಣ, ಸೀತೆಯರು ಆಂಜನೇಯನಿಗೆ ಆಶೀರ್ವಾದಿಸುತ್ತಿರುವ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ದೇವಾಲಯದ ಮುಂಭಾಗದಲ್ಲಿ 4 ಕಂಬಗಳಿವೆ. ಹಾಗೂ ಮುಂಭಾಗದಲ್ಲಿ 20 ಅಡಿ ಎತ್ತರದ ದೀಪಸ್ಥಂಭವಿದೆ.

## ಚೋಳರ ಕಾಲದ ವೈಷ್ಣವ ದೇವಾಲಯಗಳು

**ತಡಿಮಾಲಂಗಿ : ಜನಾರ್ಧನ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 16 ಕಿ.ಮೀ. ದೂರದಲ್ಲಿ ತಡಿಮಾಲಂಗಿ ಗ್ರಾಮವಿದೆ. ಈ ಗ್ರಾಮಕ್ಕೆ ತಲಕಾಡಿನಿಂದ ಪೂರ್ವಕ್ಕೆ ದೋಣಿ ಮೂಲಕ ಹೊಳೆದಾಟಿ ಆಚೆ ದಡದಲ್ಲಿರುವ ತಡಿಮಾಲಂಗಿಯನ್ನು ತಲುಪಬಹುದಾಗಿದ್ದು, ಇದು ಕೊಳ್ಳೇಗಾಲಕ್ಕೆ 8 ಕಿ.ಮೀ ದೂರದಲ್ಲಿದೆ. ಕಾವೇರಿ ನದಿಯ ಬಲದಂಡೆಯ ಮೇಲಿರುವ ಇದು ಹಿಂದೆ ಗಂಗರ ಕಾಲದಲ್ಲಿ ಪ್ರಮುಖ ಊರಾಗಿದ್ದು, ಚೋಳರ ಕಾಲದಲ್ಲಿ ಅಗ್ರಹಾರ ಪಟ್ಟಣವಾಗಿ, ವಿದ್ಯಾಕೇಂದ್ರವಾಗಿ ಮೆರೆದಿರುವ ಸ್ಥಳವಾಗಿದೆ.

ತಡಿಮಾಲಂಗಿಯ ಊರಿಂದಾಚೆ ತೋಟದಲ್ಲಿರುವ ಜನಾರ್ಧನ ದೇವಾಲಯವು ವೈಷ್ಣವ ದೇವಾಲಯವಾಗಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದ್ದು ಕ್ರಿ.ಶ.985ರಲ್ಲಿ ಪಟ್ಟಕ್ಕೆ ಬಂದ ಚೋಳರ ರಾಜರಾಜ ಚೋಳನು ಸುಮಾರು ಕ್ರಿ.ಶ.1004ರ ವೇಳೆಗೆ ತಡಿಮಾಲಂಗಿಯಲ್ಲಿ ಜನಾರ್ಧನ ದೇವಾಲಯವನ್ನು ನಿರ್ಮಿಸಿದನು.[59] ಈ ದೇವಾಲಯವು ಉತ್ತಮ ಕಲೆ, ವಾಸ್ತುಶಿಲ್ಪವನ್ನು ಹೊಂದಿದೆ. ಈ ದೇವಾಲಯವು ಚೋಳರ ಬೇರೆ ಬೇರೆ ದೇವಾಲಯಗಳಂತೆ ಇರದೆ ಬೇರೆ ವಿಶೇಷ ವಾಸ್ತು ರೀತಿಯನ್ನು ಕಾಣಬಹುದಾಗಿದೆ.

**ಗರ್ಭಗುಡಿ**:- ಗರ್ಭಗುಡಿಯು 8X8 ಸುತ್ತಳತೆಯನ್ನು ಹೊಂದಿದ್ದು, ಒಂದು ಅಡಿ ಪಾಣಿಪೀಠದ ಮೇಲೆ ಸುಮಾರು 4 ಅಡಿ ಎತ್ತರದ ಜನಾರ್ಧನ ಶಿಲ್ಪವು ಸುಂದರವಾದ ಕೆತ್ತನೆಯಿಂದ ಕೂಡಿದೆ. ಗರ್ಭಗೃಹದ ನವೀನ ಶಿಖರವು ವೇಸರ ಶೈಲಿಯಲ್ಲಿದ್ದು, ಅಂತರಾಳದ ಮೇಲೆ ಕೀರ್ತಿಮುಖವಿದೆ. ಗರ್ಭಗೃಹದಲ್ಲಿರುವ ಜನಾರ್ಧನ ಶಿಲ್ಪವು ಪಲ್ಲವ ಮತ್ತು ಗಂಗರ ವಾಸ್ತುಶೈಲಿಯ ಲಕ್ಷಣವನ್ನು ಹೊಂದಿದ್ದು, ಶಿಖರದಲ್ಲಿ ಕೊಳವೆಯಾಕಾರದ ಕಿರೀಟವಿದೆ.

**ನವರಂಗ**:- ನವರಂಗದಲ್ಲಿ 4 ಕಂಬಗಳಿದ್ದು, 9 ಅಂಕಣಗಳಿಂದ ಕೂಡಿದೆ. ಒಂದೇ ಅಂತಸ್ತಿನ ಚೌಕ ಗೋಪುರವುಳ್ಳ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳನ್ನು ಈ ದೇವಾಲಯ ಚೋಳರ ಆರಂಭಕಾಲದ ಶೈಲಿಗೊಂದು ಉತ್ತಮ ಉದಾಹರಣೆ ಎನ್ನಬಹುದು. ನವರಂಗದ ಮುಂಭಾಗದಲ್ಲಿ ಬಲಕ್ಕಾದಂತೆ ಆನೆಯ ಶಿಲ್ಪವಿದೆ. ಈ ದೇವಾಲಯದ ಅಧಿಷ್ಠಾನ ಭಿತ್ತಿಗಳ

ಮೇಲಿರುವ ಶಾಸನಗಳಲ್ಲಿ ಮಾಲಂಗಿಯ "ಜನಾರ್ಧನ" ದೇವರು ಹಾಗೂ "ರವಿಕುಲ ಮಾಣಿಕ್ಯ ವಿಣ್ಣಾಗಾರ್ ಆಳ್ವಾರ್" ದೇವಾಲಯಗಳ ಉಲ್ಲೇಖವಿದೆ.

ದೇವಾಲಯದ ಸುತ್ತಲು ಸುಮಾರು 48 ಚೋಳರ ಕಾಲದ ಕಂಬಗಳನ್ನು ಕಾಣಬಹುದಾಗಿದೆ. ದೇವಾಲಯದ ಗರ್ಭಗುಡಿಯ ಮೇಲಿರುವ ಶಿಖರವು ಶಿಥಿಲಾವಸ್ಥೆ ಯಲ್ಲಿರುವುದನ್ನು ಕಾಣಬಹುದಾಗಿದೆ.

ತಡಿಮಾಲಂಗಿಯ ಜನಾರ್ದನ ದೇವಾಲಯದ ತಳಪಾಯದ ಮೇಲಿರುವ ಕ್ರಿ.ಶ.1004ರ ತಮಿಳು ಶಾಸನ ಕೆಲವು ಸ್ಥಳೀಯ ಗಾವುಂಡರು ಮಾಯಿಲಂಗೆಯಲ್ಲಿ ಭೂಮಿಯೊಂದನ್ನು 100 ಕಳಂಜು ಹೊನ್ನಿಗೆ ಮಾರಿದ್ದನ್ನು ದಾಖಲಿಸಿದ್ದು, ಆ ಹಣವನ್ನು ರವಿಕುಲ ಮಾಣಿಕ್ಯ ವಿಣ್ಣಾಗಾರ್ ಆಳ್ವಾರ್ ದೇವಾಲಯದ ಭಂಡಾರದಿಂದ ಪಾವತಿಸಲಾಗಿತ್ತು. ಒಂದನೆಯ ರಾಜರಾಜನಿಗೆ 'ರವಿಕುಲಮಾಣಿಕ್ಯ' ಎಂಬ ಬಿರುದಿದ್ದು, ಆ ಹೆಸರಲ್ಲೇ ದೇವಾಲಯವೊಂದನ್ನು ತಡಿಮಾಲಂಗಿಯಲ್ಲಿ ಬಹುಶಃ ಅರಸನೇ ನಿರ್ಮಿಸಿದ್ದಿರಬೇಕೆಂದು ಇದರಿಂದ ತರ್ಕಿಸಬಹುದಾಗಿದೆ. ಅಲ್ಲದೆ ಈ ದೇವರ ಭಂಡಾರಕ್ಕೆ ಅರಸನ ಅಕ್ಕಪೆರಿಯ ಕುಂದವ್ವೆಯು ತನ್ನ ಭಂಡಾರದಿಂದ ನಗದು ದತ್ತಿ ನೀಡಿದ್ದನ್ನೂ ದಾಖಲಿಸಿದೆ. ಒಂದನೆಯ ರಾಜರಾಜನಿಗೆ ಕುಂದವ್ವೆ ಎಂಬ ಹೆಸರಿನ ಮಗಳಿದ್ದುದರಿಂದ ಇವಳನ್ನು ಪೆರಿಯ ಕುಂದವ್ವೆ ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ಇಲ್ಲಿ ಉಲ್ಲೇಖಿತಗೊಂಡಿರುವ 100 ಕಳಂಜು ಹೊನ್ನನ್ನು, ತುಲೈನಿರೈ ಸೆಂಪೊನ್ ಎಂದು ಕರೆಯಲಾಗಿದ್ದು, ಅದು ನಿಶ್ಚಿತ ತೂಕ ಮುದ್ರೆಗಳನ್ನೊಳಗೊಂಡ ಶುದ್ಧ ಚಿನ್ನದ ನಾಣ್ಯವೆಂಬುದನ್ನು ಸೂಚಿಸುತ್ತದೆ. ಇದೇ ದೇವಾಲಯದಲ್ಲಿರುವ ಇನ್ನೊಂದು ಶಾಸನ ಕೂಡ ಮರದೂರಿನ ಸಭೆಯವರು ಕಾಸುಗಳ ಲೆಕ್ಕದಲ್ಲಿ ತೂಗಿದ 100 ಕಲಂಜು ಹೊನ್ನಿಗೆ ಭೂಮಿಯನ್ನು ಮಾರಿದ ಅಂಶವನ್ನು ದಾಖಲಿಸಿದೆ.

ಒಂದನೆಯ ರಾಜರಾಜನ ನಂತರ ಅಧಿಕಾರಕ್ಕೆ ಬಂದ ಒಂದನೆಯ ರಾಜೇಂದ್ರಚೋಳ (ಕ್ರಿ.ಶ.1012-1044)ನ ಕಾಲದ ನಾಲ್ಕು ಶಾಸನಗಳಲ್ಲಿ ಮೂರು ತಡಿಮಾಲಂಗಿಯಲ್ಲಿವೆ. ಕ್ರಿ.ಶ.1018ರ ವಿಜಯಪುರದ ಶಾಸನದಲ್ಲಿ ರಾಜೇಂದ್ರ ಚೋಳನು ಎಡತೊರೆನಾಡು, ಬನವಾಸಿ, ಕೊಳ್ಳಿಪಾಕೆ ಪ್ರಾಂತ್ಯಗಳನ್ನು ಜಯಿಸಿದ್ದ ಅಂಶವು ಉಲ್ಲೇಖಾರ್ಹವಾಗಿದೆ. ಹಾಗೂ ಈ ದೇವಾಲಯದ ತಳಪಾದಿಯ ಕಲ್ಲಿನ ಮೇಲಿರುವ ಕ್ರಿ.ಶ.1022ರ ಶಾಸನದಿಂದ ಕುರವನ್

ಉಲಗಳಂದಾನ್ (ಭೂಮಿಯನ್ನಳೆವವನು) ಎಂದು ಕರೆಯಲಾದ ರಾಜೇಂದ್ರಚೋಳ ಜಯಮೂರನಾಡಳ್ವಾನ್ ಎಂಬ ಸೇನಾನಿಯು ರವಿಕುಲಮಾಣಿಕ್ಯ ದೇವಾಲಯಕ್ಕೆ ಬಿಟ್ಟ ಸುವರ್ಣದಾನವನ್ನು ತಿಳಿಸುತ್ತದೆ.

ತಡಿಮಾಲಂಗಿಯಲ್ಲಿರುವ ಚೋಳ ಶಾಸನಗಳಲ್ಲಿ ನಾಲ್ಕು ಶಾಸನಗಳು ಒಂದನೇಯ ರಾಜೇಂದ್ರನ ಕಾಲಕ್ಕೆ ಸೇರಿದ್ದು, ಅವನ ಕಾಲದಲ್ಲಿ ಜನಾರ್ಧನ ದೇವಾಲಯವು ವಿಸ್ತಾರಗೊಂಡಿದ್ದು ಜೀರ್ಣೋದ್ಧಾರದ ಉಲ್ಲೇಖವಿದೆ ಹಾಗೂ ಅದೇ ದೇವಾಲಯದ ಬಳಿಯ ಜಮೀನಿನಲ್ಲಿರುವ ಕ್ರಿ.ಶ.1195 ಮತ್ತು ಕ್ರಿ.ಶ.1482ರ ಶಾಸನಗಳಲ್ಲಿ ಇದನ್ನು ಜನಾರ್ಧನ ಗುಡಿ ಎಂದು ಉಲ್ಲೇಖಿಸಲಾಗಿದ್ದು, ಆ ದೇವರ ಪೂಜಾವಿಧಿಗೆಂದು ದತ್ತಿ ಬಿಡಲಾಗಿದೆ. ಪ್ರಸ್ತುತ ಈ ದೇವಾಲಯದ ಒಳಗಡೆ ಹೋಗಲು ಆಗದಂತಹ ಸ್ಥಿತಿಯಲ್ಲಿರುವುದು ಒಂದು ದುರಂತವೇ ಸರಿ.[60]

## ಹೊಯ್ಸಳರ ಕಾಲದ ವೈಷ್ಣವ ದೇವಾಲಯಗಳು

**ಮೂಗೂರು**

ತಿರುಮಕೂಡಲು ನರಸೀಪುರದಿಂದ 10 ಕಿ.ಮೀ. ಆಗ್ನೇಯಕ್ಕೆ ತಿ.ನರಸೀಪುರ-ಚಾಮರಾಜನಗರ ಹಾಗೂ ಕೊಳ್ಳೇಗಾಲ ರಸ್ತೆಯಲ್ಲಿರುವ ಹೋಬಳಿ ಕೇಂದ್ರ. ಇದು ಗಂಗರ ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತು. ಇಲ್ಲಿಯ ಆದಿನಾಥ, ಪಾರ್ಶ್ವನಾಥ, ದೇಸೇಶ್ವರ, ತಿಬ್ಬಾದೇವಿ ಹಾಗೂ ನಾರಾಯಣಸ್ವಾಮಿ ಗುಡಿಗಳಿಗೂ ಹೊಯ್ಸಳರ ಕಾಲದಲ್ಲಿ ದಾನದತ್ತಿ ನೀಡಿರುವ ಅಂಶ ಹಲವಾರು ಶಾಸನಗಳಲ್ಲಿ ವ್ಯಕ್ತವಾಗಿದೆ.

**ತಿಬ್ಬಾದೇವಿ (ತ್ರಿಪುರಸುಂದರಿ) ದೇವಾಲಯ**

ತ್ರಿಪುರ ಸುಂದರಿ ದೇವಾಲಯದ (ಚಿ. ಸಂ.-23) ಈಗಿರುವ ಮೂಲ ಮೂರ್ತಿ 16ನೇ ಶತಮಾನದ ನಂತರದು. ತ್ರಿಪುರಸುಂದರಿ ಎಂದು ಕರೆಯುವ ಇಲ್ಲಿಯ ದೇವಿ ವೈಷ್ಣವಿದೇವಿಯಾಗಿರುತ್ತಾರೆ.[61] ಇದರ ಪ್ರಾಚೀನತೆಯನ್ನು ಅಲ್ಲಿರುವ ಸುಮಾರು 10ನೆಯ ಶತಮಾನದ ಶಾಸನಾಧಾರದ ಮೇಲೆ ಗಂಗರಷ್ಟು ಹಿಂದಕ್ಕೆ ಗುರುತಿಸಲಾಗುತ್ತದೆ. ಆದರೆ ಅಲ್ಲೇ ಇರುವ ಹೊಯ್ಸಳ ಮುಮ್ಮಡಿ ನರಸಿಂಹನ ಕಾಲಕ್ಕೆ ಸೇರಿದ ಕ್ರಿ.ಶ. 1261ರ ಶಾಸನದಲ್ಲಿ ಈ (ತಿಬ್ಬವ್ವೆ) ದೇವಿಯ ಮೊದಲ ಉಲ್ಲೇಖ ಕಂಡುಬರುತ್ತಿದ್ದು,[62] ಸುಂಕಾಧಿಕಾರಿ ನಾಚಣ್ಣನ ಮಗ

ಸಂಕಣ್ಣನು ದೇವಿಯ ನಂದಾದೀಪದ ಎಣ್ಣೆಗೆಂದು ಪ್ರತೀ ವರ್ಷ ಒಂದು ಗದ್ಯಾಣ ಎರಡು ಪಣವನ್ನು ದಾನ ನೀಡಿದ ಅಂಶ ಗೊತ್ತಾಗುತ್ತದೆ. ಊರ ಮನೆಯೊಂದರ ಬಾಗಿಲ ಬಳಿ ಬಿದ್ದಿರುವ ಕ್ರಿ.ಶ. 13-14ನೆಯ ಶಾಸನ ಕಂಬದಿಂದ, 'ಮೋಗೂರ' ಮಂಚಗಾವುಂಡನು ತಿಪ್ಪವ್ವೆಕೋಯಿಲ(ಗುಡಿ)ಗೆ ಚಂದನವನ್ನು ಲೇಪಿಸಿದ ಅಂಶ ಗೊತ್ತಾಗುತ್ತದೆ.

**ಗರ್ಭಗುಡಿ**:- ಈ ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ತ್ರಿಪುರಸುಂದರಿಯ ಶಿಲ್ಪವನ್ನು ಇರಿಸಲಾಗಿದೆ. ಇದೇ ದೇವಿಯ ಗರ್ಭಗುಡಿಯ ಬಾಗಿಲಿಗೆ ಹಿತ್ತಾಳೆ ಚೌಕಟ್ಟಿನ ಸೇವೆಯನ್ನು ಮುಮ್ಮಡಿ ಕೃಷ್ಣರಾಜಒಡೆಯರ ಮಗಳು ದೇವರಾಜಮ್ಮಣಿಯವರು ಮಾಡಿಸಿದ್ದನ್ನು ಒಂದು ಶಾಸನ ತಿಳಿಸಿದರೆ, ದೇವರ ಪಲ್ಲಕ್ಕಿ ವಾಹನವನ್ನು ಒಡೆಯರ ಪಾದಸೇವಕಿಯಾದ ಮೂಗೂರ ಅಮೃತಾಸಾನಿಯು ಮಾಡಿಸಿದ ಅಂಶವನ್ನು ಇನ್ನೊಂದು ಶಾಸನ ದಾಖಲಿಸುತ್ತಿದ್ದು, ಆ ವೇಳೆಗೆ ದೇವಿಯು ತ್ರಿಪುರಸುಂದರಮ್ಮ ಎಂದೇ ಖ್ಯಾತಳಾಗಿದ್ದ ಅಂಶ ಶಾಸನದಿಂದ ಸ್ಪಷ್ಟವಾಗುತ್ತದೆ.

**ನವರಂಗ**:- ನವರಂಗವು ನಾಲ್ಕು ಕಂಬಗಳನ್ನು ಒಳಗೊಂಡಿದ್ದು ಒಂಭತ್ತು ಅಂಕಣಗಳಿಂದ ಕೂಡಿದೆ. ನವರಂಗದ ಹಿತ್ತಾಳೆಯ ಬಾಗಿಲ ಚೌಕಟ್ಟನ್ನು ಸಿದ್ಧಲಿಂಗಮ್ಮ, ದೇವಿಯ ಸನ್ನಿಧಾನದ 32 ಸೇರು ತೂಕದ ಗಂಟೆಯನ್ನು ಭದ್ರಕಾಳಮ್ಮನೂ ಹಾಗೂ ಕುದುರೆ ವಾಹನವನ್ನು ಮದ್ದಲೆ ಲಿಂಗಯ್ಯನ ಮಗಳಾದ ಕೆಂಪಾಸಾನಿಯು ಮಾಡಿಸಿದ ಅಂಶ ಅವುಗಳ ಮೇಲಿರುವ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ವಿಶಾಲವಾದ ಪ್ರಾಕಾರದ ನಡುವೆ ಇರುವ ತಿಬ್ಬಾದೇವಿ ಗುಡಿಗೆ ಗರ್ಭಗೃಹ ನವರಂಗ ಹಾಗೂ ಮುಖಮಂಟಪಗಳಿವೆ. ಗರ್ಭಗೃಹದಲ್ಲಿರುವ ವಿಷ್ಣುಶಕ್ತಿ ವೈಷ್ಣವಿಯ ಶಿಲ್ಪವು ಕ್ರಿ.ಶ. 1264ರ ಶಾಸನೋಕ್ತ ತಿಬ್ಬವ್ವೆಯದಾಗಿದ್ದು, ದೇವಿಯು ಶಂಖ, ಚಕ್ರ, ಅಭಯವರದ ಹಸ್ತೆಯಾಗಿದ್ದು, ಪೀಠದ ಮೇಲೆ ಶ್ರೀಚಕ್ರವನ್ನು ರೇಖಿಸಲಾಗಿದೆ.[63]

ನವರಂಗದ ಇಕ್ಕೆಲದಲ್ಲಿ ಕಿರುದೇವಕೋಷ್ಟಗಳಿದ್ದು, ಬಳಿಯಲ್ಲೇ ಮಾತೃಕಾ ಶಿಲ್ಪವೊಂದಿದ್ದು, ಉಳಿದವು ಕಾಣೆಯಾಗಿವೆ. ಮುಖಮಂಟಪ ಹಾಗೂ ನವರಂಗದ ಬಾಗಿಲವಾಡಗಳ ಮೇಲೆ ಪಾಳೇಗಾರರ ಶಿಲ್ಪಗಳಿದ್ದು, ಈ ದೇವಾಲಯಕ್ಕಿರುವ ವಿಶಾಲವಾದ

ಪ್ರಾಕಾರವು ವಿಜಯನಗರ ಕಾಲದ ಸೇರ್ಪಡೆಯಾಗಿದ್ದು, ಎಲ್ಲರಿಂದಲೂ ಪೂಜಿಸಲ್ಪಡುತ್ತಿದ್ದು, ಪ್ರಾಕಾರವು 57ಕ್ಕೂ ಹೆಚ್ಚು ದೇವತೆಗಳ ಗಾರೆಶಿಲ್ಪಗಳನ್ನು ಹೊಂದಿದ್ದು, ಅವುಗಳನ್ನು ಹೆಸರಿಸಲಾಗಿದೆ. (ಚಿ. ಸಂ.–24) ಈ ದೇವಾಲಯವು 19ನೆಯ ಶತಮಾನದಲ್ಲಿ ತ್ರಿಪುರ ಸುಂದರಮ್ಮಣ್ಣಿಯವರ ಮೇಲ್ವಿಚಾರಣೆಯಲ್ಲಿ ದುರಸ್ತಿ ವಿಸ್ತರಣೆಗಳನ್ನು ಕಂಡಿದ್ದರಿಂದ ತ್ರಿಪುರಸುಂದರಮ್ಮಣ್ಣಿ ಗುಡಿ ಎಂಬ ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಈ ದೇವಾಲಯದ ಸಂಕೀರ್ಣದಲ್ಲಿರುವ ದೇವಕೋಷ್ಠಕಗಳ ತಳಭಾಗದಲ್ಲಿ ದೇವತೆಗಳ ಹೆಸರುಗಳನ್ನು ಕೆತ್ತಲಾಗಿದೆ. ಉದಾ: ಪಾರ್ವತಿ, ಲಕ್ಷ್ಮಿ, ಸರಸ್ವತಿ, ವಿಷ್ಣುವಿನ ದಶಾವತಾರ, ಸಪ್ತ ಮಾತೃಕೆಯರು, ಅಷ್ಟದಿಕ್ಪಾಲಕರು[64] ಈ ದೇವಾಲಯಕ್ಕೆ ಹೊಂದಿಕೊಂಡಂತಿರುವ ಕಲ್ಯಾಣಿಯಲ್ಲಿ ಪುಷ್ಯಮಾಸ (ಜನವರಿ)ದಲ್ಲಿ ಜರುಗುವ ಏಳು ದಿನಗಳ ವಾರ್ಷಿಕ ಜಾತ್ರೆ ಸಂದರ್ಭದಲ್ಲಿ ದೇವಿಗೆ ತೆಪ್ಪೋತ್ಸವವಾಗುತ್ತದೆ. ದೇವಿಯ ಜಾತ್ರೆ ಸಂದರ್ಭದಲ್ಲಿ ಸುಮಾರು 10,000 ಜನ ಸೇರುತ್ತಾರೆ. ಹಿಂದೆ ಮೂಗೂರನ್ನು ಆಳುತ್ತಿದ್ದ ಸ್ಥಳೀಯ ಪ್ರಭುಗಳ ಅರಮನೆ ಈ ದೇವಾಲಯದ ಬದಿಯಲ್ಲೇ ಇತ್ತೆಂದು ಹೇಳಲಾಗುತ್ತದೆ. ದೇವಾಲಯದ ಮುಂಭಾಗದಲ್ಲಿ ದೇವಿಯ ಜಾತ್ರೆಯಲ್ಲಿ ಬಳಸಲ್ಪಡುವ ಕಲಾತ್ಮಕವಾದ ರಥವನ್ನು ನೋಡಬಹುದಾಗಿದೆ.[65]

**ಬಿ.ಬೆಟ್ಟಹಳ್ಳಿ : ಒಡ್ಗಲ್ ರಂಗನಾಥಸ್ವಾಮಿ ಬೆಟ್ಟ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 12ಕಿ.ಮೀ ದೂರದಲ್ಲಿದೆ. ಇಲ್ಲಿನ ಒಡ್ಗಲ್ ರಂಗನಾಥ ಬೆಟ್ಟವು ಈ ಗ್ರಾಮದ ಪ್ರಸಿದ್ಧ ಸ್ಥಳವಾಗಿದೆ. ಬನ್ನೂರು–ನರಸೀಪುರ ರಸ್ತೆಯಲ್ಲಿ ಬನ್ನೂರಿನಿಂದ 3 ಕಿ.ಮೀ. ದೂರದ ಅತ್ತಹಳ್ಳಿಯಿಂದ 5ಕಿ.ಮೀ. ಒಳಕ್ಕಾದಂತೆ ಬಿ.ಬೆಟ್ಟಹಳ್ಳಿ ಗ್ರಾಮದ ಸರಹದ್ದಿನಲ್ಲಿ ಈ ಬೆಟ್ಟವಿದೆ. ಈ ದೇವಾಲಯವು ತ್ರಿಕೂಟಾಚಲವಾಗಿದ್ದು ಪೂರ್ವಾಭಿಮುಖವಾಗಿದೆ,

**ಗರ್ಭಗುಡಿ**:– ಗರ್ಭಗುಡಿಯು 4X3 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ 3 ಅಡಿ ಎತ್ತರದ ರಂಗನಾಥನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ.

**ಅಂತರಾಳ**:– ತೆರೆದ ಅಂತರಾಳದಲ್ಲಿ ಬಲಭಾಗದಲ್ಲಿ ಕಮಲ ಪೀಠದ ಮೇಲೆ ಕುಳಿತಿರುವ ಹನುಮಂತನ ಶಿಲ್ಪವಿದೆ. ಎಡಭಾಗದಲ್ಲಿ ಆಳ್ವಾರ್, ರಾಮಾನುಜಚಾರ್ಯರ ಹಾಗೂ ಅಂಕಾಳಮ್ಮನ ಶಿಲ್ಪಗಳಿವೆ.

**ನವರಂಗ**:– ನವರಂಗದಲ್ಲಿ 14 ಕಂಬಗಳಿದ್ದು, ವಿಶಾಲವಾಗಿದೆ. ನವರಂಗದ ಮುಂಭಾಗದಲ್ಲಿ ಎರಡು ಅಡಿ ಎತ್ತರದ ಬಲಿಪೀಠವಿದೆ. ಮುಂಭಾಗ 15 ಅಡಿ ಎತ್ತರದ ದೀಪಸ್ತಂಭವಿದೆ. ಬಲಭಾಗದ ಗರ್ಭಗುಡಿಯಲ್ಲಿ ಮಹಾಲಕ್ಷ್ಮಿ ಎಡಭಾಗದ ಗರ್ಭಗುಡಿಯಲ್ಲಿ ಸುಬ್ರಹ್ಮಣ್ಯಸ್ವಾಮಿ ಪ್ರತಿಮೆಗಳಿವೆ. ಇದು ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಹೊಂದಿದ್ದು, ಆ ಶವಸಂಸ್ಕಾರ ಪದ್ಧತಿಯು ಕಳೆದ ಶತಮಾನದ ಪೂರ್ವಾರ್ಧ ಭಾಗದಲ್ಲಿ ರೂಢಿಯಲ್ಲಿತ್ತು.[66]

**ಸೋಮನಾಥಪುರ**

**ಹೊಳೆಯತಡಿ ನರಸಿಂಹ ದೇವಾಲಯ (ಮೊಂಡುಸಾಲೆ)**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿ ಸೋಮನಾಥಪುರ ಗ್ರಾಮವಿದೆ. ಈ ದೇವಾಲಯವು ಹೊಳೆಯ ಸಮೀಪದಲ್ಲಿದ್ದು, ಬದಿಯಲ್ಲೆ ರಾಮಸ್ವಾಮಿ ನಾಲೆಯು ಹಾದು ಹೋಗಿದೆ. ಈ ದೇವಾಲಯವು ಕ್ರಿ.ಶ.1260ರ ವೇಳೆಗಾಗಲೇ ನಿರ್ಮಾಣವಾಗಿತ್ತೆಂದು ಹೇಳಲಾಗಿದೆ. ಈ ದೇವಾಲಯವು ಸನಕ್ಷತ್ರಾಕಾರದ ತಳಪಾಯ, ಬಳಪದ ಶಿಲೆ, ಸುಂದರ ಶಿಖರ ಮತ್ತು ಘಂಟೆಯಾಕಾರದ ಸ್ತಂಭಗಳ ಮೇಲೆ ನಿರ್ಮಿಸಲಾಗಿದೆ.[67] ಈ ಗುಡಿಯು ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದ್ದು, ಶಿಥಿಲಾವಸ್ಥೆಯಲ್ಲಿದೆ. (ಚಿ. ಸಂ.–25) **ಗರ್ಭಗುಡಿ:** ಗರ್ಭಗುಡಿಯು 10X10 ಸುತ್ತಳತೆಯನ್ನು ಹೊಂದಿದ್ದು ಒಂದು ಅಡಿ ಪಾಣಿ ಪೀಠದ ಮೇಲೆ ಯಾವುದೇ ಶಿಲ್ಪವು ಕಂಡುಬರುವುದಿಲ್ಲ. ಗರ್ಭಗುಡಿಯ ಪಾಣಿಪೀಠದ ಮೇಲ್ಭಾಗದಲ್ಲಿ ತೆರೆದ ಕಮಲಾಕೃತಿಯ ಎರಡು ಹಂತದ ಭುವನೇಶ್ವರಿ ಇದೆ. ಗರ್ಭಗೃಹದಲ್ಲಿ ಹಿಂದೆ ನರಸಿಂಹನ ಮೂರ್ತಿ ಇದ್ದಿತ್ತೆಂದು ತೋರುತ್ತದೆ. ಆದರೆ ಇಂದು ಬರಿದಾಗಿದೆ.

**ಸುಕನಾಸಿ**:– ಸುಕನಾಸಿಯು 10x10 ಸುತ್ತಳತೆಯನ್ನು ಹೊಂದಿದ್ದು ಒಂದು ಅಡಿ ಪಾಣಿ ಪೀಠದ ಮೇಲೆ ಯಾವುದೇ ಶಿಲ್ಪವು ಕಂಡುಬರುವುದಿಲ್ಲ. ಸುಕನಾಸಿಯ ಮಧ್ಯಭಾಗದಲ್ಲಿ ಎರಡು ಹಂತದ ಭುವನೇಶ್ವರಿ ಇದೆ. ಸುಕನಾಸಿಯ ಇಕ್ಕೆಲಗಳಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ**:-ನವರಂಗವು ನಾಲ್ಕು ಪ್ರಧಾನ ಕಂಬಗಳನ್ನು ಒಳಗೊಂಡಿದ್ದು ಒಂಭತ್ತು ಅಂಕಣದಿಂದ ಕೂಡಿದೆ. ಒಂಭತ್ತು ಅಂಕಣದಲ್ಲಿಯೂ ಒಂಭತ್ತು ತೆರೆದ ಕಮಲಾಕೃತಿಯುಳ್ಳ ಆಕರ್ಷಕವಾದ ಮೂರು ಹಂತದ ಶಿಲ್ಪಗಳು ಭುವನೇಶ್ವರಿಗಳು ಕಂಡುಬರುತ್ತವೆ. ನವರಂಗದ ಮಧ್ಯಭಾಗದಲ್ಲಿರುವ ನಾಲ್ಕು ಕಂಬಗಳು ಒಂದು ಅಡಿ ಪೀಠದ ಮೇಲೆ ಒಂದೂವರೆ ಅಡಿ ಚೌಕಾಕಾರದ ದಿಂಡಿನ ಮೇಲೆ ಮೂರು ಅಡಿ ಎತ್ತರದ ಆಕರ್ಷಕವಾದ ಕಂಬಗಳು ಕಂಡುಬರುತ್ತವೆ. (ಚಿ. ಸಂ.-26)

**ಮುಖಮಂಟಪ**:-ದೇವಾಲಯದ ಮಹಾದ್ವಾರದ ಇಕ್ಕೆಲಗಳಲ್ಲಿ ಎರಡೂವರೆ ಅಡಿ ಎತ್ತರದ ಆಸನವಿದೆ. ಈ ಆಸನದಲ್ಲಿ ಪ್ರಧಾನವಾದ ಟಂಟು ಕಂಬಗಳಲ್ಲಿ ಪ್ರಸ್ತುತ ಏಳು ಕಂಬಗಳು ಕಂಡುಬರುತ್ತವೆ. ಮುಖಮಂಟಪದ ಮಧ್ಯಭಾಗದಲ್ಲಿ ಮೂರು ಹಂತದ ಭುವನೇಶ್ವರಿಯು ಕಂಡುಬರುತ್ತವೆ. ದೇವಾಲಯದ ಸುತ್ತಲು 40 ದೇವಕೋಷ್ಠಕಗಳಿವೆ. ಪ್ರಧಾನ ಗರ್ಭಗುಡಿಯ ಶಿಖರವು ಐದು ಹಂತಗಳಿಂದ ಕೂಡಿದ್ದು, ಮೇಲ್ಭಾಗವು ಬಾಗಿದ ತೆರೆದ ಕಮಲಾಕೃತಿಯಂತೆ ಕಂಡುಬರುತ್ತದೆ. ಪ್ರಸ್ತುತ ಈ ದೇವಾಲಯವು ಶಿಥಿಲವಾಗಿದ್ದು, ಇದನ್ನು ದುರಸ್ತಿಮಾಡಿ ಸಂರಕ್ಷಿಸುವ ಮೂಲಕ ಪ್ರವಾಸಿಗರ ವೀಕ್ಷಣೆಗೆ ಅವಕಾಶ ಕಲ್ಪಿಸಲು ಸ್ಥಳೀಯರ ನಿರ್ಲಕ್ಷ್ಯದಿಂದ ಇದು ಅವನತಿಯ ಅಂಚಿನಲ್ಲಿದೆ ಎಂದು ಹೇಳಬಹುದಾಗಿದೆ.[68]

**ಪ್ರಸನ್ನ ಕೇಶವ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿ ಸೋಮನಾಥಪುರ ಗ್ರಾಮವಿದೆ. ಗ್ರಾಮದ ಮಧ್ಯಭಾಗದಲ್ಲಿ ಕೇಶವ ದೇವಾಲಯವಿದೆ. (ತಳನಕ್ಷೆ-4) (ಚಿ. ಸಂ.-27) ಇದು ಹೊಯ್ಸಳ ವಾಸ್ತುಶಿಲ್ಪ ಶೈಲಿಯ ಪೂರ್ಣ ವಿಕಾಶದ ಪರಾಕಾಷ್ಠೆಯನ್ನು ಬಿಂಬಿಸುವ ಸುಂದರ ಕಲಾಕೃತಿಯನ್ನು ಹೊಂದಿರುವ ದೇವಾಲಯವಾಗಿದೆ. ಈ ದೇವಾಲಯವು ಚಾಲುಕ್ಯ ಶೈಲಿಯ ವಾಸ್ತುಶಿಲ್ಪದ ಪ್ರತಾಪಕ್ಕೆ ಉದಾಹರಣೆಯಾಗಿದೆ.[69] ಈ ದೇವಾಲಯವನ್ನು ಹೊಯ್ಸಳರ ಅರಸನಾದ ಮೂರನೇ ನರಸಿಂಹ (ಕ್ರಿ.ಶ.1254ರಿಂದ1291)ನ ದಂಡನಾಯಕನಾಗಿದ್ದ ಸೋಮನಾಥನು ನಿರ್ಮಿಸಿದನು.[70] ಈತನಿಗೆ ಗಂಡಪೆಂಡಾರ, ಗೋಯಿಗೊವಳ ಎಂಬ ಬಿರುದುಗಳಿದ್ದವು. ಈ ದೇವಾಲಯ ನಕ್ಷತ್ರಾಕಾರದ ತಳಪದಿಯ

ಮೇಲೆ ನಿರ್ಮಿಸಿರುವ ತ್ರಿಕೂಟ ದೇವಾಲಯವಾಗಿದ್ದು,[71] ಪೂರ್ವಾಭಿಮುಖವಾಗಿರುವ ಸುಂದರವಾದ ವೈಷ್ಣವ ದೇವಾಲಯವಾಗಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭಗುಡಿಯಲ್ಲಿ ಎರಡು ಅಡಿ ಪಾಣಿಪೀಠದ ಮೇಲೆ 5 ಅಡಿ ಎತ್ತರದ ಪ್ರಧಾನ ದೇವತೆಯಾದ ಕೇಶವನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.-28) ಆದರೆ ಮೂಲ ಮೂರ್ತಿ ಇಲ್ಲವಾಗಿದೆ.[72] ಗರ್ಭಗುಡಿಯ ಸುತ್ತಲು 10 ಅರೆಗಂಬಗಳನ್ನು ಕಾಣಬಹುದಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಎರಡು ಹಂತಗಳಿಂದ ಕೂಡಿದ 9 ಅಂಕಣಗಳನ್ನು ಒಳಗೊಂಡಿರುವ ಭುವನೇಶ್ವರಿ ಇದೆ.

**ಸುಕನಾಸಿ:-** ಈ ಸುಕನಾಸಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯು 12 ಅರೆಗಂಬಗಳನ್ನು ಒಳಗೊಂಡಿದೆ. ಸುಕನಾಸಿಯ ಮಧ್ಯಭಾಗದಲ್ಲಿ ಎರಡು ಹಂತದ ಭುವನೇಶ್ವರಿ ಇದ್ದು, 9 ಅಂಕಣಗಳನ್ನು ಒಳಗೊಂಡಿದೆ. ಸುಕನಾಸಿಯಯ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಮತ್ತು ತೇಲಾಡುವ ಗಂಧರ್ವರ ಉಬ್ಬುಶಿಲ್ಪಗಳಿವೆ. ಸುಕನಾಸಿಯ ದ್ವಾರಗಳು ಸುಂದರವಾಗಿದ್ದು, ಮನಮೋಹಕವಾದ ಶಿಲನ್ಯಾಸದಿಂದ ಅಲಂಕರಿಸಲ್ಪಟ್ಟಿದೆ. ದ್ವಾರಶಾಖೆಗಳಲ್ಲಿ ಹಲವಾರು ಮೂರ್ತಿಶಿಲ್ಪಗಳಿವೆ (ಭದ್ರ, ಸ್ತ್ರೀ, ಪರಿಚಾರಕ ಮೂರ್ತಿ) ಸುಕನಾಸದ ದ್ವಾರದ ಮೇಲ್ಭಾಗದ ಕೆಲವು ದೇವತೆಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.

**ಉತ್ತರದ ಗರ್ಭಗುಡಿ:-** ಈ ಗರ್ಭಗುಡಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಎರಡು ಅಡಿ ಪಾಣಿಪೀಠದ ಮೇಲೆ ಐದು ಅಡಿ ಎತ್ತರದ ಜನಾರ್ಧನನ ಶಿಲ್ಪವನ್ನು ಇರಿಸಲಾಗಿದೆ. ಈ ಶಿಲ್ಪವು ಇಂದೂ ಸಹ ಸುಸ್ಥಿತಿಯಲ್ಲಿದೆ. ಜನಾರ್ಧನ ಶಿಲ್ಪವು ಪದ್ಮ, ಚಕ್ರ, ಶಂಖ, ಗಧಾವನ್ನು ಹಿಡಿದಿದ್ದು, ಗಾಂಭಿರ್ಯ ಮುಖವನ್ನು ಹೊಂದಿರುವಂತೆ ಕಂಡುಬರುತ್ತದೆ. ಗರ್ಭಗುಡಿಯ ಸುತ್ತಲು 10 ಅರೆಗಂಬಗಳನ್ನು ಕಾಣಬಹುದಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಎರಡು ಹಂತಗಳಿಂದ ಕೂಡಿದ 9 ಅಂಕಣಗಳನ್ನು ಒಳಗೊಂಡಿರುವ ಭುವನೇಶ್ವರಿ ಇದೆ.

**ಸುಕನಾಸಿ:-** ಈ ಸುಕನಾಸಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯು 12 ಅರೆಗಂಬಗಳನ್ನು ಒಳಗೊಂಡಿದೆ. ಸುಕನಾಸಿಯ ಮಧ್ಯಭಾಗದಲ್ಲಿ ಎರಡು ಹಂತದ ಭುವನೇಶ್ವರಿ ಇದ್ದು, 9 ಅಂಕಣಗಳನ್ನು ಒಳಗೊಂಡಿದೆ. ಸುಕನಾಸಿಯಯ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಮತ್ತು ತೇಲಾಡುವ ಗಂಧರ್ವರ ಉಬ್ಬುಶಿಲ್ಪಗಳಿವೆ. ಸುಕನಾಸಿಯ ದ್ವಾರಗಳು ಸುಂದರವಾಗಿದ್ದು, ಮನಮೋಹಕವಾದ ಶಿಲನ್ಯಾಸದಿಂದ ಅಲಂಕರಿಸಲ್ಪಟ್ಟಿದೆ. ದ್ವಾರಶಾಖೆಗಳಲ್ಲಿ ಹಲವಾರು ಮೂರ್ತಿಶಿಲ್ಪಗಳಿವೆ (ಭದ್ರ, ಸ್ತ್ರೀ, ಪರಿಚಾರಕ ಮೂರ್ತಿ) ಸುಕನಾಸದ ದ್ವಾರದ ಮೇಲ್ಭಾಗದ ಕೆಲವು ದೇವತೆಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.

**ದಕ್ಷಿಣದ ಗರ್ಭಗುಡಿ:-** ಈ ಗರ್ಭಗುಡಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಎರಡು ಅಡಿ ಪಾಣಿಪೀಠದ ಮೇಲೆ ಐದು ಅಡಿ ಎತ್ತರದ ವೇಣುಗೋಪಾಲನ ಶಿಲ್ಪವನ್ನು ಇರಿಸಲಾಗಿದೆ. (ಚಿ. ಸಂ.-29) ಈ ಶಿಲ್ಪವು ಸ್ಥಿರಭಂಗಿಯಲ್ಲಿರದೆ ಸರಳವಾಗಿ ಕಾಲನ್ನು ಅಡ್ಡ ಇರಿಸಿಕೊಂಡು ಮತ್ತು ತಲೆಯನ್ನು ಭಾಗಿಸಿ ವೀಣೆಯನ್ನು ನುಡಿಸುತ್ತಿರುವುದನ್ನು ಸುಂದರವಾಗಿ ಕೆತ್ತನೆ ಮಾಡಲಾಗಿದೆ. ಗರ್ಭಗುಡಿಯ ಸುತ್ತಲು 10 ಅರೆಗಂಬಗಳನ್ನು ಕಾಣಬಹುದಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ಎರಡು ಹಂತಗಳಿಂದ ಕೂಡಿದ 9 ಅಂಕಣಗಳನ್ನು ಒಳಗೊಂಡಿರುವ ಭುವನೇಶ್ವರಿ ಇದೆ.

**ಸುಕನಾಸಿ:-** ಈ ಸುಕನಾಸಿಯು 10X10 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯು 12 ಅರೆಗಂಬಗಳನ್ನು ಒಳಗೊಂಡಿದೆ. ಸುಕನಾಸಿಯ ಮಧ್ಯಭಾಗದಲ್ಲಿ ಎರಡು ಹಂತದ ಭುವನೇಶ್ವರಿ ಇದ್ದು, 9 ಅಂಕಣಗಳನ್ನು ಒಳಗೊಂಡಿದೆ. ಸುಕನಾಸಿಯಯ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಮತ್ತು ತೇಲಾಡುವ ಗಂಧರ್ವರ ಉಬ್ಬುಶಿಲ್ಪಗಳಿವೆ. ಸುಕನಾಸಿಯ ದ್ವಾರಗಳು ಸುಂದರವಾಗಿದ್ದು, ಮನಮೋಹಕವಾದ ಶಿಲನ್ಯಾಸದಿಂದ ಅಲಂಕರಿಸಲ್ಪಟ್ಟಿದೆ. ದ್ವಾರಶಾಖೆಗಳಲ್ಲಿ ಹಲವಾರು ಮೂರ್ತಿಶಿಲ್ಪಗಳಿವೆ (ಭದ್ರ, ಸ್ತ್ರೀ, ಪರಿಚಾರಕ ಮೂರ್ತಿ) ಸುಕನಾಸದ ದ್ವಾರದ ಮೇಲ್ಭಾಗದ ಕೆಲವು ದೇವತೆಗಳ ಉಬ್ಬುಶಿಲ್ಪಗಳನ್ನು ಕೊರೆಯಲಾಗಿದೆ.

**ನವರಂಗ:-** ನವರಂಗವು 15 ಅಂಕಣಗಳಿಂದ ಕೂಡಿದ್ದು 16 ಕಂಬಗಳನ್ನು ಒಳಗೊಂಡಿದೆ. ಈ ಕಂಬಗಳಲ್ಲಿ ಎಂಟು ಕಂಬಗಳು ಒಂದೂವರೆ ಅಡಿ ಪೀಠದ ಮೇಲೆ ಮೂರು ಅಡಿ ಎತ್ತರದ

ಕಲ್ಲಿನ ಮೇಲೆ ನಾಲ್ಕು ಅಡಿ ಎತ್ತರಕ್ಕೆ ಚರಕಿಯಂತ್ರದಿಂದ ಮಾಡಿದ ಕಂಬಗಳಿವೆ. (ಚಿ.ಸಂ.-30) ಇವುಗಳ ಅಡಿಭಾಗ ಚತುರ್ರಸ್ರದಲ್ಲಿದ್ದರೆ ಕಾಂಡವನ್ನು ಚಕ್ರ, ಗಾಲಿ, ದಂಡ, ಗಂಟೆ, ಮುಂತಾದ ಮುದ್ರಿಕೆಗಳಿಂದ ರೂಪಿಸಲಾಗಿದೆ. ಇನ್ನುಳಿದ ಎಂಟು ಯಾವುದೇ ಪಾಣಿಪೀಠದಿಂದ ನಿಲ್ಲಿಸಿಲ್ಲ. ನವರಂಗವು 22 ಅರೆಗಂಬಗಳನ್ನು ಒಳಗೊಂಡಿದೆ. ಗರ್ಭಗುಡಿಗೆ ಪ್ರವೇಶಿಸುವ ಮೊದಲು ಇಕ್ಕೆಲಗಳಲ್ಲಿ ಎರಡು ಗುಡಿಗಳನ್ನು ಕಾಣಬಹುದಾಗಿದೆ. ನವರಂಗದಲ್ಲಿ ಒಟ್ಟು 15 ಭುವನೇಶ್ವರಿಗಳಿದ್ದು, ಮೊಗ್ಗಿನಾಕೃತಿ ಅರಳಿದ ಕಮಲಾಕೃತಿ ಮುಂತಾದ ವಿಶೇಷವಾದ ಅಲಂಕರಣೆಗಳಿಂದ ಕೂಡಿದ್ದು, ಆಕರ್ಷಕವಾಗಿರುವುದರ ಜೊತೆಗೆ ಭಿನ್ನವಾದ ಭುವನೇಶ್ವರಿಯನ್ನು ಕಾಣಬಹುದಾಗಿದೆ. ನವರಂಗಕ್ಕೆ ಗಾಳಿ ಬೆಳಕನ್ನು ಒದಗಿಸಲು ಜಾಲಾಂಧ್ರಗಳನ್ನು ನಿರ್ಮಿಸಲಾಗಿದೆ.

**ಮುಖಮಂಟಪ:-** ದೇವಾಲಯದ ದ್ವಾರವನ್ನು ದಾಟಿದ ನಂತರ ಸಿಗುವುದೇ ಮುಖಮಂಟಪ. ಮುಖಮಂಟಪದ ಇಕ್ಕೆಲಗಳಲ್ಲಿ ನಿರ್ಮಿಸಿರುವ ಜೋಡಿ ಜಗುಲಿಯು ಗಮನ ಸೆಳೆಯುತ್ತವೆ. ಮುಖಮಂಟಪದ ಮಧ್ಯಭಾಗದಲ್ಲಿ ಬಿಡಿಸಿರುವಂತಹ ರೇಖಾರೂಹು (ಪ್ಲಂಬ್ ಲೈನ್ಸ್) ಭುವನೇಶ್ವರಿಯಲ್ಲಿ ಉಬ್ಬುಶಿಲ್ಪಗಳನ್ನಾಗಿ ಪರಿವರ್ತಿಸಲು ಬಿಡಿಸಲಾಗಿದೆ. ದೇವಾಲಯ ದ್ವಾರದ ಇಕ್ಕೆಲಗಳಲ್ಲಿ ಎರಡು ಮಂದರಗಳಿವೆ. ಹೊಯ್ಸಳ ದೇವಾಲಯಗಳಲ್ಲಿ ಉಪದೇವತೆಗಳನ್ನು ಈ ಚಿಕ್ಕ ಗುಡಿಗಳಲ್ಲಿ ಪ್ರತಿಷ್ಠಾಪಿಸಲಾಗುತ್ತಿತ್ತೆಂದು ಹೇಳಬಹುದು.

**ನಕ್ಷತ್ರಾಕಾರದ ತಲವಿನ್ಯಾಸದಲ್ಲಿ ಕೇಶವ ದೇವಾಲಯ**

ಮೂರು ಅಡಿ ಎತ್ತರದ ಜಗತಿಯ ಮೇಲೆ ಆರು ಹಂತಗಳಿಂದ ಕೂಡಿದ ನಕ್ಷತ್ರಾಕಾರದ ಜಗಲಿಯ ಮೇಲೆ ದೇವಾಲಯ ನಿರ್ಮಾಣವಾಗಿದೆ. ದೇವಾಲಯದ ನವರಂಗ ಮತ್ತು ಮುಖಮಂಟಪದ ಭಾಗ ಆಯಾತಕಾರವಾಗಿದ್ದು, ಮೂರು ಹಂತಗಳಿಂದ ವಿಸ್ತರಿಸಿದೆ. ಮೂರು ಗರ್ಭಗುಡಿಯನ್ನು ನಿರ್ವಹಿಸಿರುವ ಹಿಂಭಾಗ ನಕ್ಷತ್ರಾಕಾರವಾಗಿದೆ. ಎರಡನೆಯ ಹಂತದಲ್ಲಿ ಹಿನ್ಸರಿತ ಮುನ್ಸರಿತಗಳಿಂದ ಕೂಡಿದೆ. ಈ ಹೊರಗೋಡೆಯ ಅಲಂಕಾರಗಳು ಬೇರೆ ಬೇರೆಯಾಗಿವೆ. ಮುಖ್ಯದ್ವಾರದ ಬಲಬದಿಯಲ್ಲಿ ಪ್ರಾರಂಭಗೊಂಡು ಅಡಿಭಾಗದ ಪಟ್ಟಿಕೆಗಳು ಒಂದೇ ರೀತಿಯಲ್ಲಿವೆ.

**ಕೆಳಗೋಡೆ**:- ಏಳು ಅಂಗುಲದ ಆರು ಅಡ್ಡ ಪಟ್ಟಿಕೆಗಳಲ್ಲಿ ಉಬ್ಬುಶಿಲ್ಪಗಳನ್ನು ಕಾಣಬಹುದು. ಕೆಳಭಾಗದ ಪಟ್ಟಿಕೆಯಲ್ಲಿ ಗಜ ಸಾಲಿದ್ದು, ನಂತರ ಅಶ್ವ, ಲತಾಸುರುಳಿ, ಮಹಾಕಾವ್ಯದ ಕಥಾವಳಿ (ಕಥಾನಕ ಶಿಲ್ಪ), ಯಾಳಿ ಅಥವಾ ಮಕರ ಕೊನೆಯಲ್ಲಿ ಹಂಸಗಳ ಸಾಲುಗಳನ್ನು ಕಾಣಬಹುದಾಗಿದೆ.[73] (ಚಿ. ಸಂ.-31)

**ಆನೆಗಳು**:-ಮೊದಲ ಸಾಲಿನಲ್ಲಿ ಎದ್ದು ಕಾಣುವುದೇನೆಂದರೆ ಆನೆಗಳಲ್ಲಿರುವ ವೈವಿಧ್ಯ. ಸುಮಾರು 355 ಅಡಿ ಉದ್ದದ ಹೊರಗೋಡೆಯಲ್ಲಿ ಅಲಂಕರಿಸಿರುವ ಸುಮಾರು 577 ಆನೆಗಳಲ್ಲಿ 2 ಪಶುಗಳೂ ಒಂದೇ ರೀತಿಯಲ್ಲಿಲ್ಲ. ಅವುಗಳು ನೋಡುತ್ತಿರುವ ನೋಟ, ನಡೆಯಲ್ಲಿ ಭಿನ್ನತೆಯನ್ನು ಕಾಣುವುದರ ಜೊತೆಗೆ ಮೈ, ಕಾಲು, ಬಾಲ, ಸೊಂಡಿಲುಗಳ ರಚನೆಯಲ್ಲಿಯೂ ವೈವಿಧ್ಯತೆಯನ್ನು ಕಾಣಬಹುದು. ಆನೆಗಳು ತಮ್ಮ ಮುಂದೆ ಹಿಂದೆ ಇರುವ ಪಶುಗಳೊಡನೆ ಮತ್ತು ತಮ್ಮ ಬೆನ್ನನ್ನೇರಿ ಕುಳಿತವರೊಡನೆ ಹೋರಾಡುತ್ತಿರುವ ಮತ್ತು ಚೆಲ್ಲಾಟವಾಡುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.

**ಅಶ್ವಗಳು**:- ಅಶ್ವಗಳು ಗಜದಳದಷ್ಟೆ ಉದ್ದದ ಸ್ಥಳವನ್ನು, ಅದೇ ಸಂಖ್ಯೆಯಲ್ಲಿರುವ ಇದೇ ಬಗೆಯನ್ನು ಕಾಣಬಹುದಾಗಿದೆ. ಇವುಗಳು ಅಲಂಕಾರದಲ್ಲಿ ಗಜದಳವನ್ನೇ ಮೀರಿಸುವಂತಿವೆ. ಇವುಗಳು ಸುಂದರವಾದ ಘಂಟಾ-ಗೆಜ್ಜೆ ಮಾಲೆಯನ್ನು ಮತ್ತು ಗೋಡೆಯನ್ನು ಹೊಂದಿಕೊಂಡಿವೆ. ಅಶ್ವವನ್ನು ಸವಾರಿ ಮಾಡುತ್ತಿರುವವನ ಮೈ ಮೇಲಿನ ಉಡುಪು, ಪಾದರಕ್ಷೆ ಮತ್ತು ಲಗಾಮುಗಳನ್ನು ಸುಂದರವಾಗಿ ಕೆತ್ತನೆ ಮಾಡಲಾಗಿದೆ. ಅಶ್ವದ ಮೇಲೆ ಕುಳಿತ ಯೋಧನು ಖಡ್ಗ, ಡೋಲು, ಈಟಿ, ಬಾಣಗಳನ್ನು ಹಿಡಿದಿದ್ದು, ಹೋರಾಟದಿಂದ ಮುನ್ನುಗ್ಗುತ್ತಿರುವಂತೆ ಕಂಡುಬರುತ್ತವೆ. ಇಲ್ಲಿಯ ಮಕರ, ಜಲಪ್ರಾಣಿ, ಹಂಸ ಪಕ್ಷಿ, ಕೀರ್ತಿಮುಖ ಗಜ ಮತ್ತು ಅಶ್ವಗಳಷ್ಟು ಕೂತುಹಲಕಾರಿಯಾಗಿಲ್ಲವೆಂದು ಹೇಳಬಹುದಾಗಿದೆ.

**ಕಥಾನಕ ಶಿಲ್ಪಗಳು**:- ಇವುಗಳು ರಾಮಾಯಣ ಮತ್ತು ಮಹಾಭಾರತದ ದೃಶ್ಯಗಳನ್ನು ನಿರೂಪಿಸುವಂತಹುಗಳಾಗಿವೆ. ರಾಮಾಯಣದಲ್ಲಿ ದಶರಥನ ಪುತ್ರ ಸಿಂಹಾಸನವನ್ನು ತೊರೆದು ಸೀತೆ ಮತ್ತು ಲಕ್ಷ್ಮಣ ಜೊತೆ ಕಾಡಿಗೆ ತೆರಳಿದ ದೃಶ್ಯವನ್ನು ನಿರೂಪಿಸುತ್ತದೆ. ಜೊತೆಗೆ ಸುಗ್ರೀವ, ವಾನರರು ರಾವಣ ಮುಂತಾದವರನ್ನೊಳಗೊಂಡ ರಾಮಾಯಣದ ಘಟನೆಯನ್ನು ತಿಳಿಸುವಂತಹ ದೃಶ್ಯಗಳಿವೆ. ಹಾಗೂ ಹಿಂದೂ ದೇವತೆಯಾದ ಕೃಷ್ಣನ ಲೀಲೆಯನ್ನು

ಪ್ರದರ್ಶಿಸುವುದರ ಜೊತೆಗೆ ಕೌರವ ಮತ್ತು ಪಾಂಡವರ ವಿರಸವು ಕುರುಕ್ಷೇತ್ರಕ್ಕೆ ಕಾರಣವಾದ ಅಂಶಗಳನ್ನು ನಿರೂಪಿಸುತ್ತವೆ.

**ಹೊರಭಿತ್ತಿಯಲ್ಲಿರುವ ಶಿಲ್ಪಗಳು**

ವಿಷ್ಣುವಿನ ಹಲವಾರು ಮುಖಗಳನ್ನು ಹೊರಭಿತ್ತಿಯಲ್ಲಿ ಕಾಣಬಹುದಾಗಿದೆ. ಅವುಗಳನ್ನು 24 ಎಂದು ಗುರುತಿಸಲಾಗಿದೆ. ಈ 24 ಮೂರ್ತಿಗಳನ್ನು ನಾವು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಮಾತ್ರ ಕಾಣಬಹುದು. ಅವುಗಳೆಂದರೆ

ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ಸಂಕರ್ಪಣ, ವಾಸುದೇವ, ಅನಿರುದ್ಧ, ಪ್ರದ್ಯುಮ್ನ, ಪುರುಷೋತ್ತಮ, ಅದೋಕ್ಷಜ, ನರಸಿಂಹ, ಅಚ್ಯುತ, ಜನಾರ್ಧನ, ಉಪೇಂದ್ರ, ಹರಿ ಮತ್ತು ಕೃಷ್ಣ.[74]

ಈ ವಿಷ್ಣು ಮೂರ್ತಿಗಳು ವೈವಿಧ್ಯತೆಯಿಂದ ಕೂಡಿದ್ದು, ಈ ಎಲ್ಲಾ ಮೂರ್ತಿಗಳು ಕೇಶವ ದೇವಾಲಯದ ಹೊರಭಿತ್ತಿಯನ್ನು ಅಲಂಕರಿಸಿವೆ. (ಚಿ. ಸಂ.–32) ಈ ಮೂರ್ತಿಗಳು ಸಮಭಂಗಿಯಲ್ಲಿದ್ದು, 2,4 ಮತ್ತು 8 ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.ದ್ವಿಭುಜ ಮೂರ್ತಿಗಳು ಕಡಿಮೆ ಸಂಖ್ಯೆಯಲ್ಲಿದ್ದು, ಚತುರ್ಭುಜ ಮೂರ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

**ದ್ವಿಭುಜ ಮೂರ್ತಿಗಳು**:– ಇಲ್ಲಿ 2 ದ್ವಿಭುಜ ಮೂರ್ತಿಗಳಿದ್ದು, ಒಂದನ್ನು ವಿಠಲನ ಮೂರ್ತಿ ಇರಬಹುದೆಂದು ಊಹಿಸಬಹುದಾಗಿದೆ. ಏಕೆಂದರೆ ಅವನ ಒಂದು ಹಸ್ತ ಪೃಷ್ಠದ ಮೇಲಿದ್ದರೆ ಮತ್ತೊಂದು ಅಭಯ ಮುದ್ರೆಯಲ್ಲಿದೆ.

ಮತ್ತೊಂದು ದ್ವಿಭುಜ ಶಿಲ್ಪವು ಆಸೀನ ಭಂಗಿಯಲ್ಲಿದ್ದು, ಮೂರ್ತಿಯ ಹಸ್ತಗಳಲ್ಲಿ ಕಳಸ ಮತ್ತು ಅಪೂಪ(ಅಪ್ಪಂ)ಗಳಿವೆ. ಆದರೆ ಇದು ಯಾವ ಅವತಾರವೆಂದು ಹೇಳಲು ಸಾಧ್ಯವಾಗುತ್ತಿಲ್ಲ.

**ಚತುರ್ಭುಜ ವಿಷ್ಣು**:– ಈ ದೇವಾಲಯದಲ್ಲಿರುವ ಚತುರ್ಭುಜ ವಿಷ್ಣುವಿನ ಮೂರ್ತಿಯ ಶಿಲ್ಪಗಳು ಬೆರಗುಗೊಳಿಸುವಂತಹುಗಳಾಗಿವೆ. ಸುಮಾರು 44 ವಿಗ್ರಹಗಳನ್ನು ಕಾಣಬಹುದು. ಅವುಗಳಲ್ಲಿ ಸಾಕಷ್ಟು ಶಿಲ್ಪಗಳು ಹಾನಿಗೊಳಗಾಗಿವೆ. ಆದರೆ ಚತುರ್ಭುಜ ಮೂರ್ತಿಶಿಲ್ಪಗಳು ಸಾಮಾನ್ಯವಾಗಿ

ಶಂಖ, ಚಕ್ರ, ಗಧಾ ಮತ್ತು ಪದ್ಮಗಳನ್ನು ಹಿಡಿದಿರುವುದು ಕಡ್ಡಾಯವಾಗಿದೆ. ಉದಾಹರಣೆಗೆ:- ವಿಷ್ಣುವಿನ ಮೇಲಿನ ಬಲಹಸ್ತದಲ್ಲಿ ಶಂಖ, ಎಡಹಸ್ತದಲ್ಲಿ ಚಕ್ರ, ಕೆಳ ಎಡಹಸ್ತದಲ್ಲಿ ಗಧಾ ಮತ್ತು ಕೆಳಬಲ ಹಸ್ತದಲ್ಲಿ ಕಮಲವಿದೆ. ಆದುದ್ದರಿಂದ ಇದು ಕೇಶವನ ಶಿಲ್ಪವೆಂದು ಹೇಳುವುದರ ಜೊತೆಗೆ ವಿಷ್ಣುವಿನ ಹಲವಾರು ಮುಖಗಳನ್ನು ಕಾಣಬಹುದು.

ಷಡ್ಭುಜ ಶಿಲ್ಪ: ಕೇಶವ ದೇವಾಲಯದಲ್ಲಿ 6 ಭುಜಗಳನ್ನು 18 ವಿಷ್ಣುವಿನ ಮೂರ್ತಿಶಿಲ್ಪಗಳನ್ನು ಕಾಣಬಹುದು. ಈ ಎಲ್ಲಾ ಶಿಲ್ಪಗಳು ಸಮಭಂಗಿಯಲ್ಲಿವೆ. ಉದಾ: ಪರಶುರಾಮ, ವರುಣ, ವಾಸುದೇವ ಮುಂತಾದವರುಗಳು.

**ಅಷ್ಟಭುಜ ಮೂರ್ತಿಗಳು**:- ಕೇಶವ ದೇವಾಲಯದಲ್ಲಿರುವ ಅಷ್ಟಭುಜ ಶಿಲ್ಪಗಳಲ್ಲಿ ಒಂದು ವಿಷ್ಣುಮೂರ್ತಿಯಾಗಿದೆ. ಅಷ್ಟಭುಜ ವಿಷ್ಣುವು ನೃತ್ಯದಲ್ಲಿದ್ದು, ಮೂರು ಹಸ್ತಗಳು ಭಗ್ನವಾಗಿದ್ದು, ಮೂರು ಹಸ್ತಗಳಲ್ಲಿ ರುದ್ರಾಕ್ಷಿ ಮಾಲೆ, ಶಂಖ ಮತ್ತು ಕಳಸಗಳಿವೆ ಮತ್ತು ಉಳಿದೆರಡು ಭುಜಗಳಲ್ಲಿ ಒಂದು ಲಂಭ ಮತ್ತು ಮುದ್ರೆಯನ್ನು ಕಾಣಬಹುದಾಗಿದೆ. ಈ ಶಿಲ್ಪವು ದಕ್ಷಿಣ ಶಿಖರದ ಸುಕನಾಸಿಯಲ್ಲಿದೆ.

**ಯಕ್ಷ ಶಿಲ್ಪ**:- ಈ ಶಿಲ್ಪವು ಅರ್ಧಾಸನದಲ್ಲಿ ಕುಳಿತಿದ್ದು, ಬಲಗೈಯಲ್ಲಿ ಗಿಡವನ್ನು/ಹೂವನ್ನು ಹಿಡಿದಿದ್ದು ಎಡಗೈಯನ್ನು ಮಂಡಿಯ ಮೇಲೆ ಊರಿರುವಂತೆ ಕಂಡುಬರುತ್ತದೆ. ಈ ಶಿಲ್ಪವು ಅವನ ಮುಖದ ಗಾಂಭೀರ್ಯ ಮತ್ತು ತಲ್ಲೀನತೆಯನ್ನು ತೋರಿಸುತ್ತದೆ. ಶಿಲ್ಪದ ಮೇಲೆ ಹೂ ಬಳ್ಳಿಯ ಪ್ರಭಾವವನ್ನು ಕಾಣಬಹುದಾಗಿದೆ.

**ಪ್ರಹ್ಲಾದನ ಶಿಲ್ಪ**:- ಹಿರಣ್ಯಕಶಿಪು ಅಥವಾ ಅವನ ಗುರು ಮತ್ತು ಅವನ ರಾಕ್ಷಸ ಪಡೆಯ ಜೊತೆ ಪ್ರಹ್ಲಾದನನ್ನು ಶಿಕ್ಷೆಯನ್ನು ನೀಡುತ್ತಿರುವ ದೃಶ್ಯವಿದೆ. (ಚಿ. ಸಂ.-33) ಪ್ರಹ್ಲಾದನ ಮೇಲೆ ಹಲ್ಲೆ ಮಾಡಿ ಸಮುದ್ರ, ಬೆಂಕಿ ಮುಂತಾದವುಗಳಲ್ಲಿ ಅವನನ್ನು ನೂಕುವ, ಆನೆಯ ಕಾಲಡಿ ದೂಡುವ, ವಿಷಕೊಟ್ಟು ಸಾಯಿಸಲು ಪ್ರಯತ್ನಿಸುತ್ತಿರುವ ಮತ್ತು ಅವನ ಶಿರಛೇದನದಂತಹ ವಿಫಲ ಯತ್ನ ಮಾಡುವ ದೃಶ್ಯಗಳಿವೆ.

**ಲೈಂಗಿಕ ಶಿಲ್ಪಗಳು**:- ರತಿ ಮನ್ಮಥರ ಶಿಲ್ಪವು ಕೇಶವ ದೇವಾಲಯದ ಹೊರಗೋಡೆಯ ಮೇಲೆ ಮಸಣಿತಮ್ಮ ಎಂಬುವವನು ಕೊರೆಸಿರುವುದನ್ನು ಈ ಶಿಲ್ಪವು ಇಕ್ಷುಚಾಪ ಅಥವಾ ಕಬ್ಬಿನ ಬಿಲ್ಲು

ಮತ್ತು ಪಂಚಬಾಣ ಎಂಬುವುಗಳನ್ನು ಪ್ರಯೋಗಿಸಿ ಯಾರನ್ನು ಬೇಕಾದರೂ ಘಾಸಿಗೊಳಿಸಬಲ್ಲನೆಂಬುದು ತಿಳಿಸುತ್ತವೆ. ಮತ್ಸ್ಯಧ್ವಜವನ್ನು ಹಾರಿಸುತ್ತಿರುವ, ಕಾಮ ಕೆರಳಿಸುವ, ವಸಂತ ಲಕ್ಷ್ಮಿ, ಬಾಯಲ್ಲಿ ನೀರೂರಿಸುವ, ಭಕ್ಷ ಪಾತ್ರೆಯನ್ನು ಹಿಡಿದ ಪ್ರೀತಿಯ ಜೋತೆಯಲ್ಲಿ ಕಾಮವನ್ನು ಪ್ರಚೋದಿಸುತ್ತಿರುವ ರತಿ ಮನ್ಮಥನ ಬಳಿ ನಿಂತಿರುವ ದೃಶ್ಯವು ಅಮೋಘವಾದುದು. (ಚಿ. ಸಂ.–34)

**ಶಿಖರಗಳು**:– ಕೇಶವ ದೇವಾಲಯದ ಶಿಖರಗಳನ್ನು ಚಾಲುಕ್ಯರು ಮಾಡಿದ್ದ ಪ್ರಯೋಗದಿಂದ ಪ್ರೇರಣೆಗೊಂಡಿದೆ. ಇದು ವೇಸರ ಶೈಲಿಯ ಶಿಖರವೆಂದು ಹೇಳಬಹುದಾಗಿದೆ. ಕೇಶವ ದೇವಾಲಯದ ಶಿಖರಗಳು ಮಧ್ಯಮ ಎತ್ತರವಾಗಿದ್ದು, ನೋಡಲು ಒಂದೇ ಬಗೆಯಲ್ಲಿದ್ದರೂ ವಿಭಿನ್ನವಾಗಿವೆ. (ಚಿ. ಸಂ.–35) ಇದು ಸ್ಥಳವಿನ್ಯಾಸವನ್ನು ಅನುಸರಿಸಿ ಹಿಂದಕ್ಕೂ ಮುಂದಕ್ಕೂ ಚಾಚುತ್ತಾ ನಕ್ಷತ್ರಾಕಾರವನ್ನು ಪಡೆದುಕೊಂಡಿವೆ. ಇದು ಮೂರು ಹಂತಗಳಲ್ಲಿ ಏರುತ್ತಾ ಕ್ರಮೇಣ ತಮ್ಮ ಗಾತ್ರವನ್ನು ಸಂಕುಚಿತಗೊಳಿಸಿಕೊಂಡಿವೆ. ಶಿಖರವು ಬೆಳಕಿನ ಪರಿಣಾಮದಿಂದಾಗಿ ಎತ್ತರವು ಸ್ವಲ್ಪ ಕುಂಠಿತಗೊಂಡಂತೆ ಕಂಡುಬರುತ್ತದೆ. ಆಧಾರ ಮತ್ತು ಅರ್ಧಸ್ಥಂಭದ ಗೂಡುಗಳನ್ನು ಬಿಟ್ಟರೆ ಶಿಖರದ ಪ್ರತಿಯೊಂದು ಅಂಗುಲವು ಲತಾ, ಸುರುಳಿ, ಪಶುವದನ, ಜಚರ ಪ್ರಾಣಿ, ರತ್ನಖಚಿತ ಪಟ್ಟಿಕೆ, ಸಂಗೀತ ನೃತ್ಯಗಾರ ಮುಂತಾದವುಗಳಿಂದ ಅಲಂಕೃತಗೊಂಡಿದೆ.

**ಪ್ರಾಕಾರ**:– ಪ್ರಾಕಾರವು 155 (ಪೂರ್ವ–ಪಶ್ಚಿಮ), 119 (ಉತ್ತರ–ದಕ್ಷಿಣ) ಉದ್ದ ಅಗಲವಿದೆ.[75] (ಚಿ. ಸಂ.–36) ಪ್ರಾಕಾರದಲ್ಲಿ 43 ಹೊಯ್ಸಳರ ಕಾಲದ ಕಂಬಗಳಿವೆ. 19 ವಿಜಯನಗರದ ಅರಸರ ಕಾಲದ ಕಂಬಗಳು ಕಂಡುಬರುತ್ತವೆ. ಪ್ರಾಕಾರದ ಸುತ್ತಲು 52 ಕಿರುಗುಡಿಗಳು ಕಂಡುಬರುತ್ತವೆ. ಈ 52 ಕಿರುಗುಡಿಗಳಲ್ಲೆಲ್ಲಾ 8X8 ಸುತ್ತಳತೆಯನ್ನು ಹೊಂದಿದ್ದು, ಈ ಒಂದೊಂದು ಕಿರುಗುಡಿಗಳಲ್ಲಿಯೂ ಯಾವುದೇ ಲಿಂಗಗಳು ಕಂಡುಬರುವುದಿಲ್ಲ. ಈ ಕಿರುಗುಡಿಗಳಲ್ಲಿ ನಾಲ್ಕು ಅರೆಗಂಬಗಳಿದ್ದು ಮಧ್ಯಭಾಗದಲ್ಲಿ ಯಾವುದೇ ಅಲಂಕರಣೆ ಇಲ್ಲದ ಭುವನೇಶ್ವರಿ ಇದೆ. ಹಾಗೂ ಕಿರುಗುಡಿಯ ಬಾಗಿಲುವಾಡಗಳಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಪ್ರಾಕಾರದ ಸುತ್ತಲು ಎರಡು ಭುವನೇಶ್ವರಿಗಳಿದ್ದು, ವಿಭಿನ್ನತೆಯಿಂದ ಕೂಡಿವೆ. ಹಾಗೂ ಪ್ರಾಕಾರದಲ್ಲಿ ಹಲವು ಬಗೆಯ ಬಿಡಿಶಿಲ್ಪಗಳು ಕಂಡುಬರುತ್ತವೆ.

**ದೇವಾಲಯದ ಮುಖ್ಯದ್ವಾರ:-** ದೇವಾಲಯದ ಮುಖ್ಯದ್ವಾರವು (ಚಿ. ಸಂ.-37) ನಾಲ್ಕು ಮೆಟ್ಟಿಲುಗಳನ್ನೇರಿ ಮಹಾದ್ವಾರಗಳನ್ನು ಪ್ರವೇಶಿಸಿದಾಗ ಚೌಕಾಕಾರದ ಮಹಾದ್ವಾರದ ಹಜಾರದಲ್ಲಿ ಒಂದು ವೇದಿಕೆ, ಘಂಟೆಯಾಕಾರದ ಸ್ಥಂಭಗಳು ಮತ್ತು ಬೃಹತ್ ಪ್ರಮಾಣದ ಶಿಲಾಫಲಕಗಳು ಗಮನ ಸೆಳೆಯುತ್ತವೆ. ಈ ಶಿಲಾಫಲಕದ ಮೇಲೆ ಕೆತ್ತಿರುವ 1276-1320ರ ಶಾಸನವು ಸುಮಾರು ಮೂರು ಮೀಟರ್ ಎತ್ತರ ಮತ್ತು 1.28 ಮೀಟರ್ ಅಗಲವಿದ್ದು ಒಟ್ಟು 212 ಶಾಸನಗಳ ಸಾಲುಗಳನ್ನು ಕಾಣುವುದರ ಜೊತೆಗೆ ಸುಂದರವಾದ ಉಬ್ಬುಶಿಲ್ಪಗಳನ್ನು ಕಾಣಬಹುದು. ಶಾಸನದ ಮೊದಲ 17 ಸಾಲುಗಳು ಸಂಸ್ಕೃತ ಭಾಷೆಯಲ್ಲಿದ್ದು, ಉಳಿದವು ಕನ್ನಡ ಭಾಷೆಯಲ್ಲಿವೆ. ಮಹಾದ್ವಾರವನ್ನು ಪ್ರವೇಶಿಸಿದ ನಂತರ ತೆರೆದ ಮುಖಮಂಟಪವಿದ್ದು 24 ಕಂಬಗಳನ್ನು ಒಳಗೊಂಡಿದೆ. ಇದು ಎರಡು ಭುವನೇಶ್ವರಿಗಳನ್ನು ಹೊಂದಿದ್ದು, ಒಂದು ಭುವನೇಶ್ವರಿಯು 9 ಅಂಕಣಗಳಿಂದ ಕೂಡಿದೆ. ಎರಡನೇ ಭುವನೇಶ್ವರಿಯು ಎರಡು ಹಂತಗಳಿಂದ ಕೂಡಿದ ಕಮಲಾಕೃತಿಯ ಭುವನೇಶ್ವರಿಯನ್ನು ಕಾಣಬಹುದು. ದೇವಾಲಯದ ಸುತ್ತಲು 20 ಅಡಿ ಎತ್ತರದ ಪ್ರಾಕಾರದ ಗೋಡೆ ಇದೆ.

ದೇವಾಲಯದ ಮುಂಭಾಗದಲ್ಲಿ 5 ಅಡಿ ಅಧಿಷ್ಠಾನದಲ್ಲಿ 40 ಅಡಿ ಎತ್ತರವಿರುವ ಕಂಬವನ್ನು ಕಾಣಬಹುದಾಗಿದೆ. ದೇವಾಲಯದ ಹೊರಾಂಗಣವು ವಿಶಾಲವಾಗಿದ್ದು, ಯೋಗನಾರಾಯಣ ಮೂರ್ತಿ ಹಾಗೂ ಮತ್ತೊಂದು ಶಿಲ್ಪವನ್ನು ಕಾಣಬಹುದಾಗಿದೆ.ಆಂಗ್ಲ ಅಧಿಕಾರಿಗಳಿಂದಾಗಿ, 19ನೆಯ ಶತಮಾನದಲ್ಲಿ ದುರಸ್ತಿಯನ್ನು ಕಂಡಿದ್ದ ಇದನ್ನು ಸಂರಕ್ಷಿಸಲು ಕ್ರಿ.ಶ. 1924ರಿಂದ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಗುಡಿಯ ಒಳಭಾಗಕ್ಕೆ ವಿದ್ಯುತ್ ಕಲ್ಪಿಸುವ ಮೂಲಕ, ಅಲ್ಲಿನ ಸೌಂದರ್ಯವನ್ನು ಅಸ್ವಾದಿಸಲು ಪ್ರವಾಸಿಗರಿಗೆ ಅವಕಾಶ ಕಲ್ಪಿಸಲಾಗಿದೆ. ಇಲ್ಲಿರುವ ಸುಪ್ರಸಿದ್ಧ ಸುಂದರ ಕಲಾತ್ಮಕ ಹೊಯ್ಸಳ ವಾಸ್ತುಶೈಲಿಯ ದೇವಾಲಯದಿಂದಾಗಿ ದೇಶ ವಿದೇಶಗಳ ಪ್ರವಾಸಿಗರನ್ನು ಆಕರ್ಷಿಸುತ್ತದೆ.[76] ಗ್ರಾಮದ ಮಧ್ಯೆ ಇರುವ ಸೋಮನಾಥ ದೇವಾಲಯವು ಕೇಂದ್ರ ಪುರಾತತ್ವ ಇಲಾಖೆಯಿಂದ ಸಂರಕ್ಷಿಸಲ್ಪಟ್ಟಿದೆ. ಈ ದೇವಾಲಯವು 215 ಅಡಿ ಉದ್ದ 117 ಅಡಿ ಅಗಲವು ಆದ ಒಂದು ಅಂಗಳದ ಮಧ್ಯ ಭಾಗದಲ್ಲಿ ಕಟ್ಟಲ್ಪಟ್ಟಿದೆ.[77]

**ಹೆಮ್ಮಿಗೆ**

ತಿರುಮಕೂಡಲು ನರಸೀಪುರದಿಂದ 12 ಕಿ.ಮೀ. ಪೂರ್ವಕ್ಕೆ ಕಾವೇರಿ ನದಿಯ ಬಲದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಸ್ಥಳ. ಇದು ಹಿಂದೆ ಮಧ್ಯ ಹಳೆಶಿಲಾಯುಗ ಹಾಗೂ ನೂತನ ಶಿಲಾಯುಗ ಸಂಸ್ಕೃತಿಯ ಜನರ ವಸತಿ ನೆಲೆಯಾಗಿತ್ತು.

**ವರದರಾಜ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿರುವ ಏಕಕೂಟ ವೈಷ್ಣವ ದೇವಾಲಯವಾಗಿದೆ. ಈ ದೇವಾಲಯ ಪಶ್ಚಿಮಾಭಿಮುಖವಾಗಿದೆ.

**ಗರ್ಭಗುಡಿ**:- ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಗರುಡ ಪೀಠದ ಮೇಲೆ ಮೂರು ಅಡಿ ಎತ್ತರದ ವರದರಾಜಸ್ವಾಮಿಯ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಮುಂದೆ ಸುಕನಾಶಿಯಿದ್ದು, ಸುಕನಾಶಿಯ ಬಲಭಾಗದಲ್ಲಿ ರಾಮಾನುಜಾಚಾರ್ಯರ ವಿಗ್ರಹವನ್ನು ಇರಿಸಲಾಗಿದೆ. ವರದರಾಜಗುಡಿಯ ಉಲ್ಲೇಖ ಹೆಮ್ಮಿಗೆಯ 1530ರ ಶಾಸನವೊಂದರಲ್ಲಿ ಕಂಡುಬರುತ್ತಿದ್ದು, ವೀರದೇವಣ್ಣ ಒಡೆಯನು ಅಲ್ಲಾಳನಾಥನಿಗೆ ದಾನಬಿಟ್ಟ ವಿಷಯವಿದೆ.[78]

**ನವರಂಗ**:- ದೇವಾಲಯದ ನವರಂಗದಲ್ಲಿ ನಾಲ್ಕು ಪ್ರಧಾನ ಕಂಭಗಳಿದ್ದು, 9 ಅಂಕಣಗಳಿಂದ ಕೂಡಿದೆ. ನವರಂಗದ ಮಧ್ಯಭಾಗದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯಿದೆ. ನವರಂಗದ ಎರಡು ಕಂಬಗಳ ಅಧಿಷ್ಠಾನದಲ್ಲಿ ಆಂಜನೇಯ, ನರಸಿಂಹರ ವಿಗ್ರಹಗಳನ್ನು ಕೆತ್ತಿರುವುದು ಒಂದು ವಿಶೇಷ.[79]

ದೇವಾಲಯದ ಬಲಭಾಗದಲ್ಲಿ ಲಕ್ಷ್ಮಿ ಗುಡಿಯಿದೆ. ಗರ್ಭಗುಡಿಯಲ್ಲಿರುವ ಲಕ್ಷ್ಮಿಯು ಚತುರ್ಭುಜವನ್ನು ಹೊಂದಿದ್ದು, ಹಿಂಬದಿಯ ಕೈಗಳಲ್ಲಿ ಗಧೆ ಹಾಗೂ ಪದ್ಮವನ್ನು ಹಿಡಿದಿದ್ದಾಳೆ. ಮುಂಭಾಗದ ಕೈಗಳಲ್ಲಿ ಅಭಯಹಸ್ತ ಹಿಡಿದಿರುವುದು ಕಂಡುಬರುತ್ತದೆ. ಮುಖಮಂಟಪದಲ್ಲಿ 4 ಅರೆಗಂಬಗಳಿದ್ದು, ಮೇಲ್ಭಾಗದಲ್ಲಿ ಭುವನೇಶ್ವರಿಯಿದೆ. ಇದು ಎರಡು ಹಂತಗಳಿಂದ ಕೂಡಿದ್ದು, ತೆರೆದ ಕಮಲಾಕೃತಿಯ ರಚನೆಯನ್ನು ಹೊಂದಿದೆ. ನವರಂಗದ ಲಲಾಟ ಬಿಂಬದಲ್ಲಿ

ಗಜಲಕ್ಷ್ಮಿಯನ್ನು ಕೆತ್ತನೆ ಮಾಡಲಾಗಿದೆ. ದ್ವಾರದ ಎರಡೂ ಕಡೆಗಳಲ್ಲಿಯೂ ವೈಷ್ಣವ ದ್ವಾರಪಾಲಕರನ್ನು (ಜಯ-ವಿಜಯ) ಕೆತ್ತನೆ ಮಾಡಲಾಗಿದೆ.

**ಮೂಗೂರು : ನಾರಾಯಣಸ್ವಾಮಿ ಗುಡಿ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿ ಮೂಗೂರು ಗ್ರಾಮವಿದೆ. ನಾರಾಯಣಸ್ವಾಮಿ ಗುಡಿಯು ಮೂಗೂರಿನ ಗ್ರಾಮದ ಮಧ್ಯಭಾಗದಲ್ಲಿದ್ದು, ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿರುವ ಮುಮ್ಮಡಿ ನರಸಿಂಹನ ಕಾಲದ್ದಾಗಿದೆ. ಅಲ್ಲೇ ಇರುವ ಕ್ರಿ.ಶ. 1279ರ ಶಾಸನದಿಂದ,[80] ಮೂಗೂರ ಗೌಡ ಪ್ರಜೆಗಳು, ವಿಷ್ಣುಗೃಹದ ಅಳಗ್ಯೆ ಪೆರುಮಾಳ್ ದೇವರಿಗೆ ದಾನ ನೀಡಿದ ಅಂಶ ಗೊತ್ತಾದರೆ, ಇನ್ನೊಂದು ಶಾಸನ, ದೇವರ ನಂದಾದಿಪಕ್ಕೆಂದು ಕೆಲವು ಗದ್ಯಾಣವನ್ನು ಭಕ್ತನೊಬ್ಬ ಸಲ್ಲಿಸಿದ ಅಂಶವನ್ನು ನಿವೇದಿಸುತ್ತಿದ್ದು ಗುಡಿಯಲ್ಲಿರುವ ನಾರಾಯಣ ಶಿಲ್ಪವು ಸುಂದರವಾಗಿದೆ. ಮೂಗೂರ ಹಳ್ಳದ ಬಳಿ ಬಿದ್ದಿರುವ ಕ್ರಿ.ಶ. 1367ರ ಶಾಸನ[81] ವೀರಬುಕ್ಕಣ್ಣನ ಕಾಲದಲ್ಲಿ ಮಹಾಪ್ರಧಾನ ಬಸವ ದಂಡನಾಯ್ಕನ ಅಧಿಕಾರಿ ರಾಘವದೇವರಸನು ದಾನ ನೀಡಿದ ಅಂಶವನ್ನು ದಾಖಲಿಸಿದೆ. ಈ ದೇವಾಲಯದ ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ವಿಮಾನವಿದೆ.[82] ಈ ವಿಮಾನ ಮೈಸೂರು ಅರಸರ ಕಾಲದ ವಾಸ್ತು ರಚನೆ.[83]

**ತಲಕಾಡು : ಕೀರ್ತಿನಾರಾಯಣ ದೇವಾಲಯ (ಜೀರ್ಣೋದ್ಧಾರಗೊಳ್ಳುತ್ತಿದೆ)**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 15 ಕಿ.ಮೀ. ದೂರದಲ್ಲಿ ತಲಕಾಡು ಗ್ರಾಮವಿದೆ. ಹೊಯ್ಸಳ ವಿಷ್ಣುವರ್ಧನನು, ದಂಡನಾಯಕ ಗಂಗರಾಜನೊಂದಿಗೆ ಚೋಳರ ಮೇಲೆ ಕ್ರಿ.ಶ. 1116ರಲ್ಲಿ ಪಡೆದ ಗೆಲುವಿನ ಸ್ಮಾರಕವಾಗಿ ಕ್ರಿ.ಶ. 1117ರಲ್ಲಿ ನಿರ್ಮಾಣಗೊಂಡ ಕೀರ್ತಿನಾರಾಯಣ ದೇವಾಲಯವು ಪ್ರಸ್ತುತದಲ್ಲಿ ಶಿಥಿಲಗೊಂಡಿದ್ದು, ಜೀರ್ಣೋದ್ದಾರಗೊಳ್ಳುತ್ತಿದೆ.[84](ಚಿ. ಸಂ.-38) ಈ ದೇವಾಲಯವು ನಕ್ಷತ್ರಾಕಾರದ ತಳವಿನ್ಯಾಸದ ಗರ್ಭಗೃಹ, ತೆರೆದ ಅಂತರಾಳ ಹಾಗೂ ಮೂರು ದಿಕ್ಕುಗಳಲ್ಲೂ ಪ್ರವೇಶದ್ವಾರವಿರುವ ನವರಂಗವನ್ನು ಹೊಂದಿದೆ. (ತಳನಕ್ಷೆ-5) 2 ಮೀ. ಎತ್ತರದ ಶಂಖ, ಚಕ್ರ, ಗಧಾ-ಪದ್ಮದಾರಿ ನಾರಾಯಣನ ಆಕರ್ಷಕ ಶಿಲ್ಪವಿದೆ. ಅಂತರಾಳದ ಬಾಗಿಲುವಾಡವು ಕ್ರಿ.ಶ. 17ನೆಯ ಶತಮಾನದ ಸೇರ್ಪಡೆಯಾಗಿದ್ದು, ಲಲಾಟದಲ್ಲಿ ಅನಂತಶಯನನ್ನು ಕೆತ್ತಲಾಗಿದೆ.

ಚರಕಯಂತ್ರ ನಿರ್ಮಿತ ಸುಂದರ ಕಂಬಗಳು ಹೊತ್ತು ನಿಂತಿರುವ ವಿಶಾಲವಾದ ನವರಂಗವು, ಹೊ-ಬಳ್ಳಿ, ಕಮಲ ಅಲಂಕೃತ ಛತ್ತನ್ನು ಹೊಂದಿದ್ದು, ಆಕರ್ಷಕವಾಗಿದೆ. ಈ ದೇವಾಲಯದ ಹೊರಭಿತ್ತಿಯನ್ನು ಅಲಂಕಾರಿಕ ಅರೆಗೋಪುರ, ಅರೆಗಂಬ, ಅರೆಮಂಟಪಗಳಿಂದ ಅಲಂಕರಿಸಲಾಗಿದೆ.[85] ಆದರೆ ಇಂದು ಈ ದೇವಾಲಯವು ಕಾಣದಾಗಿದೆ.

**ಯಡದೊರೆ ಜನಾರ್ಧನ ದೇವಾಲಯ**

ಯಡದೊರೆ ಗ್ರಾಮವು ತಿರುಮಕೂಡಲು ನರಸೀಪುರದಿಂದ ಸುಮಾರು 4 ಕಿ.ಮೀ ದೂರದಲ್ಲಿದೆ. ಈ ಗ್ರಾಮದಲ್ಲಿರುವ ಜನಾರ್ಧನ ದೇವಾಲಯವು ಊರ ಮಧ್ಯಭಾಗದಲ್ಲಿದ್ದು ಅತೀ ಪ್ರಾಚೀನ ದೇವಾಲಯವಾಗಿದೆ.

ಈ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಜನಾರ್ಧನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿಯಲ್ಲಿ ಯಾವುದೇ ಶಿಲ್ಪಗಳಿಲ್ಲ. ಇದೊಂದು ಚಿಕ್ಕ ದೇವಾಲಯವಾಗಿದ್ದು, ಇತ್ತೀಚಿನ ದಿನಗಳಲ್ಲಿ ಈ ದೇವಾಲಯಕ್ಕೆ ಪೂಜೆ-ಪುರಸ್ಕಾರಗಳು ಏನೂ ನಡೆಯುತ್ತಿಲ್ಲ. ನೆಪಮಾತ್ರಕ್ಕೆ ದೇವಾಲಯ ಎಂಬಂತಾಗಿದೆ.

## ವಿಜಯನಗರಕಾಲದ ವೈಷ್ಣವ ದೇವಾಲಯಗಳು

**ತಿರುಮಕೂಡಲು ನರಸೀಪುರ ; ಗುಂಜಾನರಸಿಂಹಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರ ಎಂಬ ಹೆಸರು ಬಂದಿರುವುದು ಇಲ್ಲಿಯ ಗುಂಜಾ ನರಸಿಂಹಸ್ವಾಮಿ ದೇವಾಲಯದಿಂದ ಎಂದರೆ ತಪ್ಪಾಗಲಾರದು. ಊರಿನ ಉತ್ತರಕ್ಕೆ ಕಪಿಲ ನದಿಯ ದಂಡೆಯಲ್ಲಿ ಉತ್ತರಾಭಿಮುಖವಾಗಿರುವ ಈ ದೇವಾಲಯವು ಎರಡು ಅಡಿ ಜಗತಿಯ ಮೇಲೆ ನಿರ್ಮಾಣವಾಗಿರುವ ದ್ರಾವಿಡ ಶೈಲಿಯ ದೇವಾಲಯವಾಗಿದ್ದು, ಇದೊಂದು ದೊಡ್ಡ ದೇವಾಲಯವೆಂದು ಹೇಳಬಹುದಾಗಿದೆ.[86] ಗುಂಜನರಸಿಂಹ ದೇವಾಲಯದ ಗೋಪುರ ಮತ್ತು ಮುಖಮಂಟಪದ ನಾಲ್ಕು ಕಂಬಗಳು ದ್ರಾವಿಡ ಶೈಲಿಯ ರಚನೆ ಹೊಂದಿವೆ.[87] ಈ ದೇವಾಲಯ ವಿಜಯನಗರ ಅರಸರ ಕಾಲದ ರಚನೆ ಮತ್ತು ಮೈಸೂರು ಅರಸರ ಕಾಲದ ನಿರ್ಮಾಣದಾಗಿದೆ. ಇವರಲ್ಲದೆ ಮೂಗೂರು ಪ್ರಭುಗಳೂ ಈ ದೇವಾಲಯದ ಅಭಿವೃದ್ಧಿಗೆ ಶ್ರಮಿಸಿದ್ದಾರೆ.[88]

ಇಲ್ಲಿ ದೊರೆತಿರುವ ಪ್ರಾಚೀನ ಕಾಲದ ತಾಮ್ರಶಾಸನ ವಿಜಯನಗರದ ಶ್ರೇಷ್ಠ ದೊರೆ ಶ್ರೀಕೃಷ್ಣದೇವರಾಯನ ಕಾಲದ್ದಾಗಿದೆ.[೮೯] ಹಾಗೂ ಈ ದೇವಾಲಯಕ್ಕೆ ನೀಡಿದ ದತ್ತಿಯ ವಿಚಾರವನ್ನು ತಿಳಿಸುತ್ತದೆ. ಮೂಗೂರು ಅರಸರು (ಪ್ರಭುಗಳು) ಹಾಗೂ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರವರು ಈ ದೇವಾಲಯವನ್ನು ಮತ್ತಷ್ಟು ವಿಸ್ತರಿಸಿದರು ಎಂದು ಹೇಳಬಹುದಾಗಿದೆ.[೯೦] ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಈ ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ, ಪ್ರಾಕಾರ, ಮಹಾದ್ವಾರ ಗೋಪುರಗಳಿಂದ ಕೂಡಿದ ವಿಶಾಲವಾದ ದೇವಾಲಯವಾಗಿದೆ. ಮೂಗೂರು ಅರಸರು ಈ ದೇವಾಲಯದ ಕೆಲವು ಭಾಗಗಳನ್ನು ಕಟ್ಟಿಸಿದರು. ಗುಂಜಾನರಸಿಂಹಸ್ವಾಮಿ ದೇವಾಲಯವು ತಿರುಮಕೂಡಲಿಗೆ ಕೆಲವೇ ಗಜಗಳ ಅಂತರದಲ್ಲಿದ್ದರೂ ಕಾವೇರಿ ಕಪಿಲ ಮತ್ತು ಕಣ್ಣಿಗೆ ಕಾಣದ ಸ್ಫಟಿಕ ಸರೋವರದ ಸಂಗಮದಲ್ಲಿದೆ. ಉತ್ತರಾಭಿಮುಖವಾಗಿರುವ ಈ ದೇವಾಲಯದ ಮುಂಭಾಗಕ್ಕೆ ಅಂದರೆ ದಡದಲ್ಲಿ ಪ್ರಹ್ಲಾದ ಮಂಟಪವಿದ್ದು, ಈ ಮಂಟಪವನ್ನು ಕ್ರಿ.ಶ.೧೮೫೫ರಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಈ ಪ್ರಹ್ಲಾದ ಮಂಟಪದ ಸಮಿಪದಲ್ಲೇ ಅಂದರೆ ದೇವಾಲಯದ ಎಡಭಾಗದಲ್ಲಿ ಆದಿಜನಾರ್ಧನಸ್ವಾಮಿ ದೇವಾಲಯವಿದೆ.

**ಗರ್ಭಗುಡಿ**:-ಗರ್ಭಗೃಹವು 10X10 ಅಡಿ ಚ.ಮೀ. ಸುತ್ತಳತೆಯನ್ನು ಹೊಂದಿದ್ದು, ಗರ್ಭಗೃಹದಲ್ಲಿ ಮೂಲ ರೂಪವಾದ ಗುಂಜಾನರಸಿಂಹಸ್ವಾಮಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಅಲ್ಲದೆ ಉತ್ಸವಮೂರ್ತಿ ಶಿಲ್ಪಗಳೂ ಇವೆ.

**ಸುಕನಾಸಿ:-** ಸುಕನಾಸಿಯು 12X12 ಅಡಿ ಚ.ಸುತ್ತಳತೆಯನ್ನು ಹೊಂದಿದೆ. ಆದರೆ ಇಲ್ಲಿ ಯಾವುದೇ ರೀತಿಯ ಶಿಲ್ಪ ಕಂಡುಬರುವುದಿಲ್ಲ.

**ನವರಂಗ**:- ನವರಂಗದಲ್ಲಿ ಪೂರ್ವ-ಪಶ್ಚಿಮಾಭಿಮುಖವಾಗಿ ೮೫ ಕಿ.ಮೀ. ನಿಂದ ೬೦ ಸೆಂ.ಮೀ.ಗಳಷ್ಟು ಉದ್ದವಿದ್ದು, ಉತ್ತರ-ದಕ್ಷಿಣಾಭಿಮುಖವಾಗಿ ೫೫ ಸೆಂ.ಮೀ.-೬೦ ಸೆಂ.ಮೀ. ಉದ್ದ-ಅಗಲವನ್ನು ಹೊಂದಿದೆ. ಸುಕನಾಸಿಯ ಗೋಡೆಗೆ ಸೇರಿದಂತೆ ನವರಂಗದ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಈ ಶಿಲ್ಪಗಳು ಅತ್ಯಂತ ಆಕರ್ಷಕವಾಗಿ ಕೆತ್ತಲ್ಪಟ್ಟಿವೆ. ಹಾಗೂ ಪಶ್ಚಿಮ ದಿಕ್ಕಿಗೆ ಒಂದು ಗೂಡೊಂದಿದ್ದು, ಶ್ರೀಆಂಜನೇಯ ಶಿಲ್ಪವನ್ನು ಇಡಲಾಗಿದೆ. ನವರಂಗದ ಮಧ್ಯದಲ್ಲಿ 4 ಕಂಬಗಳಿವೆ. ಈ ಕಂಬಗಳ ವಾಸ್ತುರಚನಾ ನೋಟವನ್ನು ಗಮನಿಸಿದರೆ

ವಿಜಯನಗರ ಶೈಲಿಯ ಕಂಬಗಳಾಗಿವೆಯೆಂದು ಹೇಳಬಹುದು. ನಾಲ್ಕು ಕಂಬಗಳ ಮಧ್ಯದಲ್ಲಿ ಬೆಳಕು ಬರುವುದಕ್ಕೆ ಜಾಲಾಂಧ್ರಗಳನ್ನು ಇಡಲಾಗಿದೆ.

ನವರಂಗದಲ್ಲಿ ನಮ್ಮಾಳ್ವಾರ್ ಮತ್ತು ಭಾಷ್ಯಾಕಾರರ ವಿಗ್ರಹಗಳಿವೆ ಹಾಗೂ ವಿಶ್ವಕಿನ್ನರರ ಮಾರ್ಕಂಡೇಯ ಋಷಿಗಳ ಚಿಕ್ಕದಾದ ಮೂರ್ತಿಗಳು ಇಲ್ಲಿಯ ನವರಂಗದಲ್ಲಿವೆ. ನವರಂಗದ ಪ್ರವೇಶದ್ವಾರದ ಲಾಲಾಟಬಿಂಬದಲ್ಲಿ ಉಗ್ರನರಸಿಂಹನ ಉಬ್ಬು ಕೆತ್ತನೆಯನ್ನು ತುಂಬಾ ಸೊಗಸಾಗಿ ಕಡೆಯಲಾಗಿದೆ. ಇಕ್ಕೆಲಗಳಲ್ಲಿ ಚಕ್ರ ಮತ್ತು ಶಂಖದ ಉಬ್ಬು ಕೆತ್ತನೆಯೂ ಕಂಡುಬರುವುದು. ಈ ಹಿನ್ನೆಲೆಯಿಂದ ಇದೊಂದು ಸಂಪ್ರದಾಯಿಕ ಶ್ರೀವೈಷ್ಣವ ಧರ್ಮಕ್ಕೆ ಸೇರಿದ ದೇವಾಲಯವೆಂದೇ ಹೇಳಬಹುದಾಗಿದೆ. ನವರಂಗದ ಮುಂದೆ ವರಾಂಡವಿದೆ. ಇಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳು ಹಾಗೂ ಮುಖಮಂಟಪದಲ್ಲಿ 30 ಕಂಬಗಳಿವೆ. ಒಂದೊಂದು ಸಾಲಿನಲ್ಲಿ ಪೂರ್ವ-ಪಶ್ಚಿಮಾಭಿಮುಖವಾಗಿ 6 ಕಂಬಗಳು, ಉತ್ತರ-ದಕ್ಷಿಣಾಭಿ ಮುಖವಾಗಿ 5 ಕಂಬಗಳು ಒಟ್ಟು 30 ಕಂಬಗಳಿವೆ. ಈ ಎಲ್ಲಾ ಕಂಬಗಳೂ ಕೂಡ ವಿಜಯನಗರ ವಾಸ್ತುಶೈಲಿಯನ್ನು ಹೊಂದಿರುವಂತಹ ಕಂಬಗಳೇ ಆಗಿದ್ದವೆಂದು ಹೇಳಲಾಗಿದೆ. ವರಾಂಡದಲ್ಲಿ ಪೂರ್ವ-ಪಶ್ಚಿಮಾಭಿಮುಖವಾಗಿ ಒಂದೊಂದು ಗುಡಿಯಿದ್ದು ಪೂರ್ವ-ಪಶ್ಚಿಮ ದಿಕ್ಕಿನಲ್ಲಿರುವ ಗುಡಿಯಲ್ಲಿ ಆಳ್ವರ್ ಶಿಲ್ಪವನ್ನು ಇಡಲಾಗಿದ್ದು, ಮುಖಮಂಟಪದಲ್ಲಿ ಬಲಿಪೀಠವಿದೆ. ಬಲಿಪೀಠದ ನಾಲ್ಕು ಕಂಬಗಳಲ್ಲಿ ಹಲವಾರು ವೈವಿಧ್ಯಮಯವಾದಂತಹ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳು ಆಳ್ವರ್, ಗರುಡ, ಶ್ರೀರಂಗ, ಸರ್ಪ, ಉಗ್ರನರಸಿಂಹ, ಶ್ರೀಶಿಲ್ಪ, ಆಮೆ, ಕಮಲ, ಶಂಖ, ವಿಷ್ಣು, ನವಿಲು, ಅರ್ಜುನ, ತಂಬೂರಿದಾಸ, ಕೃಷ್ಣ, ಬ್ರಹ್ಮ, ವ್ಯಾಳವಾರಿ, ಶ್ರೀಕೃಷ್ಣ ಕೊಳಲು ನುಡಿಸುವುದು, ಶ್ರೀಪುರುಷರು, ವೀರಾಂಜನೇಯ ಹೀಗೆ ಹಲವಾರು ಉಬ್ಬುಶಿಲ್ಪಗಳ ಕೆತ್ತನೆಗಳು ಇಲ್ಲಿನ ಕಂಬಗಳಲ್ಲಿ ಕಂಡುಬರುತ್ತವೆ. ಇಲ್ಲಿಯ ವಿಶೇಷತೆ ಏನೆಂದರೆ ಒಂದು ಕಂಬದಲ್ಲಿ ಹಲ್ಲಿಯ ಉಬ್ಬು ಕೆತ್ತನೆಯಿದೆ. ಈ ಹಲ್ಲಿಯ ಸ್ಪರ್ಶ ಮತ್ತು ದರ್ಶನಗಳಿಂದ ಅಲ್ಲಿಯ ಶಕುನಗಳಿಗೆ ಸಂಬಂಧಪಟ್ಟ ದೋಷಗಳೂ ಪರಿಹಾರವಾಗುತ್ತದೆ ಎಂಬುದು ಇಲ್ಲಿಯ ನಂಬಿಕೆ ಮತ್ತು ಐತಿಹ್ಯ. ಈ ಸ್ಥಳ ಕಂಚಿಪುರದ ಮಹಾಕ್ಷೇತ್ರಕ್ಕಿಂತಲೂ ತಿರುಮಕೂಡಲು ಕ್ಷೇತ್ರ ಐತಿಹಾಸಿಕವಾಗಿ ಗಮನಾರ್ಹವಾದ ಸ್ಥಳ ಎಂಬುದು ಸ್ಥಳೀಯರ ನಂಬಿಕೆ.

ದೇವಾಲಯದ ಮುಖ್ಯ ಪ್ರವೇಶ ದ್ವಾರದಲ್ಲಿ 2 ನಿಲುವು ಕಂಬವಿದ್ದು, 20 ಅಡಿ ಎತ್ತರ, 3 ಅಡಿ ಅಗಲವಿದೆ. ಇವೆರಡು ಒಂದೇ ಆಕಾರವನ್ನು ಹೊಂದಿವೆ. ಪಶ್ಚಿಮ ದಿಕ್ಕಿನ ಗೋಡೆಯಲ್ಲಿ

ಆಳ್ವರ್ ಶಿಲ್ಪವಿದೆ ಮತ್ತು ಎರಡು ನವಿಲು ಇದೆ. ಕಂಬದಲ್ಲಿ ವ್ಯಾಳವಾರಿ ಮೇಲೆ ನಿಂತಿರುವ ಇಬ್ಬರು ನರ್ತಕಿಯರ ಉಬ್ಬುಶಿಲ್ಪದ ಕೆತ್ತನೆಗಳಿವೆ. ಹಾಗೂ ಬಳ್ಳಿ-ಸುರುಳಿ ಕೆತ್ತನೆಯಿದೆ. ಪ್ರವೇಶದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪವನ್ನು ನಿಲುವು ಕಂಬದಲ್ಲಿ ಕಡೆಯಲಾಗಿದೆ. ಮಹಾದ್ವಾರದ ಮೇಲೆ ದ್ರಾವಿಡ ಮಾದರಿಯ ರಾಜಗೋಪುರವಿದೆ.

ಈ ರಾಜಗೊಪುರವು ಐದು ಹಂತಸ್ತುಗಳನ್ನು ಹೊಂದಿದ್ದು ಪ್ರತಿ ಹಂತಸ್ತಿನಲ್ಲೂ ದೇವಾನು-ದೇವತೆಗಳ ಶಿಲ್ಪಗಳು, ಅರೆಗಂಬಗಳು, ಬಳ್ಳಿ ಸುರುಳಿಯ ಕೆತ್ತನೆಗಳು ಕಂಡುಬಂದಿವೆ. ಮೇಲ್ಭಾಗದಲ್ಲಿ ಗೋಪುರವು ಎತ್ತಿನ ಕೊಂಬಿನ ಮಾದರಿಯಲ್ಲಿ ಬಾಗಿರುವುದು ಮೂಡಿಬಂದಿದೆ. ಈ ಶೈಲಿಯನ್ನು ದಕ್ಷಿಣ-ಭಾರತದ ಶೈಲಿ ಎಂದು ಅದರಲ್ಲೂ ವಿಶೇಷವಾಗಿ ಶುದ್ಧ ದ್ರಾವಿಡ ವಾಸ್ತುಶೈಲಿ ಎಂದು ಪರಿಗಣಿಸಲಾಗಿದೆ. ಇಲ್ಲಿಯ (ಸೋಮರಾಜ) ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಸೋಮರಾಜ ಈ ಮಹಾಗೋಪುರವನ್ನು ನಿರ್ಮಿಸಿದನೆಂದೂ ಹೇಳಬಹುದಾಗಿದೆ. ಮಹಾದ್ವಾರದ ಒಳಗೆ ಹೋದರೆ ಮುಖಮಂಟಪ ತಲುಪುತ್ತೇವೆ. ಈ ಮುಖಮಂಟಪವನ್ನು ಕ್ರಿ.ಶ.1646ರಲ್ಲಿ ಮೂಗೂರು ಪ್ರಭು ಸೋಮರಾಜ ಒಡೆಯರ್‌ರವರ ಕೃಷ್ಣ ಅರಸರವರ ಧರ್ಮಪತ್ನಿಯಾದ ಚಾಮರಾಜಮ್ಮಣಿರವರಿಂದ ನಿರ್ಮಿಸಲ್ಪಟ್ಟಿತ್ತೆಂದು ಇಲ್ಲಿರುವ ತೊಲೆಯಲ್ಲಿ ಕೆತ್ತಲ್ಪಟ್ಟಿರುವ ಶಾಸನದಿಂದ ತಿಳಿದು ಬರುತ್ತದೆ. ಈ ದೇವಾಲಯದ ಸುತ್ತಲೂ ಮೇಲ್ಭಾಗದಲ್ಲಿ ಕೋಷ್ಠಗುಡಿಗಳಿವೆ. ಪ್ರತಿಯೊಂದು ಗುಡಿಯಲ್ಲಿ ಅನೇಕ ದೇವಾನು-ದೇವತೆಗಳ ಗಾರೆಶಿಲ್ಪಗಳಿರುವುದು ಒಂದು ವಿಶೇಷತೆ. ಅಲ್ಲದೆ ಇಕ್ಕೆಲಗಳಲ್ಲಿಯೂ ಗಾರೆಯ ಶಿಲ್ಪಗಳು ಕಂಡುಬಂದಿದ್ದು, ಕೈಪಿಡಿ ಗೋಡೆಯಲ್ಲಿ ವಿಷ್ಣುವಿನ ವಿವಿಧ ರೂಪ ಮತ್ತು ಅವತಾರಗಳ ಗಾರೆಯ ಶಿಲ್ಪಮೂರ್ತಿಗಳಿವೆ. ಕೆಲವು ಮೂರ್ತಿಗಳ ಕೆಳಗೆ ಹೆಸರುಗಳನ್ನು ಕೆತ್ತಲಾಗಿದೆ.

ಅನೇಕ ರೀತಿಯ ನರ್ತನಗಳನ್ನು ತೋರಿಸುವ ಮೂರ್ತಿಗಳೂ ಕೆಲವು ವಿಶಿಷ್ಟ ಮೂರ್ತಿಗಳು ಅಲ್ಲಲ್ಲಿ ಕಾಣಬರುತ್ತವೆ. ದಕ್ಷಿಣ ಹಾಗೂ ಪಶ್ಚಿಮದ ಕೈಪಿಡಿ ಗೋಡೆಯಲ್ಲಿ ಹಿರಣ್ಯಕಶ್ಯಪುವಿನ ಸಂಹಾರ ಮಾಡುವ ದೃಶ್ಯ, ಯೋಗನರಸಿಂಹಸ್ವಾಮಿ, ಅಷ್ಟಪಾಣಿ ನರಸಿಂಹ ಇತ್ಯಾದಿಯಾಗಿ ನರಸಿಂಹನ (ಒಂಭತ್ತು) ವಿವಿಧ ರೂಪಗಳನ್ನು ಗಾರೆಯಿಂದ ತಯಾರಿಸಲ್ಪಟ್ಟ ಶಿಲ್ಪಗಳಾಗಿವೆ. ಮೂಲದೇವರಾದ ನರಸಿಂಹನ ಬಲಗೈ ಹೆಬ್ಬೆರಳು ತೋರು ಬೆರಳುಗಳ ನಡುವೆ ಸಸ್ಯಗಳ ಕಾಂಡವೊಂದನ್ನು ಬಿಡಿಸಲಾಗಿದೆ. ಈ ಕ್ಷೇತ್ರ ಪಾವಿತ್ರ್ಯದಲ್ಲಿ ಕಾಶಿಗಿಂತ ಒಂದು ಗುಲಗಂಜಿ ತೂಕ ಹೆಚ್ಚು ಎಂಬ ಅಂಶವನ್ನು ಸೂಚಿಸುತ್ತದೆ ಎಂಬ ನಂಬಿಕೆ. ಈ ದೇವಾಲಯದ

ಹೊರಭಾಗದಲ್ಲಿ ಅಧಿಷ್ಠಾನ, ಜಗತಿ, ತ್ರಿಪಟಕುಮುದ, ಹಾರ, ಕೀರ್ತಿಮುಖ, ಭಿತ್ತಿಯ ಭಾಗದಲ್ಲಿ ಸುತ್ತಲೂ ಯಾವುದೇ ರೀತಿಯ ಉಬ್ಬುಶಿಲ್ಪಗಳಿಲ್ಲ. ಕಪೋತ ಸರಳವಾಗಿದ್ದು ಕೈಪಿಡಿ ಮತ್ತು ವಿಮಾನವಿದೆ. ಈ ದೇವಾಲಯದ ಕೆಲವೊಂದು ಭಾಗಗಳನ್ನು ಗುರುತಿಸುವುದಾದರೆ ನವರಂಗ ಮತ್ತು ಮುಖಮಂಟಪ ನಂತರದ ಕಾಲದ್ದು ಎಂದು ಹೇಳಬಹುದು. ದೇವಾಲಯ ಉತ್ತರಾಭಿಮುಖವಾಗಿರುವುದರಿಂದ ಸೋಮಸೂತ್ರ (ಪ್ರನಾಳ) ಪಶ್ಚಿಮ ದಿಕ್ಕಿಗೆ ಕಾಣಬರುತ್ತದೆ.

ಶ್ರೀ ಗುಂಜಾನರಸಿಂಹಸ್ವಾಮಿ ದೇವಾಲಯದಲ್ಲಿ ವಿಜಯನಗರ ಕಾಲದ ವಾಸ್ತು ಪರಂಪರೆಯನ್ನು ಮರೆಯುವಂತಿಲ್ಲ. ಇದೇ ರೀತಿ ನಾವು ಮೂಗೂರು, ವರುಣ, ಸೋಸಲೆ, ಮೈಸೂರಿನ ಅರಮನೆಯ ಆವರಣದಲ್ಲಿರುವ ದೇವಾಲಯಗಳಲ್ಲಿ ಈ ರೀತಿಯ ವಾಸ್ತು ವಿನ್ಯಾಸವನ್ನು ಗುರುತಿಸಬಹುದಾಗಿದೆ. ಈ ಎಲ್ಲಾ ಅಂಶಗಳಿಂದ ಈ ದೇವಾಲಯ ವಿಜಯನಗರ ಅರಸರ ಜೊತೆಯಲ್ಲಿ ಮೈಸೂರು ಅರಸರೂ ಕೂಡ ದೇವಾಲಯವನ್ನು ಸಾಕಷ್ಟು ಬದಲಾವಣೆಗೊಳಿಸಿರುವುದನ್ನು ಕಾಣುತ್ತೇವೆ. ಈ ದೇವಾಲಯದಲ್ಲಿರುವ ಶಿಲ್ಪಗಳಲ್ಲಿ ಭಾರತದಲ್ಲಿರುವ ಪ್ರತಿಯೊಂದು ದೇವರ ಹೆಸರಿನ ಶಿಲ್ಪವನ್ನು ಇಲ್ಲಿ ಕಾಣಬಹುದಾಗಿದೆ. ಗುಂಜಾನರಸಿಂಹಸ್ವಾಮಿ ದೇವಾಲಯದ ಹಿಂಭಾಗಕ್ಕೆ ಅಂದರೆ ದಕ್ಷಿಣ ದಿಕ್ಕಿನ ಪ್ರಾಕಾರ ಗೋಡೆಯಲ್ಲಿ 6 ಕೋಷ್ಠ ಗುಡಿಗಳಿವೆ.

1) ಒಂದರಲ್ಲಿ ನಾರಾಯಣ ಶಿಲ್ಪವಿದೆ, ಪಾದದಲ್ಲಿ ಲಕ್ಷ್ಮಿ ಶಿಲ್ಪವಿದೆ. ಇಲ್ಲಿರುವ ಪ್ರವೇಶ ದ್ವಾರದ ನಿಲುವು ಕಂಬದ ಮೇಲ್ಭಾಗದ ಲಾಲಾಟಬಿಂಬದಲ್ಲಿ ಲಕ್ಷ್ಮಿಯ ಉಬ್ಬುಶಿಲ್ಪವಿದೆ.

2) ಎರಡನೇ ಕೋಷ್ಠ ಗುಡಿಯಲ್ಲಿ ರಾಮ–ಸೀತೆ, ಆಂಜನೇಯರಿಗೆ ಆಶೀರ್ವಾದ ಮಾಡುತ್ತಿರುವ ದೃಶ್ಯದ ಶಿಲ್ಪವಿದೆ.

3) ಮೂರನೇ ಕೋಷ್ಠಗುಡಿಯಲ್ಲಿ ವಿಷ್ಣುವಿನ ಶಿಲ್ಪವಿದೆ. ಇಕ್ಕೆಲಗಳಲ್ಲಿ ಶ್ರೀದೇವಿ, ಭೂದೇವಿಯರ ಅಥವಾ ಗಂಗೆ–ಯಮುನೆಯರ ಶಿಲ್ಪದ ಮಾದರಿಯಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ.

4) ನಾಲ್ಕನೇ ಕೋಷ್ಠಗುಡಿಯಲ್ಲಿ ಕಾಲಭೈರವನ ಶಿಲ್ಪವನ್ನು ಇಡಲಾಗಿದೆ.

5) ಐದನೇ ಕೋಷ್ಠಗುಡಿಯಲ್ಲಿ ವಿಷ್ಣು ಮತ್ತು ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪಗಳಿವೆ.

6) ಆರನೇ ಕೋಷ್ಠಗುಡಿಯಲ್ಲಿ ಆಳ್ವರ್ ಶಿಲ್ಪವಿದೆ. ಹಾಗೂ ಆಗ್ನೇಯ ದಿಕ್ಕಿಗೆ ಇರುವ ಕೋಷ್ಠಗುಡಿಯಲ್ಲಿ ಅಂಡಾಳಮ್ಮನ ಶಿಲ್ಪವಿದೆ.

ಈ ಎಲ್ಲಾ ಆಧಾರಗಳಿಂದ ಈ ದೇವಾಲಯವು ಪರಿಪೂರ್ಣವಾಗಿ ಶ್ರೀ ವೈಷ್ಣವ ಸಂಪ್ರದಾಯಬದ್ಧವಾಗಿ ನಿರ್ಮಾಣಗೊಂಡಿರುವ ದೇವಾಲಯವೆಂದು ಹೇಳ ನನ್ನ ಸಂಶೋಧನೆಯಲ್ಲಿ ಇದೊಂದು ವಿಶೇಷತೆಯನ್ನು ಹೊಂದಿರುವ ದೇವಾಲಯವೆಂದು ಪರಿಗಣಿಸಿರುತ್ತೇನೆ. ಇಲ್ಲಿರುವ ಪ್ರವೇಶ ದ್ವಾರದ ನಿಲುವು ಕಂಬದಲ್ಲಿ ಸ್ತ್ರೀಯರು ನರ್ತನ ಮಾಡುತ್ತಿರುವ ಮತ್ತು ಬಳ್ಳಿ ಸುರುಳಿಯ ಕೆತ್ತನೆಗಳಿಂದ ಕೂಡಿದೆ. ತಳಭಾಗದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಇಲ್ಲಿರುವ ಲಾಲಾಟಬಿಂಬದಲ್ಲಿ ಲಕ್ಷ್ಮಿ ಉಬ್ಬುಶಿಲ್ಪ ನೈರುತ್ಯ ದಿಕ್ಕಿಗೆ ಒಂದು ಕೋಷ್ಠಗುಡಿಯಿದೆ. ಈ ಗುಡಿಯನ್ನು ಅಮ್ಮನವರ ಗುಡಿ ಎಂದು ಕರೆಯುತ್ತಾರೆ. ಇಲ್ಲಿ ಶ್ರೀಮಹಾಲಕ್ಷ್ಮಿಯ ಶಿಲ್ಪವಿದೆ. ಈ ಎರಡೂ ಗುಡಿಯ ಮುಂದೆ ೩ ಸಾಲು ಕಂಬವಿದ್ದು, ಒಂದು ಸಾಲಿನಲ್ಲಿ ೩ ಕಂಬದಂತೆ ೯ ಕಂಬಗಳಿವೆ. ಈ ಎರಡೂ ಗುಡಿಯ ಮೇಲೆ ವಿಮಾನವಿದೆ ಹಾಗೂ ಪ್ರಾಕಾರದ ಸುತ್ತಲೂ ಮೈಸೂರು ಒಡೆಯರ ಶೈಲಿಯ ಗಾರೆಶಿಲ್ಪಗಳನ್ನು ಪ್ರತಿಯೊಂದು ಕೋಷ್ಠ ಗುಡಿಯಲ್ಲಿ ಇಡಲಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ತಿರುಮಕೂಡಲು ನರಸೀಪುರದ ಈ ಕ್ಷೇತ್ರ ತಲಕಾಡಿನ ಗಂಗರ ಕಾಲಕ್ಕೆ ಸೇರಿದ ಪ್ರದೇಶವಾಗಿದ್ದರೂ ಹೆಚ್ಚಾಗಿ ತಲಕಾಡಿನ ಗಂಗರ ಬಗ್ಗೆ ಯಾವುದೇ ಉಲ್ಲೇಖವಿಲ್ಲ. ಇಲ್ಲಿಯ ವಿಶೇಷತೆ ಏನೆಂದರೆ ಇದು ಲಕ್ಷ್ಮಿನರಸಿಂಹ ದೇವಾಲಯವಾಗಿದ್ದರೂ ಹೆಚ್ಚಾಗಿ ಲಕ್ಷ್ಮಿಗೆ ಪ್ರಾಮುಖ್ಯತೆಯಿದೆ. ಆದಕಾರಣ ಈ ದೇವಾಲಯವನ್ನು ಗುಂಜಾನರಸಿಂಹಸ್ವಾಮಿ ದೇವಾಲಯ ಎನ್ನುವುದಕ್ಕಿಂತ ಲಕ್ಷ್ಮಿನರಸಿಂಹನ ಕ್ಷೇತ್ರ ಎಂದರೆ ತಪ್ಪಾಗಲಾರದು. ಏಕೆಂದರೆ ನನ್ನ ಸಂಶೋಧನಾ ಕ್ಷೇತ್ರಕಾರ್ಯದಲ್ಲಿ ಒಂದೊಂದು ಶಿಲ್ಪವನ್ನು ಅವಲೋಕನ ಮಾಡಿದಾಗ ವಿಶೇಷವಾಗಿ ನರಸಿಂಹನಿಗಿಂತಲೂ ಲಕ್ಷ್ಮಿಯ ಉಬ್ಬುಶಿಲ್ಪಗಳೇ ಹೆಚ್ಚಾಗಿ ಕಂಡುಬಂದಿವೆ.

ಈ ಹಿನ್ನೆಲೆಯಿಂದ ಇದು ಲಕ್ಷ್ಮಿಗೆ ಪ್ರಸ್ತುತ ಪ್ರಾಧಾನ್ಯತೆ ಕೊಟ್ಟಿರುವ ದೇವಾಲಯವೆಂದು ಹೇಳಬಹುದು. ಪ್ರಸ್ತುತ ಈ ಲೇಖನ ಪಾಠದಿಂದ ಸ್ಥಳೀಯರ ನಂಬಿಕೆ ಅಂದಿನ ಆಚಾರ-ವಿಚಾರ ಲೋಕದಲ್ಲಿ ಪೂಜಿಸುವ ಎಲ್ಲಾ ದೇವಾನು-ದೇವತೆಗಳ ಶಿಲ್ಪಗಳು ಗಾರೆಗಚ್ಚಿನಿಂದ ಮಾಡಲ್ಪಟ್ಟಿರುವುದು ಗುಂಜಾನರಸಿಂಹ ದೇವಾಲಯದ ನಾನಾ ಭಾಗದಲ್ಲಿ ಮೂಡಿಬಂದಿದೆ. ಆದುದ್ದರಿಂದ ಇದೊಂದು ವಿಶೇಷತೆ ಹೊಂದಿರುವ ದೇವಾಲಯವೆಂದು ಇಲ್ಲಿ ಪರಿಗಣಿಸಲಾಗಿದೆ.

# ಜೈನ ಬಸದಿಗಳು

**ಪೀಠಿಕೆ**

ಪ್ರಾಚೀನ ಕರ್ನಾಟಕದಲ್ಲಿ ಜೈನ ಧರ್ಮವು ಒಂದು ಪ್ರಮುಖ ಧರ್ಮವಾಗಿತ್ತು. ಇಡೀ ಜೀವ ಜಗತ್ತಿನ ಬಗೆಗೆ ಕಾಳಜಿ ಹೊಂದಿದ್ದ ಜೈನಧರ್ಮವು ಜೀವ ಹಿಂಸೆಯನ್ನು ವಿರೋಧಿಸಿತು. ಹಿಂಸೆಗೆ ಪ್ರೇರಕವಾಗುವ ಎಲ್ಲ ವ್ಯಾಮೋಹಗಳನ್ನು ತ್ಯಜಿಸುವ, ಅಹಿಂಸೆಯ, ತೀವ್ರ ವೈರಾಗ್ಯದ, ತಪಸ್ಸಿನ ಮಾರ್ಗದಿಂದ ಕೇವಲ ಜ್ಞಾನ ಪ್ರಾಪ್ತಿಯನ್ನು ಪ್ರತಿಪಾದಿಸಿತು. ಅವರ ಕಠಿಣವಾದ ತಪಸ್ಸು, ವ್ರತಾಚರಣೆಗಳು ಲೌಕಿಕನಾದ ಸಾಮಾನ್ಯನಿಗೆ ಎಟುಕುವಂಥದ್ದಾಗಿರಲಿಲ್ಲ. ಅಂತಹ ಧರ್ಮವನ್ನು ಸಮಾಜ ಮುಖಿಯಾಗಿಸುವ ಪ್ರಯತ್ನಗಳು ನಡೆದುವು. ವೈದಿಕ, ಅವೈದಿಕ ಧರ್ಮಗಳ ಮುಖಾಮುಖಿ, ತಾತ್ವಿಕ ಹಾಗೂ ಭೌತಿಕ ಸಂಘರ್ಷಗಳ ಕಾರಣದಿಂದ ಜೈನಧರ್ಮ ಅನೇಕ ಬದಾಲಾವಣೆಗಳನ್ನು ಮಾಡಿಕೊಳ್ಳತೊಡಗಿತು. ಸಮನ್ವಯ ಸೂತ್ರಗಳನ್ನು ಜನಪರ ಧೋರಣೆಯನ್ನು ಬೆಳೆಸಿಕೊಳ್ಳುವ ಅಗತ್ಯತೆಯನ್ನು ಮನಗಂಡ ಶ್ವೇತಾಂಬರ ಯಾಪನೀಯ ಸಂಘಗಳು ಹೆಚ್ಚು ಜನಪರ ಧೋರಣೆಗಳನ್ನು, ಆಚರಣೆಗಳನ್ನು ರೂಢಿಸಿಕೊಂಡವು. ಗೃಹಸ್ಥರಾದ, ಫಲಾಪೇಕ್ಷಿಗಳಾದ ಲೌಕಿಕ ಶ್ರಾವಕ ಸಮುದಾಯಕ್ಕೆ ವರದಾಯಿನಿಯರಾದ, ಮಂಗಳವನ್ನೂ, ಸಿರಿಯನ್ನೂ ಉಂಟು ಮಾಡುವ ಯಕ್ಷಿಯರ, ಯಕ್ಷರ, ಕ್ಷೇತ್ರಪಾಲರ, ವಿದ್ಯಾದೇವತೆ ಸರಸ್ವತಿಯರ ಪೂಜೆ, ಆರಾಧನೆಗಳನ್ನು ಆಚರಣೆಗೆ ತಂದರು. ಮಂತ್ರ, ತಂತ್ರ, ಯಂತ್ರಗಳನ್ನು ರೂಢಿಸಿಕೊಂಡು ಭೂತ, ಪ್ರೇತ, ಪಿಶಾಚಿಗಳನ್ನು ಓಡಿಸುವವರೆಂದು ಕೆಲವು ಜೈನ ಮುನಿಗಳು ಪ್ರಸಿದ್ಧರಾಗಿ ಪ್ರಭಾವ ಬೀರತೊಡಗಿದರು. ಜನಪ್ರಿಯವಾಗುವ ಪ್ರಯತ್ನದಲ್ಲಿ ವೈದಿಕರ, ಶೈವರ ಪುರಾಣ ಕಥೆಗಳನ್ನು ಜೈನೀಕರಣಗೊಳಿಸುವ ಪ್ರಯತ್ನವನ್ನು ಜೈನ ಕವಿಗಳು ಮಾಡಿದರು.

ಈ ಹೊಸ ಅಲೆಯ ಪ್ರಭಾವದಿಂದ ಅಂತ್ಯಜರು, ಚಂಡಾಲರು, ಜೈನ ಮತ ಸೇರಿದರು. ಒಕ್ಕಲಿಗರು, ಶೂದ್ರರು ಎಲ್ಲ ವರ್ಗದ ಸ್ತ್ರೀಯರು ಮತಾಂತರಗೊಂಡು ಜೈನಧರ್ಮಕ್ಕೆ ಸೇರಿದರು. ಮತಾಂತರಗೊಂಡ ಜನವರ್ಗದ ಬಗೆಗೆ ಮಡಿವಂತಿಕೆ ಜೈನರಲ್ಲಿ ಮೂಡಿರಬಹುದಾದ ಮುಜುಗರ. ಅಂತಹವರನ್ನು ಯತಿಗಳೆಂದು ಪೂಜಿಸುವಾಗಿನ ಅಳುಕು, ಹಿಂಜರಿಕೆಗಳು, ತಾಕಲಾಟಗಳನ್ನು ಬ್ರಹ್ಮ, ಶಿವನು ಸಮಯ ಪರೀಕ್ಷೆಯಲ್ಲಿ ಹಿಡಿದಿಟ್ಟಿದ್ದಾನೆ. ಆ ತಳಮಳಗಳನ್ನು

ನಿವಾರಿಸಿಕೊಂಡು ಜೈನರು ಒಗ್ಗಟ್ಟಾಗದಿದ್ದರೆ ಅದಕ್ಕೆ ಉಳಿಗಾಲವಿಲ್ಲವೆಂಬುದನ್ನರಿತು ಅದಕ್ಕಾಗಿ ಪ್ರಾಮಾಣಿಕ ಕರೆ ನೀಡಿದ್ದಾನೆ. "ಕ್ಷತ್ರಿಯನಾದಿಯಾಗಿ ಕಡೆಯೊಲ್ಲಫಲೆಯಂಬರೆವೆಲ್ಲ ಜಾತಿಗಂ ಧಾತ್ರಿಯಳೆಲ್ಲಿ ನೋಡುವಡಮೇತೆರದಿಂ ಕಣಿಯಿಲ್ಲ ಶುದ್ಧ ಚಾರಿತ್ರಮದೊಂದೆ ಮಾರ್ಗ" "ಪೊಲೆಯಂ ಶ್ರಾವಕನಾದೊಡೆ ಪಲರೊಳವಂ ಮಾನ್ಯನಪ್ಪನ್" ಎಂದೂ ಹೇಳಿದ್ದಾನೆ. ಎಲ್ಲ ಜಾತಿ ಜನರಿಗೂ ಜೈನ ಧರ್ಮವೂ ಮುಕ್ತವಾಗಿ ತೆರೆದುಕೊಳ್ಳುತ್ತಿದ್ದ ಪ್ರಯತ್ನವನ್ನು ಇಲ್ಲಿ ಕಾಣಬಹುದು. ನಯಸೇನನೂ ಬ್ರಾಹ್ಮಣರಿಂದ ಬೆಸ್ತನವರೆಗೆ ಅರಸನಿಂದ ಕಳ್ಳನವರೆಗೆ ಎಲ್ಲರನ್ನು ಜೈನದೀಕ್ಷೆಗೊಳ್ಳುವಂತೆ ತೆರೆದ ಬಾಹುಗಳಿಂದ ಆಹ್ವಾನಿಸಿದ್ದಾನೆ.

ಇಷ್ಟೆಲ್ಲಾ ಜನಪರ ಧೋರಣೆಗಳನ್ನು ಇಟ್ಟುಕೊಂಡಿದ್ದರೂ ಜೈನಧರ್ಮ, ವೈಷ್ಣವ, ವೀರಶೈವದ ಪ್ರಾಬಲ್ಯದಿಂದ ಹಿನ್ನೆಲೆಗೆ ಸರಿಯಬೇಕಾಯಿತು. ಇವರ ಅಹಿಂಸಾವಾದವೂ ಕಟ್ಟುನಿಟ್ಟಾದ ಸಸ್ಯಾಹಾರ ಪದ್ಧತಿಯೂ ಸಮಾಜದ ದೊಡ್ಡ ಮೊತ್ತವು ಈ ಧರ್ಮದಿಂದ ದೂರ ಉಳಿಯುವಂತೆ ಮಾಡಿತೆಂಬುದೂ ಸತ್ಯ. ವೀರಶೈವ ಧರ್ಮವೂ ಅಹಿಂಸೆ ಮತ್ತು ಸಸ್ಯಾಹಾರವನ್ನು ಬೋಧಿಸಿ, ಮತಾಂತರಕ್ಕೆ ಅವಕಾಶ ಮಾಡಿಕೊಟ್ಟಿದರೂ ಕೆಲವು ಮತಾಂತರಗೊಂಡ ಪಂಗಡಗಳು ತಮ್ಮ ಮೂಲ ಮಾಂಸಹಾರ ಪದ್ಧತಿಯನ್ನು ಉಳಿಸಿಕೊಂಡಿವೆ.

**ಪಾರ್ಶ್ವನಾಥ ಬಸದಿ, ಮೂಗೂರು**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿ ಮೂಗೂರು ಗ್ರಾಮವಿದೆ. ಈ ಬಸದಿಯು ಪೂರ್ವಾಭಿಮುಖವಾಗಿದೆ. ಪಾರ್ಶ್ವನಾಥನನ್ನು ಸ್ಥಳೀಯ ಒಕ್ಕಲಿಗರು ಭೈರವನೆಂದೂ ನಂಬಿದ್ದು, ತಿಬ್ಬಾದೇವಿಯನ್ನು ಅವನ ತಂಗಿಯೆಂದು ಹೇಳುವ ವಾಡಿಕೆ ಈ ಭಾಗದಲ್ಲಿದೆ. ಉಪಗ್ರಾಮ ಹೊಸಹಳ್ಳಿಯಲ್ಲಿ ಇವಳ ಆರು ಸೋದರಿಯರ ಶಿಲ್ಪಗಳಿವೆ. ಅಲ್ಲೇ ಇರುವ ಇನ್ನೊಂದು ಬಸದಿಯು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಹೊಂದಿದ್ದು, ಕೇವಲ ಸ್ತಂಭ ಹಾಗೂ ಛಾವಣಿಗಳಷ್ಟೇ ಉಳಿದಿದ್ದು, ಭಿತ್ತಿಭಾಗ ಸಂಪೂರ್ಣ ನಾಶವಾಗಿದೆ. ಆದರೂ ಅಲ್ಲಲ್ಲಿ ಇಟ್ಟಿಗೆಯ ಗೋಡೆಯ ಅವಶೇಷಗಳನ್ನು ನೋಡಬಹುದಾಗಿದೆ. ಈ ಬಸದಿಯ ಗರ್ಭಗುಡಿಯಲ್ಲಿ ಪಾರ್ಶ್ವನಾಥ ಶಿಲ್ಪವಿದೆ.[91]

ಈ ಬಸದಿಯಲ್ಲಿ ಚೋಳರ ವಾಸ್ತುಶೈಲಿಯನ್ನು ಹೊಂದಿರುವ ಕಂಬಗಳು ಮತ್ತು ಹೊಯ್ಸಳರ ಕಾಲಕ್ಕೆ ಸೇರಿದ ಕಂಬಗಳಿವೆ. ಆ ಒಂದು ದೃಷ್ಟಿಯಿಂದ ಈ ಮೂರು ಕಾಲದ ವಾಸ್ತು ರಚನೆ ಇಲ್ಲಿ ಇದೆ ಎಂದು ಹೇಳಲಾಗಿದೆ.[92] (ತಳನಕ್ಷೆ-6)ಮೂಗೂರಿನ ಪಶ್ಚಿಮಕ್ಕಿರುವ ಜೈನ ಬಸದಿಯು 10ನೇ ಶತಮಾನಕ್ಕೆ ಸೇರಿದ ಕಟ್ಟಡವಾಗಿದೆ. ಈ ಬಸದಿಯನ್ನು ಶಾಸನಗಳಲ್ಲಿ ಶಿವಾಲಯ್ಯನ ಬಸದಿ ಎಂದು ಕರೆಯಲಾಗಿದೆ.

## ಆಧಾರರಹಿತ ದೇವಾಲಯಗಳು

**ಬನ್ನಹಳ್ಳಿ(ಹುಂಡಿ)**

ಬನ್ನಹಳ್ಳಿ(ಹುಂಡಿ) ಗ್ರಾಮ ತಿರುಮಕೂಡಲು ನರಸೀಪುರ ತಾಲಕಿನ ಆಲಗೂಡು ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮ. ಈ ಗ್ರಾಮವು ತಿರುಮಕೂಡಲು ನರಸೀಪುರ-ನಂಜನಗೂಡು ಮುಖ್ಯ ರಸ್ತೆಯಲ್ಲಿ ತಿರುಮಕೂಡಲು ನರಸೀಪುರದಿಂದ 6 ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಪ್ರಾಚೀನ ಬಸವೇಶ್ವರ ದೇವಾಲಯವಿದೆ.

**ಬಸವೇಶ್ವರ ದೇವಾಲಯ**

ಬಸವೇಶ್ವರ ದೇವಾಲಯವು ಬನ್ನಹಳ್ಳಿ(ಹುಂಡಿ)ಯ ವಾಯುವ್ಯ ಭಾಗದಲ್ಲಿದ್ದು, ಈ ದೇವಾಲಯವು ಚಿಕ್ಕ ದೇವಾಲಯವಾಗಿದ್ದು,ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ**:- ಗರ್ಭಗುಡಿಯಲ್ಲಿ ಒಂದು ಅಡಿ ಪಾಣಿಪೀಠದ ಮೇಲೆ ಅರ್ಧ ಅಡಿ ಎತ್ತರದ ಬಸವೇಶ್ವರ (ಬಸವ) ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಮೇಲ್ಭಾಗದಲ್ಲಿ ತೆರದ ಕಮಲಾಕೃತಿಯ ಭುವನೇಶ್ವರಿಯಿದ್ದು, ಎರಡು ಪಟ್ಟಿಕೆಗಳಿಂದ ಕೂಡಿದೆ. ಈ ಗರ್ಭಗುಡಿಯ ಸುತ್ತಳತೆ ಐದು ಅಡಿ ಉದ್ದ, ಐದು ಅಡಿ ಅಗಲವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಹಲವು (ನಾಲ್ಕು) ಬಿಡಿ ಬಸವನ ಶಿಲ್ಪಗಳಿದ್ದು, ಇವುಗಳು ಹತ್ತು ಸೆಂ.ಮೀ. ಅಗಲ, ನಾಲ್ಕು ಸೆಂ.ಮೀ. ಎತ್ತರವನ್ನು ಹೊಂದಿದ್ದು, ಸೋಪುಗಲ್ಲಿನಿಂದ ಕೆತ್ತಲ್ಪಟ್ಟವುಗಳಾಗಿವೆ.

**ಅಂತರಾಳ**:- ಗರ್ಭಗುಡಿಯ ಮುಂಭಾಗ ತೆರೆದ ಅಂತರಾಳವಿದ್ದು ಎಂಟು ಕಂಬಗಳನ್ನು ಹೊಂದಿದೆ. ಈ ದೇವಾಲಯವು ಅತಿ ಚಿಕ್ಕ ದೇವಾಲಯವಾಗಿದ್ದು, ಚೋಳರ ಕಾಲದ

ವಾಸ್ತುಶೈಲಿಯನ್ನು ಹೊಂದಿದೆ. ಆದರೆ ಯಾವುದೇ ನಿರ್ಧಿಷ್ಟವಾದ ಕಾಲಮಾನದ ಬಗ್ಗೆ ದಾಖಲೆಗಳಿಲ್ಲ. ಆದರೂ ಈ ದೇವಾಲಯದ ವಾಸ್ತುಶೈಲಿಯನ್ನು ಗಮನಿಸಿದಾಗ ಕ್ರಿ.ಶ.2ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಬಹುದಾಗಿದೆ. ಇತ್ತೀಚೆಗೆ ಈ ದೇವಾಲಯವನ್ನು ಸಿಮೆಂಟ್ ಗಾರೆಗಳಿಂದ ದೇವಾಲಯವನ್ನು ಜಿರ್ಣೋದ್ಧಾರ ಮಾಡಿದ್ದರೂ ಪ್ರಸ್ತುತದಲ್ಲಿ ಶಿಥಿಲಾವಸ್ಥೆಯಲ್ಲಿದೆ ಎಂದು ಹೇಳಬಹುದು.

**ಗರ್ಗೇಶ್ವರಿ**:- ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 4 ಕಿ.ಮೀ. ದೂರದಲ್ಲಿ ಗರ್ಗೇಶ್ವರಿ ಗ್ರಾಮವಿದೆ. ಇಲ್ಲಿನ ಗರ್ಗೇಶ್ವರಸ್ವಾಮಿ ದೇವಾಲಯವು ಗ್ರಾಮದ ಪ್ರಸಿದ್ಧ ದೇವಾಲಯವಾಗಿದೆ.

**ಗರ್ಗೇಶ್ವರಸ್ವಾಮಿ ದೇವಾಲಯ**

ಇದು ಗರ್ಗೇಶ್ವರಿ ಗ್ರಾಮದ ಮಧ್ಯಭಾಗದಲ್ಲಿರುವ ಏಕಕೂಟ ಶೈವ ದೇವಾಲಯ ವಾಗಿದ್ದು, ಪೂರ್ವಾಭಿಮುಖವಾಗಿದೆ. ದೇವಾಲಯವು ಗರ್ಭಗುಡಿ, ಸುಕನಾಶಿ, ನವರಂಗ, ಮುಖಮಂಟಪಗಳನ್ನು ಹೊಂದಿದೆ.

**ಗರ್ಭಗುಡಿ**:- ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ 3 ಅಡಿ ಎತ್ತರದ 2 ಅಡಿ ಅಗಲವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ**:- ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ**:- ನವರಂಗವು 9 ಅಂಕಣಗಳಿಂದ ಕೂಡಿದ್ದು, 4 ಪ್ರಧಾನವಾದ ಕಂಬಗಳನ್ನು ಹೊಂದಿದ್ದು, ನವರಂಗದ ಒಳಗಡೆ ಯಾವುದೇ ಭುವನೇಶ್ವರಿಯಾಗಲಿ ಬಿಡಿಶಿಲ್ಪಗಳಾಗಲಿ ಕಂಡುಬರುವುದಿಲ್ಲ. ದೇವಾಲಯದ ಮುಂಭಾಗದಲ್ಲಿ ಎರಡು ಅಡಿ ಎತ್ತರದ ಬಲಿಪೀಠವಿದೆ. ದೇವಾಲಯದ ಮಹಾಮಂಟಪದ ಮುಂಭಾಗ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದ್ದು,

ದೇವಾಲಯದ ಸುತ್ತಲೂ ಕೆಲವು ಬಿಡಿ ಶಿಲ್ಪಗಳನ್ನು ಇರಿಸಿದ್ದಾರೆ. ಗಣಪತಿ, ಸರಸ್ವತಿ, ಮುಂತಾದವು.

**ಹಿರಿಯೂರು : ಮಹಾಲಿಂಗೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 6 ಕಿ.ಮೀ. ದೂರದಲ್ಲಿ ಹಿರಿಯೂರು ಗ್ರಾಮವಿದೆ. ಮಹಾಲಿಂಗೇಶ್ವರ ದೇವಾಲಯವು ಗ್ರಾಮದ ಮಾರಮ್ಮನ ದೇವಾಲಯದ ಉತ್ತರ ದಕ್ಕಿನಲ್ಲಿದೆ. ಈ ದೇವಾಲಯವು ಪ್ರಸ್ತುತ ಶಿಥಿಲವಾದ ದೇವಾಲಯವಾಗಿದ್ದು, ಗರ್ಭಗುಡಿಯನ್ನು ಮಾತ್ರ ಹೊಂದಿದೆ.

**ಗರ್ಭಗುಡಿ:–** ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಮರದ ತೊಗಟೆಯಿಂದ ಮಾಡಿದ ಲಿಂಗದ ಆಕೃತಿಯಿರುವುದು ಈ ದೇವಾಲಯದ ವಿಶೇಷವಾಗಿದೆ.(ಚಿತ್ರಸಂಖ್ಯೆ2) ಗ್ರಾಮಸ್ಥರನ್ನು ಇದರ ಬಗ್ಗೆ ವಿಚಾರಿಸಿದಾಗ ಅವರು ನೀಡಿರುವ ಮಾಹಿತಿಯಿಂದ ಲಿಂಗದ ಬದಲು ನೂರಾರು ವರ್ಷಗಳಿಂದಲೂ ಮರದ ತೊಗಟೆಯಿರುವುದು ಕಂಡುಬಂದಿದೆ ಎಂಬುದಾಗಿ ಹೇಳುತ್ತಾರೆ. ಈ ದೇವಾಲಯದ ಮುಂಭಾಗ ಒಂದು ಅಡಿ ಎತ್ತರದ ಏಕಶಿಲಾ ನಂದಿ ವಿಗ್ರಹವಿದೆ.

**ಹೊಳೆಸಾಲು : ಮಹಾಲಿಂಗೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 22 ಕಿ.ಮೀ. ದೂರದಲ್ಲಿ ಹೊಳೆಸಾಲು ಗ್ರಾಮವಿದೆ. ಹೊಳೆಸಾಲು ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ ಮಹಾಲಿಂಗೇಶ್ವರ ದೇವಾಲಯವು ಗ್ರಾಮದ ಪ್ರಾಚೀನ ದೇವಾಲಯವಾದರೂ ಇತ್ತೀಚೆಗೆ ಸಂಪೂರ್ಣ ಜೀರ್ಣೋದ್ಧಾರಗೊಂಡಿರುವ ದೇವಾಲಯವಾಗಿದೆ.

**ಗರ್ಭಗುಡಿ:–** ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಮುಂಭಾಗ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ತೆರೆದ ಅಂತರಾಳದಲ್ಲಿ ಸುಬ್ರಹ್ಮಣ್ಯ, ಗಣಪತಿ ವಿಗ್ರಹಗಳನ್ನು ಇರಿಸಿದ್ದಾರೆ.

**ನವರಂಗ**:-ಈ ದೇವಾಲಯದ ನವರಂಗವು ಯಾವುದೇ ಕಂಬಗಳನ್ನು ಹೊಂದಿಲ್ಲದೆ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿರುವ ದೇವಾಲಯವಾಗಿದೆ.

**ಕಾಳಹುಂಡಿ : ಬನ್ನಿಕಾಳಮ್ಮ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 18 ಕಿ.ಮೀ. ದೂರದಲ್ಲಿ ಕಾಳಹುಂಡಿ ಗ್ರಾಮವಿದೆ. ಈ ದೇವಾಲಯವು ಗ್ರಾಮದ ಮುಖ್ಯರಸ್ತೆಯ ಎಡಭಾಗದಲ್ಲಿದ್ದು, ಪೂರ್ವಾಭಿಮುಖವಾಗಿರುವ ಏಕಕೂಟ ದೇವಾಲಯವಾಗಿದೆ. ದೇವಾಲಯವು ಗರ್ಭಗುಡಿ, ಸುಕನಾಶಿ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ.

**ಗರ್ಭಗುಡಿ**:- ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಸುಮಾರು 3 ಅಡಿ ಎತ್ತರದ ಬನ್ನಿಕಾಳಮ್ಮನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ**:- ಸುಕನಾಸಿಯು 5X5 ಅಡಿ ಸುತ್ತಳತೆಯನ್ನು ಹೊಂದಿದ್ದು, ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

**ನವರಂಗ**:- ನವರಂಗವು 9 ಅಂಕಣಗಳಿಂದ ಕೂಡಿದ್ದು, ಪ್ರಧಾನವಾದ 4 ಕಂಬಗಳು ಹಾಗೂ 12 ಅರೆಗಂಬಗಳನ್ನು ಹೊಂದಿದೆ. ಈ ದೇವಾಲಯದ ನವರಂಗದಲ್ಲಿರುವ ಕಂಭಗಳ ವಿಶೇಷತೆ ಏನೇಂದರೆ ಕಂಬಗಳ ಮೇಲೆ ಸರ್ಪ, ಮೀನಿನ ಚಿತ್ರಗಳನ್ನು ಕೆತ್ತನೆ ಮಾಡಿರುವುದು ಕಂಡುಬರುತ್ತದೆ.

**ಮುಖಮಂಟಪ**:- ಮುಖಮಂಟಪವು 2 ಪ್ರಧಾನ ಕಂಬಗಳನ್ನು 4 ಅರೆಗಂಬಗಳನ್ನು ಹೊಂದಿದೆ. ಮುಖಮಂಟಪದ 4 ಕಂಭಗಳ ಮಧ್ಯಭಾಗದ ಮೇಲ್ಛಾವಣಿಯಲ್ಲಿ ಸುಮಾರು ಒಂದು ಮೀಟರ್ ಉದ್ದದ ಮೀನಿನ ಶಿಲ್ಪವನ್ನು ಸುಂದರವಾಗಿ ಕೆತ್ತನೆ ಮಾಡಲಾಗಿದೆ.

**ಮಡವಾಡಿ : ನಂಜುಂಡೇಶ್ವರ ದೇವಾಲಯ**: ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 25 ಕಿ.ಮೀ. ದೂರದಲ್ಲಿ ಮಡವಾಡಿ ಗ್ರಾಮವಿದೆ. ಮಡವಾಡಿಯ ಈಶಾನ್ಯ ದಿಕ್ಕಿನಲ್ಲಿರುವ ನಂಜುಂಡೇಶ್ವರ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದೆ.

**ಗರ್ಭಗುಡಿ:-** ಗರ್ಭಗುಡಿಯು 6X6 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ನಾಲ್ಕು ಅಡಿ ಎತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು, ಪಾಣಿಪೀಠವು ಕಂಡುಬರುವುದಿಲ್ಲ. ಲಿಂಗದ ಹಿಂಭಾಗ ಇತ್ತೀಚೆಗೆ ಕಂಚಿನಿಂದ ಮಾಡಿಸಲಾದ ಐದು ತಲೆ ನಾಗರಹಾವಿನ ಪ್ರತಿಮೆಯನ್ನು ಇರಿಸಿದ್ದಾರೆ. ತೆರೆದ ಅಂತರಾಳವಿದ್ದು, ಗರ್ಭಗುಡಿಯ ಮುಂಭಾಗ ಸುಕನಾಸಿಯಾಗಲಿ, ನವರಂಗವಾಗಲಿ ಕಂಡುಬರುವುದಿಲ್ಲ. ಭಕ್ತಾಧಿಗಳ ಪೂಜೆ ಸಲ್ಲಿಸಲು ಗರ್ಭಗುಡಿಯ ಮುಂಭಾಗವಿರುವ ತೆರೆದ ಅಂತರಾಳದ ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಸಾಲಾಗಿ ಬರಲು 3 ಅಡಿ ಎತ್ತರದ ಕಬ್ಬಿಣದ ಕಂಬಿಗಳನ್ನು ನಿರ್ಮಿಸಿದ್ದು, ಇದು ಇತ್ತೀಚಿನ ನಿರ್ಮಾಣವಾಗಿದೆ. ದೇವಾಲಯದ ಎಡಭಾಗದಲ್ಲಿ ವೀರಗಲ್ಲುಗಳು ಶಾಸನಗಳಿರುವ ಶಿಲೆಗಳ ಬಿಡಿ ಶಿಲ್ಪಗಳ ರಾವಳೇಶ್ವರನ ಶಿಲ್ಪಗಳು ಕಂಡುಬರುತ್ತದೆ.

**ಮಾವಿನಹಳ್ಳಿ : ಈಶ್ವರ ಗುಡಿ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 12 ಕಿ.ಮೀ. ದೂರದಲ್ಲಿ ಮಾವಿನಹಳ್ಳಿ ಗ್ರಾಮವಿದೆ. ಈಶ್ವರ ಗುಡಿಯು ಮಾವಿನಹಳ್ಳಿ ಪ್ರಾಚೀನ ದೇವಾಲಯವಾದರೂ ಶಿಥಿಲಾವಸ್ಥೆಗೊಂಡು ಇತ್ತೀಚಿನ ದಿನಗಳಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದ್ದು, ಈ ದೇವಾಲಯವು ಗ್ರಾಮದ ವಾಯುವ್ಯ ದಿಕ್ಕಿನಲ್ಲಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಒಂದು ಅಡಿ ಪಾಣಿಪೀಠದ ಮೇಲೆ ಎರಡು ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿತ್ರಸಂಖ್ಯೆ-5) ಲಿಂಗದ ಹಿಂಭಾಗ ಕಂಚಿನಿಂದ ಮಾಡಿಸಿದ ಶಿವನ ಪ್ರತಿಮೆಯಿದ್ದು, ಪ್ರಭಾವಳಿಯಲ್ಲಿ ಐದು ತಲೆಯ ನಾಗರ ಸರ್ಪವಿದೆ. ಇದು ಇತ್ತೀಚಿನದು. ಗರ್ಭಗುಡಿಯ ಮೇಲ್ಭಾಗದಲ್ಲಿ ಕಮಲದ ಮೊಗ್ಗಿನಾಕೃತಿಯ ಆಕಾರದ ಭುವನೇಶ್ವರಿಯಿದೆ.

**ಸುಕನಾಸಿ:-** ಸುಕನಾಸಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಸುಕನಾಸಿಯ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದಲ್ಲಿ ಗರ್ಭಗುಡಿಯಲ್ಲಿರುವ ಲಿಂಗ, ಸುಕನಾಶಿಯಲ್ಲಿರುವ ಏಕಶಿಲಾ ನಂದಿ ವಿಗ್ರಹ

ಬಿಟ್ಟರೆ ಸಂಪೂರ್ಣವಾಗಿ ದೇವಾಲಯದ ಕಟ್ಟಡವನ್ನು ಸಿಮೆಂಟ್ ಇಟ್ಟಿಗೆಗಳಿಂದ ಇತ್ತೀಚೆಗೆ ನಿರ್ಮಿಸಿದ್ದಾರೆ.

**ಮಾರನಪುರ : ಬಸವೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 12 ಕಿ.ಮೀ. ದೂರದಲ್ಲಿ ಮಾರನಪುರ ಗ್ರಾಮವಿದೆ. ಮಾರನಪುರದ ಊರಿನ ಹೊರಗೆ ಈಶಾನ್ಯ ದಿಕ್ಕಿನಲ್ಲಿ ಬಸವೇಶ್ವರ ದೇವಾಲಯವಿದೆ. ಏಕಕೂಟ ಶೈವ ದೇವಾಲಯವಾಗಿದ್ದು ಪೂರ್ವಾಭಿಮುಖವಾಗಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 3X3 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಏಕಶಿಲಾ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯಲ್ಲಿರುವ ನಂದಿ ವಿಗ್ರಹವನ್ನು ಬಿಟ್ಟರೆ ಬೇರೆ ಯಾವುದೇ ರೀತಿಯ ಶಿಲ್ಪಗಳು ಕಂಡುಬರುವುದಿಲ್ಲ. ಇತ್ತೀಚೆಗೆ ಗ್ರಾಮಸ್ಥರು ಈ ನಂದಿ ವಿಗ್ರಹಕ್ಕೆ ದೇವಾಲಯವೊಂದನ್ನು ನಿರ್ಮಿಸಿದ್ದಾರೆ. ದೇವಾಲಯದ ಮುಂಭಾಗ ಮೂರು ಅಡಿ ಎತ್ತರದ ಬಲಿಪೀಠವನ್ನು ಕಾಣಬಹುದು.

**ಮೇದಿನಿ:ವೈದ್ಯನಾಥೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 20 ಕಿ.ಮೀ. ದೂರದಲ್ಲಿ ಮೇದಿನಿ ಗ್ರಾಮವಿದೆ. ಮೇದಿನಿ ಗ್ರಾಮದ ಮಧ್ಯಭಾಗದಲ್ಲಿ ವೈದ್ಯನಾಥೇಶ್ವರ ದೇವಾಲಯವಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಏಕಕೂಟ ಶೈವ ದೇವಾಲಯವಾಗಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.–39) ಗರ್ಭಗುಡಿಯ ಮುಂಭಾಗ ಏಕಶಿಲಾ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. (ಚಿ. ಸಂ.–40) ಗರ್ಭಗುಡಿಯಲ್ಲಿರುವ ಶಿವಲಿಂಗ, ಏಕಶಿಲಾ ನಂದಿ ವಿಗ್ರಹವನ್ನು ಹೊರತುಪಡಿಸಿದರೆ ದೇವಾಲಯದ ಕಟ್ಟಡವು ಇತ್ತೀಚೆಗೆ

ಜೀರ್ಣೋದ್ಧಾರವಾಗಿದೆ. ದೇವಾಲಯದ ಮುಂಭಾಗ ರಾವಣೇಶ್ವರನ ಶಿಲ್ಪಗಳು, ಕೆಲವು ಬಿಡಿಶಿಲ್ಪಗಳ ಶಾಸನವಿರುವ ಕಲ್ಲುಗಳು ಕಂಡು ಬರುತ್ತವೆ.

ಗರ್ಭಗುಡಿಯ ದ್ವಾರದ ಲಲಾಟ ಬಿಂಬದಲ್ಲಿ ಶಿವಲಿಂಗವಿದ್ದು, ಶಿವಲಿಂಗದ ಎರಡೂ ಕಡೆ ಕುಳಿತಿರುವ ನಂದಿಯ ಶಿಲ್ಪಗಳನ್ನು ಕೆತ್ತಲಾಗಿದೆ. ದ್ವಾರಬಂಧದಲ್ಲಿ ಸುರುಳಿಯಾಕಾರದ ರಚನೆಯಿದೆ. ದೇವಾಲಯವು ಜೀರ್ಣೋದ್ಧಾರವಾದರೂ ಗರ್ಭಗುಡಿಯ ದ್ವಾರದಲ್ಲಿ ಮೂಲ ದ್ವಾರವನ್ನು ಇರಿಸಿದ್ದಾರೆ.

**ಸೋಸಲೆ : ಬಸಪ್ಪನ ಗುಡಿ**

ಈ ಗುಡಿಯು ಗ್ರಾಮ ಪಂಚಾಯಿತಿಯ ಬಲಭಾಗದಲ್ಲಿದೆ. ಬಸಪ್ಪನ ಗುಡಿ ಎಂದೇ ಕರೆಯಲ್ಪಡುವ ಈ ಬಸವೇಶ್ವರ ದೇವಾಲಯವು 6 ಕಂಬಗಳಿಂದ ಕೂಡಿದ ಮಂಟಪದ ಮೇಲೊಂದು ದೇವಾಲಯವಿದ್ದು, ಇಲ್ಲಿ ಗರ್ಭಗುಡಿ, ಸುಕನಾಶಿ ಹಾಗೂ ಮುಖಮಂಟಪವಿದೆ.

**ಗರ್ಭಗುಡಿ:–** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿದ್ದು, ಗರ್ಭಗುಡಿ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಏಕಶಿಲಾ ಬಸವನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಸುಕನಾಶಿಯಲ್ಲಿ ಪೂಜಾ ಸಾಮಾಗ್ರಿಗಳನ್ನು ಇಟ್ಟಿದ್ದು, ಮುಖಮಂಟಪದಲ್ಲಿ ಪ್ರಧಾನವಾದ ಎರಡು ಕಂಬಗಳು ಹಾಗೂ ಎರಡು ಅರೆಗಂಬಗಳಿವೆ.

ಗರ್ಭಗುಡಿಯ ಮೇಲೆ ದ್ರಾವಿಡ ಶೈಲಿಯ ವಿಮಾನವಿದೆ. ಗ್ರೀವದ 4 ಮೂಲೆಗಳಲ್ಲಿಯೂ ಸಿಮೆಂಟ್ ಗಾರೆಗಳಿಂದ ನಿರ್ಮಿಸಲಾದಂತಹ ಬಸವನ ವಿಗ್ರಹವನ್ನು ಕೆತ್ತನೆ ಮಾಡಲಾಗಿದೆ. ಶಿಖರವು ವೃತ್ತಾಕಾರವಾಗಿದ್ದು, ನಾಲ್ಕು ದಿಕ್ಕುಗಳಲ್ಲಿಯೂ ಕೀರ್ತಿಮುಖದ ರಚನೆ ಹೊಂದಿದೆ. ಸ್ತೂಪಿಯು ಸಿಮೆಂಟ್ ಗಾರೆಯಿಂದ ನಿರ್ಮಾಣ ಮಾಡಲಾಗಿದೆ. ನೆಲಮಾಳಿಗೆಯಿಂದ ಗರ್ಭಗುಡಿಗೆ ಹೋಗಲು ಮೆಟ್ಟಿಲುಗಳನ್ನು ಮಾಡಿದ್ದಾರೆ.

**ಕೋಟೆ ಗಣಪತಿ**

ಈ ದೇವಾಲಯ ಗ್ರಾಮದ ಮಧ್ಯಭಾಗದಲ್ಲಿದ್ದು, ಕೋಟೆ ಗಣಪತಿ ದೇವಾಲಯವೆಂದೇ ಕರೆಯಲ್ಪಡುವ ಈ ದೇವಾಲಯದಲ್ಲಿ ಗರ್ಭಗುಡಿ, ಸುಕನಾಶಿ, ನವರಂಗಗಳಾಗಲಿ

ಕಂಡುಬರುವುದಿಲ್ಲ. ಸುಮಾರು 6 ಅಡಿ ಅಗಲ ಮತ್ತು 12 ಅಡಿ ಉದ್ದ ವಿಸ್ತೀರ್ಣ ಹೊಂದಿರುವ ಮಂಟಪದ ಪಶ್ಚಿಮದ ದಿಕ್ಕಿನಲ್ಲಿ ದೇವಕೋಷ್ಠವೊಂದನ್ನು ನಿರ್ಮಿಸಿ ಅದರ ಮಧ್ಯಭಾಗದಲ್ಲಿ ಗಣಪತಿಯ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದಾರೆ. ದೇವಕೋಷ್ಠಕದ ಇಕ್ಕೆಲಗಳಲ್ಲಿಯೂ ದ್ರಾವಿಡ ಶೈಲಿಯ ಅರೆಗಂಬಗಳಿದ್ದು, ಮೇಲ್ಭಾಗವು ಕೀರ್ತಿಮುಖದ ರಚನೆಯಿದೆ.

**ತಿರುಮಕೂಡಲು ನರಸೀಪುರ : ಮಹದೇಶ್ವರ ದೇವಾಲಯ**

ಈ ದೇವಾಲಯವು ತಿರುಮಕೂಡಲು ನರಸೀಪುರದ ಎರಡು ನದಿಗಳ ಸಂಗಮದ ಅಂದರೆ ಕಾವೇರಿ ನದಿಯ ಎಡದಂಡೆಯ ಮೇಲೆ ನಿರ್ಮಾಣವಾದ ದೇವಾಲಯವು ಪ್ರಾಚೀನ ದೇವಾಲಯವಾಗಿದ್ದು, ಪುನರ್ ನಿರ್ಮಾಣ ಗೊಂಡಂತಿದೆ. ದೇವಾಲಯವು ಗರ್ಭಗುಡಿ ಮತ್ತು ಸುಕನಾಸಿಯನ್ನು ಮಾತ್ರ ಹೊಂದಿದೆ.

ಗರ್ಭಗುಡಿ: ಈ ಗರ್ಭಗುಡಿಯು 3X3 ಅಡಿ ಸುತ್ತಳತೆಯನ್ನು ಹೊಂದಿರುವ ಮೂಲಗರ್ಭಗುಡಿಯಲ್ಲಿ ಶಿವಲಿಂಗವಿದ್ದು, ಸುಕನಾಸಿಯ ಅಂಕಣದಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ. ಪ್ರಾಯಶಃ ಮತ್ತೆ ಹೊಸದಾಗಿ ನಿರ್ಮಾಣಗೊಂಡಿರುವುದರಿಂದ ಇಲ್ಲಿ ಯಾವುದೇ ರೀತಿಯ ಕಲೆ ಮತ್ತು ವಾಸ್ತುಶಿಲ್ಪ ಕಂಡುಬರುವುದಿಲ್ಲ.

**ತಿರುಮಕೂಡಲು ನರಸೀಪುರ : ಬಳ್ಳೇಶ್ವರಸ್ವಾಮಿ ದೇವಾಲಯ**

ತಿರುಮಕೂಡಲು ನರಸೀಪುರದ ಪೂರ್ವ ದಿಕ್ಕಿನಲ್ಲಿ ತಿ.ನರಸೀಪುರ-ತಲಕಾಡು ರಸ್ತೆಯಲ್ಲಿ ಬಳ್ಳೇಶ್ವರಸ್ವಾಮಿ ದೇವಾಲಯವಿದೆ. ಈ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ ಹಾಗೂ ದೇವಾಲಯದ ಉತ್ತರ ದಿಕ್ಕಿನಲ್ಲಿ ಕಾವೇರಿ ನದಿ ಹರಿಯುತ್ತದೆ.

**ಗರ್ಭಗುಡಿ**:- ಈ ಗರ್ಭಗುಡಿಯು 5X5 ಅಡಿ ಸುತ್ತಳತೆಯನ್ನು ಹೊಂದಿರುವ ದೇವಾಲಯದ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯು ತೆರೆದ ಕಮಲಾಕೃತಿಯ ಭುವನೇಶ್ವರಿಯನ್ನು ಹೊಂದಿದೆ.

**ನವರಂಗ;-** ಗರ್ಭಗುಡಿಯ ಮುಂಭಾಗ ನವರಂಗವಿದ್ದು, 9 ಅಂಕಣಗಳಿಂದ ಕೂಡಿದೆ. ಪ್ರಧಾನವಾಗಿ 4 ಕಂಬಗಳಿದ್ದು, 12 ಅರೆಗಂಬಗಳಿದ್ದು ನವರಂಗದಲ್ಲಿ ಯಾವುದೇ ಶಿಲ್ಪಗಳಿರುವುದಿಲ್ಲ. ನವರಂಗದ ಮುಂಭಾಗದಲ್ಲಿ ಏಕಶಿಲಾ ನಂದಿ ವಿಗ್ರಹವನ್ನು ಇರಿಸಲಾಗಿದೆ.

**ಟಿ. ದೊಡ್ಡಪುರ : ಮಹದೇಶ್ವರ ದೇವಾಲಯ**

ತಿರುಮಕೂಡಲು ನರಸೀಪುರ ತಾಲೂಕು ಕೇಂದ್ರದಿಂದ 10 ಕಿ.ಮೀ. ದೂರದಲ್ಲಿ ಟಿ. ದೊಡ್ಡಪುರ ಗ್ರಾಮವಿದೆ. ಟಿ. ದೊಡ್ಡಪುರದ ಗ್ರಾಮದ ಆಗ್ನೇಯ ದಿಕ್ಕಿನಲ್ಲಿ ಮಹದೇಶ್ವರ ದೇವಾಲಯವಿದೆ. ಇದು ಏಕಕೂಟ ಶೈವ ದೇವಾಲಯವಾಗಿದೆ.

**ಗರ್ಭಗುಡಿ:-** ಈ ಗರ್ಭಗುಡಿಯು 4X4 ಅಡಿ ಸುತ್ತಳತೆಯನ್ನು ಹೊಂದಿರುವ ಈ ದೇವಾಲಯದ ಗರ್ಭಗುಡಿಯಲ್ಲಿ ಒಂದು ಅಡಿ ಎತ್ತರದ ಪಾಣಿಪೀಠದ ಮೇಲೆ ಎರಡು ಅಡಿ ಎತ್ತರದ ಶಿವಲಿಂಗವನ್ನು ಹೊಂದಿದೆ. ಶಿವಲಿಂಗವನ್ನು ಹೊರತುಪಡಿಸಿದರೆ ಈ ದೇವಾಲಯದ ಸಂಪೂರ್ಣ ಕಟ್ಟಡ ಇತ್ತೀಚೆಗೆ ಸಿಮೆಂಟ್ ಇಟ್ಟಿಗೆಗಳಿಂದ ನಿರ್ಮಿಸಿದ್ದಾರೆ. ದೇವಾಲಯದಲ್ಲಿ ಗರ್ಭಗುಡಿ ಸುಖನಾಸಿಯಿದ್ದು, ಗರ್ಭಗುಡಿಯ ಮೇಲ್ಭಾಗ ತೆರೆದ ಕಮಲಾಕೃತಿಯ ಭುವನೇಶ್ವರಿಯಿದೆ.

**ಸುಕನಾಸಿ:-** ಈ ಸುಕನಾಸಿಯು 3X3 ಅಡಿ ಸುತ್ತಳತೆಯನ್ನು ಹೊಂದಿರುವ ದೇವಾಲಯದ ಮುಂಭಾಗ ಒಂದು ಅಡಿ ಎತ್ತರದ ತಲೆಕೆಳಗಾದ ಆಕೃತಿಯ ಬಲಿಪೀಠವಿದೆ. ದೇವಾಲಯದ ಸುತ್ತಲೂ 5 ಅಡಿ ಎತ್ತರದ ಪ್ರಾಕಾರವನ್ನು ಇಟ್ಟಿಗೆ ಸಿಮೆಂಟ್‌ಗಳಿಂದ ಇತ್ತೀಚೆಗೆ ನಿರ್ಮಿಸಲಾಗಿದೆ. ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಒಂದು ಕೊಳವಿದೆ.

**ಉಕ್ಕಲಗೆರೆ : ಶ್ರೀ ಮಹದೇಶ್ವರ ದೇವಾಲಯ**

ಈ ಗ್ರಾಮವು ತಿರುಮಕೂಡಲು ನರಸೀಪುರದಿಂದ 10 ಕಿ.ಮೀ ದೂರದಲ್ಲಿದೆ. ಈ ಗ್ರಾಮವನ್ನು ಪ್ರವೇಶಿಸುವ ಮೊದಲೇ ಇರುವ ಈ ಶ್ರೀಮಹದೇಶ್ವರ ದೇವಾಲಯವು ಪ್ರಾಚೀನ ದೇವಾಲಯವಾಗಿದೆ. ಈ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ.

**ಗರ್ಭಗುಡಿ**:- ಈ ಗರ್ಭಗುಡಿಯು 5X3 ಅಡಿ ಸುತ್ತಳತೆಯನ್ನು ಹೊಂದಿರುವ ಗರ್ಭಗುಡಿಯಲ್ಲಿ ಒಂದು ಅಡಿ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

**ಸುಕನಾಸಿ**:- ಈ ಸುಕನಾಸಿಯು 5X3 ಅಡಿ ಸುತ್ತಳತೆಯನ್ನು ಹೊಂದಿರುವ ಸುಕನಾಸಿಯ ಮಧ್ಯಭಾಗದಲ್ಲಿ ಏಕಶಿಲಾ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ.

**ನವರಂಗ**:- ನವರಂಗವು 4 ಕಂಬಗಳನ್ನು ಹೊಂದಿದ್ದು, 9 ಅಂಕಣಗಳಿಂದ ಕೂಡಿದೆ. ನವರಂಗದ ಬಲಭಾಗದಲ್ಲಿ ಗಣಪತಿ ಪ್ರತಿಮೆಯನ್ನು ಇರಿಸಲಾಗಿದೆ. ಮುಖಮಂಟಪದ ಲಲಾಟಬಿಂಬದಲ್ಲಿ ಲಿಂಗವನ್ನು ಕೆತ್ತನೆ ಮಾಡಲಾಗಿದೆ. ಉತ್ತುಂಗದಲ್ಲಿ ಕುಳಿತಿರುವ ಬಸವನನ್ನು ಕೆತ್ತನೆ ಮಾಡಲಾಗಿದೆ. ದೇವಾಲಯದ ಮುಂಭಾಗ ಬಲಿಪೀಠವಿದ್ದು, 14 ಅಡಿ ಎತ್ತರದ ದೀಪಸ್ತಂಭವಿದೆ. ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ನವಗ್ರಹ ಮಂಟಪ ಹಾಗೂ ವಾಯುವ್ಯ ದಿಕ್ಕಿನಲ್ಲಿ ತೆರೆದ ಬಾವಿ ಇದೆ.

## ಅಡಿ ಟಿಪ್ಪಣಿಗಳು

1) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ, ಪು.ಸಂ-202

2) ದೇವರಕೊಂಡಾರೆಡ್ಡಿ "ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ" ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು=1994ಪು.ಸಂ.-44

3) ಹೆಚ್. ಎಂ ನಾಗರಾಜ್- ತಲಕಾಡು ದರ್ಶನ, ಹೇಮಶ್ರೀ ಪ್ರಕಾಶನ 2010. ಪು.ಟ. ಸಂ.28

4) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ, ಪು.ಸಂ.-207

5) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ, ಪು.ಸಂ.-208

6) ದೇವರಕೊಂಡಾರೆಡ್ಡಿ, ಪೂರ್ವೋಕ್ತ, ಪು.ಸಂ.-129

7) ಕೃಷ್ಣಮೂರ್ತಿ, ಎಂ.ಎಸ್.ರವರ ಅಭಿಪ್ರಾಯ.

8) ಎ.ಕ.ಸಂ.5- ಶಾಸನ ಸಂಖ್ಯೆ-307

9) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-169

10) ಎಂ. ಎ. ಆರ್. 1910- ಪುಟಸಂಖ್ಯೆ-10,11

11) ಎಂ. ಎ. ಆರ್. 1912- ಪುಟಸಂಖ್ಯೆ-6,7

12) ಎ.ಕ.ಸಂ.5- ಶಾಸನ ಸಂಖ್ಯೆ-56

13) ರಾಜೇಂದ್ರಪ್ಪ,ಎಸ್-ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರ್- ಕರ್ನಾಟಕ ಸರ್ಕಾರ, 2010, ಪು. ಸಂ-218

14) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-223

15) ಎಂ. ಎ. ಆರ್. 1912- ಪುಟ ಸಂಖ್ಯೆ-36

16) ರಾಜೇಂದ್ರಪ್ಪ. ಎಸ್.-ಪೂರ್ವೋಕ್ತ, ಪು. ಸಂ-235

17) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

18) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

19) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-186

20)ಎ.ಕ.ಸಂ.5- ಶಾಸನ ಸಂಖ್ಯೆ-262

21) ಎ.ಕ.ಸಂ.5- ಶಾಸನ ಸಂಖ್ಯೆ-261

22) ಎ.ಕ.ಸಂ.5- ಶಾಸನ ಸಂಖ್ಯೆ-264

23) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ, ಪು. ಸಂ-225

24) ಎ.ಕ.ಸಂ.5- ಶಾಸನ ಸಂಖ್ಯೆ-136

25) ಎ.ಕ.ಸಂ.5- ಶಾಸನ ಸಂಖ್ಯೆ-239

26)ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

27)ಕಾರ್ಕೊಳು ರಾಘವೇಂದ್ರ - ದಕ್ಷಿಣ ಪ್ರಯಾಗ. ತಿರುಮಕೂಡಲು ಕ್ಷೇತ್ರ-1992, ಪು. ಸಂ-18

28) ಅಗಸ್ತ್ಯೇಶ್ವರ ದೇವಾಲಯದ ಅರ್ಚಕರ ಹೇಳಿಕೆಯ ವಿವರಣೆಗಳು.

29) ಎ.ಕ.ಸಂ.5, ಶಾಸನ ಸಂಖ್ಯೆ 22, (ತಿ.ನ.148)

30) ರಂಗಸ್ವಾಮಿ, ಎಸ್. ಸಂಪಾದಕ–ಕರ್ನಾಟಕದ ದೇವಾಲಯಗಳು-ಮತ್ತು ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, 1979, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಪು. ಸಂ-1144

31) ಅಗಸ್ತ್ಯೇಶ್ವರ ಮತ್ತು ಹನುಮಂತೇಶ್ವರ ದೇವಾಲಯದ ಅರ್ಚಕರ ಹೇಳಿಕೆಯ ಪ್ರಕಾರ ಬರೆಯಲಾಗಿದೆ.

32) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-185

33) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ,-ಪು. ಸಂ-222

34) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

35) ಮಲ್ಲಿಕಾರ್ಜುನ ದೇವಾಲಯದ ಅರ್ಚಕರ ಹೇಳಿಕೆ

36) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

37) ತಲಕಾಡು ದರ್ಶನ- ಹೆಚ್. ಎಂ ನಾಗರಾಜ್ , ಹೇಮಶ್ರೀ ಪ್ರಕಾಶನ 2010. ಪುಟ ಸಂ-29

38) ಶೆಟ್ಟರ್, ಎಸ್. "ಸೋಮನಾಥಪುರ" ಅಭಿನವ ಪ್ರಕಾಶನ ಬೆಂಗಳೂರು, 2008, ಪು. ಸಂ-21

39) ಮೈಸೂರು ನಾಗರಾಜಶರ್ಮ-ಹೊಯ್ಸಳ ಶಿಲ್ಪದಲ್ಲಿ ಶಿವ, ಮೈ.ವಿ.ವಿ., 2010, ಪ್ರಸಾರಾಂಗ, ಪು.ಸಂ.147-148.

40) ಎ.ಕ.ಸಂ.5- ಶಾಸನ ಸಂಖ್ಯೆ-53

41) ರಾಜೇಂದ್ರಪ್ಪ, ಎಸ್.- ಪೂರ್ವೋಕ್ತ, ಪು. ಸಂ-219

42) ಎಂ. ಎ. ಆರ್. 1910- ಪುಟಸಂಖ್ಯೆ-10,11

43) ಎ.ಕ.ಸಂ.5- ಶಾಸನ ಸಂಖ್ಯೆ-100

44) ಎ.ಕ.ಸಂ.5- ಶಾಸನ ಸಂಖ್ಯೆ-98

45) ಎ.ಕ.ಸಂ.5- ಶಾಸನ ಸಂಖ್ಯೆ-238

46) ಎ.ಕ.ಸಂ.5- ಶಾಸನ ಸಂಖ್ಯೆ-287

47) ಮಾರ್ಗದರ್ಶಕರ ಹೇಳಿಕೆಯ ಪ್ರಕಾರ ಬರೆಯಲಾಗಿದೆ.

48) ರಾಜೇಂದ್ರಪ್ಪ, ಎಸ್.- ಪೂರ್ವೋಕ್ತ, ಪು.ಸಂ-220

49) ಎ.ಕ.ಸಂ.5- ಶಾಸನ ಸಂಖ್ಯೆ-318

50) ಎ.ಕ.ಸಂ.5- ಶಾಸನ ಸಂಖ್ಯೆ-319

51) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-207

52) ರಾಜೇಂದ್ರಪ್ಪ. ಎಸ್.- ಪೂರ್ವೋಕ್ತ, ಪು. ಸಂ-233

53) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

54) ಎ.ಕ.ಸಂ.5- ಶಾಸನ ಸಂಖ್ಯೆ-30

55) ಎ.ಕ.ಸಂ.5- ಶಾಸನ ಸಂಖ್ಯೆ-293

56) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

57) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-207

58) ಬಸವರಾಜು, ಬಿ, ತಗರಪುರ-ಚೋಳರ ಕಲೆ ಮತ್ತು ವಾಸ್ತುಶಿಲ್ಪ, ನಂದಿ ಬುಕ್ ಹೌಸ್, 2008, ಪು. ಸಂ-130

59) ಬಸವರಾಜು, ಬಿ, ತಗರಪುರ-ಐತಿಹ್ಯ ದರ್ಶನ, ಸುನಿಲ್ ಪ್ರಕಾಶನ, 2008, ಪು. ಸಂ-73

60) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

61) ದೇವರಕೊಂಡಾರೆಡ್ಡಿ ಪೂರ್ವೋಕ್ತ, ಪು. ಸಂ-187

62) ಎ.ಕ.ಸಂ.5- ಶಾಸನ ಸಂಖ್ಯೆ-271

63) ರಾಜೇಂದ್ರಪ್ಪ, ಎಸ್.- ಪೂರ್ವೋಕ್ತ, ಪು. ಸಂ-224

64) ಎಂ.ಎ.ಆರ್. 1912, ಪು. ಸಂ.-31, ಎ.ಕ. ಸಂ.5, ಶಾ.ಸಂ. 262

65) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

66) ರಾಜೇಂದ್ರಪ್ಪ, ಎಸ್.- ಪೂರ್ವೋಕ್ತ, ಪು.ಸಂ-220

67) ಶೆಟ್ಟರ್, ಎಸ್.- ಪೂರ್ವೋಕ್ತ, ಪು.ಸಂ-29

68) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

69) ಶೆಟ್ಟರ್, ಎಸ್.- ಪೂರ್ವೋಕ್ತ, ಪು.ಸಂ-14

70) ಎಂ.ಎ.ಆರ್. 1910, ಪು.ಸಂ. 09

71) ಶೆಟ್ಟರ್, ಎಸ್. ಪೂರ್ವೋಕ್ತ, ಪು. ಸಂ–73

72) ಪ್ರಬುದ್ಧ ಕರ್ನಾಟಕ, ಪ್ರಸಾರಾಂಗ, ಮೈ.ವಿ.ವಿ., ಪು. ಸಂ–32

73) ಶೆಟ್ಟರ್, ಎಸ್.– ಪೂರ್ವೋಕ್ತ, ಪು.ಸಂ.–97

74) ಶೆಟ್ಟರ್, ಎಸ್.– ಪೂರ್ವೋಕ್ತ, ಪು.ಸಂ.–108

75) ಶೆಟ್ಟರ್, ಎಸ್.– ಪೂರ್ವೋಕ್ತ, ಪು.ಸಂ–82

76) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

77) ಜಯದೇವಪ್ಪ ಜೈನಕೇರಿ, ಕರ್ನಾಟಕ ಶಿಲ್ಪ–ಸಂಸ್ಕೃತಿ. ಶಾಂತಲ ಪ್ರಕಾಶನ, 2009. ಪು.ಸಂ.99

78) ಎ.ಕ.ಸಂ.5– ಶಾಸನ ಸಂಖ್ಯೆ 249

79) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

80) ಎ.ಕ.ಸಂ.5– ಶಾಸನ ಸಂಖ್ಯೆ 278

81) ಎ.ಕ.ಸಂ.5– ಶಾಸನ ಸಂಖ್ಯೆ 285

82) ಬಸವರಾಜು ತಗರಪುರ, ಪೂರ್ವೋಕ್ತ, ಪು.ಸಂ.154

83) ಬಸವರಾಜು ತಗರಪುರ, ಪೂರ್ವೋಕ್ತ, ಪು.ಸಂ.185

84) ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿ

85) ಡಾ.ಗುರುರತ್ನ ಬಾಬು– ತಲಕಾಡಿನ ಗಂಗರಸರ ಸಾಂಸ್ಕೃತಿಕ ಪರಂಪರೆ, ಸಂಜಯ ಪ್ರಕಾಶನ, 2007, ಪು.91

86) ಬಸವರಾಜು, ಬಿ ತಗರಪುರ– ಐತಿಹ್ಯ ದರ್ಶನ – ಸುನೀಲ್ ಪ್ರಕಾಶನ, ಮೈಸೂರು, 2008, ಪು.ಸಂ.73

87) ಎಂ.ಎ.ಆರ್. 1912 ಪು.ಸಂ. 28

೮೮) ಕಾರ್ಕೊಳು ರಾಘವೇಂದ್ರ, ದಕ್ಷಿಣ ಪ್ರಯಾಗ. ತಿರುಮಕೂಡಲು ಕ್ಷೇತ್ರ-1992, ಪು ಸಂ.91, 92

೮೯) ಎ.ಕ.ಸಂ.5, ಶಾಸನ ಸಂಖ್ಯೆ 15

೯೦) ಎ.ಕ.ಸಂ.5, ಶಾಸನ ಸಂಖ್ಯೆ 16

91) ಕರಿಯಪ್ಪ, ಜಿ.- ಹೊಯ್ಸಳರ ಆಳ್ವಿಕೆಯಲ್ಲಿ ಜೈನರ ಕಲೆ ಮತ್ತು ವಾಸ್ತುಶಿಲ್ಪ, ಅಪ್ರಕಟಿತ ಪಿಎಚ್.ಡಿ. ಸಂಶೋಧನಾ ಪ್ರಬಂದ, ಮೈ.ವಿ.ವಿ. ಪು.ಸಂ-194

೯2) ಬಸವರಾಜು, ಬಿ. ತಗರಪುರ - ಪೂರ್ವೋಕ್ತ, ಪು-156

# ಅಧ್ಯಾಯ–4

## ವೀರಗಲ್ಲುಗಳು, ಮಹಾಸತಿಕಲ್ಲುಗಳು ಹಾಗೂ ಬಿಡಿಶಿಲ್ಪಗಳು

**ವೀರಗಲ್ಲುಗಳು:**

ವೀರ ಎಂದರೆ ವಿಶಿಷ್ಟವಾದ ಪರಾಕ್ರಮದ, ಯುದ್ಧ ನೈಪುಣ್ಯವಿರುವ ಹಾಗೂ ಸಾಹಸ ಕೆಲಸಗಳನ್ನು ಮಾಡುವ ಯೋಧ ಎಂಬ ಅಭಿಪ್ರಾಯ ಮೂಡುವುದು ಸಾಮಾನ್ಯ. ಆದರೆ ಈ ಪದವನ್ನು ಸಾಮಾಜಿಕ ಜೀವನದ ಚೌಕಟ್ಟಿಗೆ ಸೇರಿಸಿ ನೋಡಿದಾಗ ಅದರ ಅರ್ಥ ವಿಶಾಲಗೊಳ್ಳುತ್ತದೆ. ವೀರತ್ವದಲ್ಲಿ ಶೌರ್ಯದ ಜೊತೆಗೆ ಸಾಮಾಜಿಕ ಜೀವನದ ಉದಾತ್ತಮೌಲ್ಯಗಳು ಅಡಗಿವೆ. ಈ ಅರ್ಥದಲ್ಲಿ ದೇಶಕ್ಕಾಗಿ, ತನ್ನ ಒಡೆಯನಿಗಾಗಿ, ಸಮಾಜದ ಅಭಿವೃದ್ಧಿಗಾಗಿ, ಸಾಮಾಜಿಕ ಮೌಲ್ಯಗಳ ರಕ್ಷಣೆ ಹಾಗೂ ಸ್ಥಾಪನೆಗಾಗಿ ತಮ್ಮ ಪ್ರಾಣವನ್ನೆ ಮುಡಿಪಾಗಿಟ್ಟು ಹೋರಾಡಿ ಮಡಿದ ವ್ಯಕ್ತಿಗಳನ್ನು ವೀರರು ಎಂದು ಕರೆಯಲಾಗುತ್ತದೆ.[1] ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಕೇವಲ ಹೋರಾಟದಲ್ಲಿ ಮಡಿದ ವ್ಯಕ್ತಿಗಳನ್ನು ಮಾತ್ರವಲ್ಲದೆ ಅರಸರ ಹಿತರಕ್ಷಣೆಗಾಗಿಯೋ, ವೈಯಕ್ತಿಕ ಮೋಕ್ಷಾಪೇಕ್ಷೆಯಿಂದಲೋ, ಊರಿನ ಅನಿಷ್ಟಗಳ ನಿವಾರಣೆಗಾಗಿಯೋ ತಮ್ಮನ್ನು ತಾವೇ ಹಿಂಸಾತ್ಮಕ ರೀತಿಯಲ್ಲಿ ಆತ್ಮಬಲಿ ಮಾಡಿಕೊಂಡು ಮಡಿದ ವ್ಯಕ್ತಿಗಳನ್ನು ವೀರರೆಂದೇ ಪರಿಗಣಿಸಲಾಗುತ್ತದೆ.[2] ಇಲ್ಲಿ ಇವರ ಸಾವಿನ ರೀತಿಯನ್ನು ಪರಿಗಣಿಸದೆ ಸಾವಿನ ಹಿಂದೆ ಇವರ ಮನೋಧರ್ಮ, ಅವರ ಬಗ್ಗೆ ಜನರಲ್ಲಿ ಮೂಡಿದ ಗೌರವ ಭಾವನೆಯನ್ನು ಗುರುತಿಸಿದಾಗ ಇವರು ಯುದ್ಧ ವೀರರಿಗೆ ಸಮನಾದ ವೀರರು ಎಂಬುದರಲ್ಲಿ ಸಂಶಯವಿಲ್ಲ.[3] ಇಂತಹ ವೀರ ಪರಂಪರೆಯ ಬಗ್ಗೆ ಪ್ರಾಚೀನ ಕಾಲದಿಂದಲೂ ನಮ್ಮ ಸಮಾಜದಲ್ಲಿ ಅಪಾರವಾದ ಗೌರವವಿದೆ. ಇವರಿಗಾಗಿಯೇ ವೀರಸ್ವರ್ಗದ ಕಲ್ಪನೆ ಹುಟ್ಟಿಕೊಂಡಿದೆ. "ಧರ್ಮವೀರನಿಗೆ ಲಭಿಸುವ ಮೋಕ್ಷವು ಧಾರ್ಮಿಕ ಹಾಗೂ ಲೌಕಿಕ ಬಲಿದಾನಗಳಿಂದಲೂ ಲಭಿಸುತ್ತದೆ" ಎಂಬ ನಂಬಿಕೆಗಳು ಬೆಳೆದವು. ಇಂತಹ ವೀರರ ಸ್ಮರಣಾರ್ಥ ನಿರ್ಮಿಸಿರುವ ಸ್ಮಾರಕಗಳನ್ನು ವೀರಸ್ಮಾರಕಗಳು ಎಂದು ಕರೆಯಲಾಗಿವೆ. ಇವು ಇಂದಿಗೂ ಉಳಿದುಕೊಂಡು ಬಂದಿದ್ದು, ವೀರಪರಂಪರೆಯ ಬಗ್ಗೆ ವಿಶ್ವಾಸನೀಯ ಮಾಹಿತಿ ನೀಡುತ್ತವೆ.

ವೀರಗಲ್ಲುಗಳ ದೃಷ್ಟಿಯಿಂದ ವೀರ ಸ್ಮಾರಕಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು.

1) ಹೋರಾಟದಲ್ಲಿ ಮಡಿದ ವೀರರ ಸ್ಮಾರಕ ಶಿಲೆಗಳು.

2) ಉದಾತ್ತ ಕಾರಣಕ್ಕಾಗಿ ಹಿಂಸಾತ್ಮಕ ರೀತಿಯಲ್ಲಿ ಆತ್ಮಬಲಿ ಮಾಡಿಕೊಂಡು ಮಡಿದವರ ಸ್ಮಾರಕ ಶಿಲೆಗಳು.

ಮೊದಲನೆಯ ಗುಂಪಿನ ವೀರ ಸ್ಮಾರಕಗಳನ್ನು ವೀರರ ಸಾವಿಗೆ ಕಾರಣವಾದ ವೀರ ಕೃತ್ಯಗಳನ್ನು ಗಮನದಲ್ಲಿಟ್ಟುಕೊಂಡು ಕೆಳಗಿನಂತೆ ವಿಂಗಡಿಸಬಹುದು.

1. ಕಳ್ಳರೊಡನೆ ಹೋರಾಡಿ ಮಡಿದ ವೀರರ ವೀರಗಲ್ಲುಗಳು
2. ಪೆಣ್ಬುಯ್ಯಲಿನಲ್ಲಿ ಮಡಿದ ವೀರರ ವೀರಗಲ್ಲುಗಳು
3. ಸೀಮಾ ಸಂಬಂಧದ ಕಾಳಗದಲ್ಲಿ ಮಡಿದ ವೀರರ ವೀರಗಲ್ಲುಗಳು
4. ಊರಹುಯ್ಯಲಿನಲ್ಲಿ ಸತ್ತ ವೀರರ ವೀರಗಲ್ಲುಗಳು
5. ನೀರಿನಲ್ಲಿ ಸತ್ತ ವೀರರ ವೀರಗಲ್ಲುಗಳು
6. ಬೇಟೆಯಲ್ಲಿ ಸತ್ತ ವೀರರ ವೀರಗಲ್ಲುಗಳು
7. ತುರುಗಾಳಗದಲ್ಲಿ ಸತ್ತ ವೀರರ ವೀರಗಲ್ಲುಗಳು
8. ಯುದ್ಧದಲ್ಲಿ ಸತ್ತ ವೀರರ ವೀರಗಲ್ಲುಗಳು

ಎರಡನೇ ಗುಂಪಿನ ವೀರರ ಸ್ಮಾರಕಗಳನ್ನು ಆತ್ಮಬಲಿಯ ಉದ್ದೇಶದ ಆಧಾರದ ಮೇಲೆ ಎರಡು ವಿಧಗಳಾಗಿ ವಿಂಗಡಿಸಬಹುದು.

1. ಧಾರ್ಮಿಕ ಬಲಿದಾನದ ಸ್ಮಾರಕ ಶಿಲೆಗಳು
2. ಸಾಮಾಜಿಕ ಬಲಿದಾನದ ಸ್ಮಾರಕ ಶಿಲೆಗಳು

**ಸ್ವರೂಪದ ದೃಷ್ಟಿಯಿಂದ ವೀರಗಲ್ಲುಗಳನ್ನು ಕೆಳಗಿನಂತೆ ವಿಂಗಡಿಸಬಹುದು.**

1. ಶಾಸನರಹಿತವಾಗಿ ಶಿಲ್ಪ ಮಾತ್ರವೇ ಇರುವ ವೀರಗಲ್ಲುಗಳು
2. ಶಾಸನಸಹಿತವಾದ ವೀರಗಲ್ಲುಗಳು
3. ಶಿಲ್ಪರಹಿತವಾದ ಶಾಸನ ಮಾತ್ರವೇ ಇರುವ ವೀರಗಲ್ಲುಗಳು

ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕು ಪ್ರಾಚೀನ ಕಾಲದಿಂದಲೂ ವೀರಗಲ್ಲುಗಳ ಪರಂಪರೆ ಉಳಿದುಕೊಂಡು ಬಂದಿದೆ. ಈ ಬಗ್ಗೆ ಮಾಹಿತಿ ನೀಡುವ ಅಪಾರ ಆಕರಗಳು ದೊರೆಯುತ್ತವೆ. ಮೇಲ್ಕಂಡ ಮಾಹಿತಿ ಆಧಾರದ ಮೇಲೆ ಹಾಗೂ ಮಾರ್ಗದರ್ಶಕರ ಸಲಹೆಯಂತೆ ವೀರಗಲ್ಲುಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಹಲವಾರು ಹೊಸ ವಿಚಾರಗಳನ್ನು ಬೆಳಕಿಗೆ ತರುವ ಪ್ರಾಮಾಣಿಕ ಪ್ರಯತ್ನ ಮಾಡಲಾಗುವುದು.

**ಅಕ್ಕೂರು**

ಅಕ್ಕೂರು ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 10 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಚೋಳೇಶ್ವರ ದೇವಾಲಯದ ಹಿಂಭಾಗದಲ್ಲಿರುವ ವೀರಗಲ್ಲು 4 ಅಡಿ ಎತ್ತರ, 3ಅಡಿ ಅಗಲ, 5 ಇಂಚು ದಪ್ಪವಾಗಿದ್ದು, ಒರಟಾದ ಬೆಣಚುಕಲ್ಲನ್ನು ಬಳಸಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದ್ದು, ಮೊದಲನೇ ಹಂತದಲ್ಲಿ ವೀರರ ಹೋರಾಟದ ದೃಶ್ಯವಿದ್ದು, ಬಲಭಾಗದ ವೀರ ಖಡ್ಗ, ಗುರಾಣಿಯನ್ನು ಹಿಡಿದು ಹೋರಾಟದ ಭಂಗಿಯಲ್ಲಿದ್ದಾನೆ. ಎಡಭಾಗದ ವೀರನು ಈಟಿ ಮತ್ತು ಗುರಾಣಿಯನ್ನು ಹಿಡಿದಿದ್ದಾನೆ.

2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದ್ಯೊಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಮಧ್ಯಭಾಗದಲ್ಲಿ ಲಿಂಗ ಮತ್ತು ಪೂಜಿಸುತ್ತಿರುವ ಭಕ್ತ ಎಡಭಾಗದಲ್ಲಿ ಬಸವನ ಶಿಲ್ಪವಿದೆ.

**ಅಕ್ಕೂರು**

ಅದೇ ಗ್ರಾಮದ ಅನತಿ ದೂರದಲ್ಲಿ ಚೋಳೇಶ್ವರ ದೇವಾಲಯದ ಹಿಂಭಾಗದಲ್ಲಿ ಬಿದ್ದಿರುವ 2ನೇ ವೀರಗಲ್ಲು 7 ಅಡಿ ಎತ್ತರ, 2 ಅಡಿ 6 ಅಂಗುಲ ಅಗಲ, 4 ಇಂಚು ದಪ್ಪವನ್ನು ಹೊಂದಿದ್ದು, ಬಿಳಿಅರೆಕಲ್ಲಿನಿಂದ ಬಳಸಲಾಗಿದೆ.

ಮೊದಲ ಹಂತದಲ್ಲಿ ಖಡ್ಗ ಹಿಡಿದು ದಾಳಿ ಮಾಡುತ್ತಿರುವ ಕುದುರೆ ವೀರನನ್ನು ಎದುರಿಸಿ ನಿಂತ ಖಡ್ಗ ಗುರಾಣಿ ಹಿಡಿದ ವೀರನ ಶಿಲ್ಪವಿದೆ. ಈತನ ಹಿಂಭಾಗದಲ್ಲಿ ರಾಜ ಛತ್ರಿ ಹಿಡಿದ ಸೈನಿಕನ ಶಿಲ್ಪವಿದ್ದು, ಈತ ಸತ್ತಿಗೆ ಮಾನ್ಯ (ವೀರರ ರಾಜಮರ್ಯಾದೆ) ವೀರನಾಗಿದ್ದಾನೆ ಎಂಬುದನ್ನು ತಿಳಿಸುತ್ತದೆ.

2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಎತ್ತಿ ಹಾರುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ ಮತ್ತು ಆತನಿಗೆ ಚಾಮರ ಸೇವೆ ಮಾಡುತ್ತಿರುವ ಅಪ್ಸರೆಯರ ಶಿಲ್ಪವಿದೆ.(ಚಿತ್ರ ಸಂ. 41)

**ಅಕ್ಕೂರು**

ಅದೇ ಗ್ರಾಮದಲ್ಲಿ 3ನೇ ವೀರಗಲ್ಲು 5ಅಡಿ ಅಗಲ, 5 ಅಡಿ ಎತ್ತರ, 6 ಇಂಚು ದಪ್ಪವಾಗಿ ಬಿಳಿ ಬೆಣಚುಕಲ್ಲಿನಿಂದ ಬಳಸಲಾಗಿದೆ. ಇದು 3 ಹಂತಗಳನ್ನೊಂದಿದೆ.

ಎಡಭಾಗದಲ್ಲಿ ಬಿಲ್ಲು ಬಾಣವನ್ನು ಹಿಡಿದ ವೀರನನ್ನು ಖಡ್ಗ ಗುರಾಣಿಯನ್ನು ಹಿಡಿದ ವೀರ ಎದುರಿಸಿ ನಿಂತಿದ್ದಾನೆ. ಮಧ್ಯಭಾಗದಲ್ಲಿಯೂ ಬಿಲ್ಲು ಬಾಣವನ್ನು ಹಿಡಿದ ವೀರ ಹಾಗೂ ಖಡ್ಗ ಗುರಾಣಿಯನ್ನು ಹಿಡಿದ ವೀರರು ಹೋರಾಡುತ್ತಿದ್ದಾರೆ. ಬಲಭಾಗದಲ್ಲಿ ಕುದುರೆಯ ಮೇಲೆ ಕುಳಿತ ವೀರನು ಈಟಿಯನ್ನು ಹಿಡಿದು ವೀರ ಮತ್ತು ಗುರಾಣಿ, ಈಟಿಯನ್ನು ಹಿಡಿದ ವೀರ ಪರಸ್ಪರ ಹೋರಾಟದಲ್ಲಿ ತೊಡಗಿದ್ದಾರೆ.

2ನೇ ಹಂತದಲ್ಲಿ 3 ಮಂದಿ ವೀರರನ್ನು ಕೈಹಿಡಿದು ಸ್ವರ್ಗಕ್ಕೆ ಕರೆದ್ಯೊಯ್ಯುತ್ತಿರುವ 3 ಮಂದಿ ಅಪ್ಸರೆಯರ(ದೇವಕನ್ಯೆ) ಶಿಲ್ಪವಿದೆ.

3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ 3 ಮಂದಿ ವೀರರು ಮಧ್ಯಭಾಗದಲ್ಲಿ ಲಿಂಗ ಮತ್ತು ದೂಪದ ಆರತಿ ಮತ್ತು ಗಂಟೆಯನ್ನು ಹಿಡಿದು ಪೂಜಿಸುತ್ತಿರುವ ಭಕ್ತನ ಶಿಲ್ಪವಿದೆ. ಎಡಭಾಗದಲ್ಲಿ ಬಸವ ಮತ್ತು ಕೈಮುಗಿದು ನಿಂತಿರುವ ವ್ಯಕ್ತಿಯ ಶಿಲ್ಪವಿದೆ.

**ಅಕ್ಕೂರು**

ಅದೇ ಗ್ರಾಮದ ಚೋಳೇಶ್ವರ ದೇವಾಲಯದ ಹಿಂಭಾಗದಲ್ಲಿ 5 ಅಡಿ ಎತ್ತರ, 3 ಅಡಿ ಅಗಲ, ಮತ್ತು 5 ಇಂಚು ದಪ್ಪವಾಗಿದ್ದು, ಬೆಣಚುಕಲ್ಲಿನಿಂದ ಬಳಸಲಾಗಿದೆ. ಈ ವೀರಗಲ್ಲು 3 ಹಂತಗಳನ್ನೊಂದಿದೆ. ಮೊದಲನೆಯ ಹಂತದಲ್ಲಿ ಖಡ್ಗವನ್ನು ಹಿಡಿದ ಕುದುರೆ ವೀರನನ್ನು ಗುರಾಣಿ ಈಟಿ ಹಿಡಿದ ವೀರನೊಬ್ಬನನ್ನು ಎದುರಿಸಿ ನಿಂತಿದ್ದಾನೆ. ವೀರರಿಬ್ಬರ ಸೊಂಟದಲ್ಲಿಯೂ ಬಾಕುವನ್ನು ಕಟ್ಟಲಾಗಿದೆ.

2ನೇ ಹಂತದಲ್ಲಿ ವೀರನ ಕೈಹಿಡಿದು ಸ್ವರ್ಗಕ್ಕೆ ಹಾರುತ್ತಿರುವ ದೇವಕನ್ಯೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಮಧ್ಯಭಾಗದಲ್ಲಿ ಲಿಂಗ ಮತ್ತು ಪುರೋಹಿತನ ಶಿಲ್ಪವಿದೆ. ಎಡಭಾಗದಲ್ಲಿ ಬಸವನ ಶಿಲ್ಪವಿದೆ.

**ಅಕ್ಕೂರು**

ಅದೇ ಗ್ರಾಮದ ಚೋಳೇಶ್ವರ ದೇವಾಲಯದಲ್ಲಿ 4 ಅಡಿ ಎತ್ತರ, 3 ಅಡಿ ಅಗಲ, 4 ಇಂಚು ದಪ್ಪವಾದ ಬೆಣಚುಕಲ್ಲಿನಿಂದ ಬಳಸಿ ಕೆತ್ತನೆ ಮಾಡಲಾಗಿದೆ. ಇದು ಪೆಣ್ಬುಯ್ಯಲ್ ವೀರಗಲ್ಲಾಗಿದ್ದು ಮೂರು ಹಂತಗಳನ್ನು ಹೊಂದಿದೆ. ಮೊದಲ ಹಂತದಲ್ಲಿ ಬಲಭಾಗದಲ್ಲಿ ಮಗುವನ್ನು ಸೊಂಟದಲ್ಲಿ ತೆತ್ತುಕೊಂಡಿರುವ ಮಹಿಳೆಯ ಸೀರೆಯನ್ನು ಎಳೆಯುತ್ತಿರುವ ವ್ಯಕ್ತಿಯ ಶಿಲ್ಪವಿದೆ. ಬಲಭಾಗದಲ್ಲಿ ಆಕೆಯನ್ನು ಮುಕ್ತಗೊಳಿಸಿದ ವೀರನ ಶಿಲ್ಪವಿದೆ. ವೀರನು ಗುರಾಣಿಯನ್ನು ಹಿಡಿದಿದ್ದು, ಸೊಂಟದಲ್ಲಿ ಬಾಕುವನ್ನು ಕಟ್ಟಿಕೊಂಡಿದ್ದಾನೆ. ಆತನ ಹಿಂಭಾಗದಲ್ಲಿ ಬಂಧ ಮುಕ್ತ ಮಹಿಳೆಯ ಶಿಲ್ಪವಿದೆ. 2ನೇ ಹಂತದಲ್ಲಿ ಪದ್ಮಾಸನದಲ್ಲಿ ಕುಳಿತ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಲಿಂಗ, ಪುರೋಹಿತ, ಬಸವನ ಶಿಲ್ಪವಿದೆ. (ಚಿತ್ರ ಸಂ. 42)

**ಚಿದರವಳ್ಳಿ**

ಚಿದರವಳ್ಳಿ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 18 ಕಿ.ಮೀ.ದೂರದಲ್ಲಿದೆ. ಈ ಗ್ರಾಮದ ಸೋಮೇಶ್ವರ ದೇವಾಲಯದ ಮುಂಭಾಗದಲ್ಲಿ 7 ಅಡಿ ಎತ್ತರ, 4 ಅಡಿ ಅಂಗುಲ, 6 ಇಂಚು ದಪ್ಪದಾಗಿರುವ ವೀರಗಲ್ಲೊಂದಿದ್ದು ಬೆಣಚುಕಲ್ಲನ್ನು ಬಳಸಿ ಕೆತ್ತನೆಯನ್ನು ಮಾಡಲಾಗಿದೆ. ಈ ವೀರಗಲ್ಲು ಮೂರು ಹಂತಗಳನ್ನು ಹೊಂದಿದೆ.

ಮೊದಲನೆ ಹಂತದಲ್ಲಿ ಖಡ್ಗ ಗುರಾಣಿ ಹಿಡಿದ ವೀರರು ಹೋರಾಟದಲ್ಲಿ ನಿರತರಾಗಿದ್ದಾರೆ. 2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ ಮಂಟಪದಲ್ಲಿನ ಲಿಂಗ ಬಸವನ ಶಿಲ್ಪವಿದೆ.

**ಚಿದರವಳ್ಳಿ**

ಅದೇ ಗ್ರಾಮದ ಅನತಿ ದೂರದಲ್ಲಿರುವ ಮತ್ತೊಂದು ವೀರಗಲ್ಲು. ಇದು 4 ಅಡಿ ಎತ್ತರ, 3 ಅಡಿ ಅಗಲವಾಗಿದ್ದು, 4 ಇಂಚು ದಪ್ಪವನ್ನು ಹೊಂದಿದೆ. ಈ ವೀರ ಮಾಸ್ತಿಗಲ್ಲು 3 ಹಂತಗಳಂದ ಕೂಡಿದ್ದು ಬೆಣಚು ಕಲ್ಲಿನಿಂದ ಮಾಡಲಾಗಿದೆ. ಮೊದಲನೆಯ ಹಂತದಲ್ಲಿ ಖಡ್ಗ ಮತ್ತು ಈಟಿಯನ್ನು ಹಿಡಿದು ನಿಂತ ವೀರರ ಶಿಲ್ಪವಿದೆ. 2 ನೇ ಹಂತದಲ್ಲಿ ಇಬ್ಬರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ 3 ಮಂದಿ ದೇವಕನ್ಯೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ, ಲಿಂಗ ಮತ್ತು ಬಸವನ ಶಿಲ್ಪವಿದೆ.

**ಚಿದರವಳ್ಳಿ**

ಅದೇ ಗ್ರಾಮದ ಅನತಿ ದೂರದಲ್ಲಿರುವ ಮತ್ತೊಂದು ವೀರಗಲ್ಲು. ಈ ವೀರಗಲ್ಲು 3 ಅಡಿ ಎತ್ತರ, 3 ಅಡಿ ಅಗಲ, 4 ಇಂಚು ದಪ್ಪದಾಗಿರುವ ವೀರಗಲ್ಲಾಗಿದೆ. ಈ ವೀರಗಲ್ಲು ಪೆಣ್ಬುಯ್ಯಲ್ ವೀರಗಲ್ಲಾಗಿದ್ದು ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 2 ಹಂತಗಳನ್ನು ಹೊಂದಿದೆ. ಮೊದಲನೆ ಹಂತದಲ್ಲಿ ಮಗುವನ್ನು ತೆತ್ತಿಕೊಂಡಿರುವ ಮಹಿಳೆಯ ಸೀರೆಯನ್ನು ಎಳೆಯುತ್ತಿರುವ ವ್ಯಕ್ತಿಯ ಶಿಲ್ಪವಿದೆ. 2ನೇ ಹಂತದಲ್ಲಿ ಕೈಮುಗಿದು ನಿಂತ ವೀರ ಲಿಂಗ, ಸೂರ್ಯ, ಬಸವನ ಶಿಲ್ಪವಿದೆ. (ಚಿತ್ರ ಸಂ.43)

**ಚಿದರವಳ್ಳಿ**

ಅದೇ ಗ್ರಾಮದ ಅನತಿ ದೂರದಲ್ಲಿರುವ ಮತ್ತೊಂದು ವೀರಗಲ್ಲು. ಈ ವೀರಗಲ್ಲು 3 ಅಡಿ ಎತ್ತರ, 2.5 ಅಡಿ ಅಗಲವನ್ನು ಹೊಂದಿದ್ದು 3 ಇಂಚು ದಪ್ಪದಾಗಿದೆ. ಈ ವೀರಗಲ್ಲು ಬಿಳಿ ಅರೆಕಲ್ಲಿನಿಂದ ರಚನೆಯನ್ನು ಮಾಡಲಾಗಿದೆ. ಈ ವೀರಗಲ್ಲು ಒಂದು ಹಂತವನ್ನು ಹೊಂದಿದೆ. ಇದು ಸತ್ತಿಗೆ ಮಾನ್ಯ ವೀರನೊಬ್ಬನ ಶಿಲ್ಪವಾಗಿದ್ದು ಆತ ಕುದುರೆಯ ಮೇಲೆ ಕುಳಿತು ಖಡ್ಗವನ್ನು ಎಸೆಯುತ್ತಿದ್ದಾನೆ. ಆತನ ಹಿಂಭಾಗದಲ್ಲಿ ರಾಜ ಛತ್ರಿ ಹಿಡಿದ ಸೈನಿಕ ಮುಂಭಾಗದಲ್ಲಿ ಕುದುರೆಯನ್ನು ನಡೆಸುವ ಸೇವಕನಿದ್ದಾನೆ.

**ಚಿದರವಳ್ಳಿ**

ಅದೇ ಗ್ರಾಮದ ಅನತಿ ದೂರದಲ್ಲಿರುವ ಮತ್ತೊಂದು ವೀರಗಲ್ಲು. ಈ ವೀರಗಲ್ಲು 4 ಅಡಿ ಎತ್ತರ, 3 ಅಡಿ ಅಗಲ, 4 ಇಂಚು ದಪ್ಪವನ್ನು ಹೊಂದಿರುವ ಬಿಳಿ ಅರೆಗಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೇ ಹಂತದಲ್ಲಿ ಖಡ್ಗ ಗುರಾಣಿಯನ್ನು ಹಿಡಿದ ಹೋರಾಟದ ದೃಶ್ಯವಿದೆ. 2ನೇ ಹಂತದಲ್ಲಿ ವೀರನನ್ನು ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಬಸವ, ಮಧ್ಯಭಾಗದಲ್ಲಿ ಮಂಟಪದಲ್ಲಿ ಲಿಂಗ ಮತ್ತು ಪುರೋಹಿತ ಶಿಲ್ಪವಿದ್ದು ಎಡಭಾಗ ಶಿಥಿಲವಾಗಿದೆ.

**ಬೆನಕನಹಳ್ಳಿ**

ಬೆನಕನಹಳ್ಳಿ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 4 ಕಿ.ಮೀ ದೂರದಲ್ಲಿ ಬಸ್ ನಿಲ್ದಾಣದ ಎದುರುಗಡೆ ಮಂಟೇಸ್ವಾಮಿ ಗದ್ದುಗೆಯ ಹಿಂಭಾಗದಲ್ಲಿರುವ ಈ ವೀರಗಲ್ಲು 3.5 ಅಡಿ ಎತ್ತರ, 1.5 ಅಡಿ ಅಗಲ, 6 ಇಂಚು ದಪ್ಪವಾದ ವೀರಗಲ್ಲಿದೆ. ಈ ವೀರಗಲ್ಲು ಬಿಳಿ ಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳಿಂದ ಕೂಡಿದೆ. ಮೊದಲನೇ ಹಂತದಲ್ಲಿ ಖಡ್ಗ ಹಿಡಿದ ವೀರರಿಬ್ಬರು ಹೋರಾಟದ ಭಂಗಿಯಲ್ಲಿದ್ದಾರೆ. ಎಡಭಾಗದ ವೀರನ ಕೈಯು ಶಿಥಿಲವಾಗಿದ್ದು ಅಸ್ಪಷ್ಟವಾಗಿದೆ. ಬಲಭಾಗದ ವೀರನು ಶತ್ರುವನ್ನು ಕತ್ತರಿಸಿ ತಲೆಕೆಳಗಾಗಿ ಎಸೆದಿರುವುದನ್ನು ಕೆತ್ತನೆ ಮಾಡಿರುವುದನ್ನು ಕಾಣಬಹುದಾಗಿದೆ. 2ನೇ ಹಂತದಲ್ಲಿ ಇಬ್ಬರು ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಶಿಲ್ಪವನ್ನು ಕೆತ್ತನೆಯನ್ನು ಮಾಡಲಾಗಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ಇಬ್ಬರು ವೀರರು ಲಿಂಗ, ಸೂರ್ಯ, ಚಂದ್ರ ಮತ್ತು ಕಂಬವನ್ನು ಕೆತ್ತನೆ ಮಾಡಲಾಗಿದೆ.(ಚಿತ್ರ ಸಂ. 44)

**ಬೆನಕನಹಳ್ಳಿ**

ಅದೇ ಗ್ರಾಮದ ಮಂಟೇಸ್ವಾಮಿ ಗದ್ದುಗೆಯ ಹಿಂಭಾಗದಲ್ಲಿರುವ ಈ ವೀರಗಲ್ಲು 4.5 ಅಡಿ ಎತ್ತರ, 3 ಅಡಿ ಅಗಲ, 6 ಇಂಚು ದಪ್ಪವಾಗಿದ್ದು, ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೇ ಹಂತದಲ್ಲಿ 2 ಜೋಡಿ ಸೈನಿಕರು ಹೋರಾಟದ ದೃಶ್ಯವಿದೆ. ಎಡಭಾಗದಲ್ಲಿ ಖಡ್ಗ ಗುರಾಣಿ ಹಿಡಿದ ವೀರ ಮತ್ತು ಈಟಿ ಮತ್ತು ಗುರಾಣಿ ಹಿಡಿದ ವೀರರು ಪರಸ್ಪರ ಹೋರಾಡುತ್ತಿದ್ದಾರೆ. ಬಲಭಾಗದಲ್ಲಿ ಖಡ್ಗ ಹಿಡಿದ ವೀರನೊಬ್ಬ

ಮತ್ತೊಬ್ಬ ವೀರನ ಜೊತೆ ಹೋರಾಡುತ್ತಿದ್ದು ಇದರಲ್ಲಿ ಒಬ್ಬ ವೀರನ ಶಿಲ್ಪ ಶಿಥಿಲವಾಗಿದೆ. 2ನೇ ಹಂತದಲ್ಲಿ ಇಬ್ಬರು ವೀರರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ 4 ಮಂದಿ ಅಪ್ಸರೆಯರ ದೃಶ್ಯವನ್ನು ಕೆತ್ತನೆ ಮಾಡಲಾಗಿದೆ. 3ನೇ ಹಂತದಲ್ಲಿ ಪದ್ಮಾಸನದಲ್ಲಿ ಕೈಮುಗಿದು ಕುಳಿತಿರುವ ಇಬ್ಬರು ವೀರರು ಲಿಂಗ, ದೂಪದ ಆರತಿ, ಗಂಟೆಯನ್ನು ಹಿಡಿದು ಪೂಜಿಸುತ್ತಿರುವ ಪುರೋಹಿತ ಪೀಠದ ಮೇಲಿರುವ ಬಸವನ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ.(ಚಿತ್ರ ಸಂ. 45)

**ವೀರಗಲ್ಲು ಬೆನಕನಹಳ್ಳಿ**

ಈ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 4 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಹಾಲಿನ ಡೈರಿಯ ಮುಂಭಾಗದಲ್ಲಿ 3 ಅಡಿ ಎತ್ತರ, 2 ಅಡಿ ಅಗಲ, 4.5 ಇಂಚು ದಪ್ಪವನ್ನು ಹೊಂದಿರುವ ವೀರಗಲ್ಲು ಬಿಳಿ ಅರೆಗಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೇ ಹಂತ ಖಡ್ಗ ಮತ್ತು ಗುರಾಣಿ ಹಿಡಿದ ಇಬ್ಬರು ವೀರರು ಹೋರಾಟದ ಭಂಗಿಯಲ್ಲಿದೆ. 2ನೇ ಹಂತದಲ್ಲಿ ಮಡಿದ ವೀರರನ್ನು ಸ್ವರ್ಗಕ್ಕೆ ಹೊತ್ತೊಯ್ಯುತ್ತಿರುವ ದೃಶ್ಯವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ, ದೂಪದಾರತಿ ಮತ್ತು ಗಂಟೆಯಿಂದ ಪೂಜಿಸುತ್ತಿರುವ ಪುರೋಹಿತ ಲಿಂಗ ಮತ್ತು ಬಸವನ ಶಿಲ್ಪವಿದೆ. ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಉಬ್ಬುಶಿಲ್ಪಗಳಿವೆ.(ಚಿತ್ರ ಸಂ. 46)

**ವೀರಗಲ್ಲು ತಡಿಮಾಲಂಗಿ**

ಈ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 18 ಕಿ.ಮೀ ದೂರದಲ್ಲಿದೆ. ಅದೇ ಗ್ರಾಮದ ಹಳೆಯ ನದಿಯ ತಡಿಯಲ್ಲಿರುವ 5 ಅಡಿ ಎತ್ತರ, 2 ಅಡಿ ಅಗಲ, 5 ಇಂಚು ದಪ್ಪವನ್ನು ಹೊಂದಿರುವ ವೀರಗಲ್ಲು ಬಿಳಿ ಅರೆಗಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 2 ಹಂತಗಳಿಂದ ಕೂಡಿದೆ. ಮೊದಲನೇ ಹಂತದಲ್ಲಿ ವೀರರಿಬ್ಬರು ಖಡ್ಗ ಈಟಿ ಹಿಡಿದ ಎಡಭಾಗದ ವೀರನು ಖಡ್ಗ ಮತ್ತು ಗುರಾಣಿಯನ್ನು ಹಿಡಿದ ವೀರನ ಜೊತೆಯಲ್ಲಿ ಹೋರಾಡುತ್ತಿರುವ ದೃಶ್ಯವಿದೆ. ಇಬ್ಬರ ಸೊಂಟದಲ್ಲಿ ಬಾಕುಗಳನ್ನು ಕಟ್ಟಲಾಗಿದೆ. 2ನೇ ಹಂತದಲ್ಲಿ ಮತ್ತಿಬ್ಬರು ವೀರರು ಹೋರಾಡುತ್ತಿರುವ ದೃಶ್ಯವಿದ್ದು, ಬಲಭಾಗದ ವೀರ ಖಡ್ಗ ಗುರಾಣಿಯ ಜೊತೆ ಬಲಗೈಯಲ್ಲಿ ಈಟಿಯನ್ನು ಹಿಡಿದಂತೆ ಕಂಡುಬರುತ್ತದೆ. ಎಡಭಾಗದ ವೀರನು ಮತ್ತು ಬಲಭಾಗದ ವೀರರ ಸೊಂಟದಲ್ಲಿ ಬಾಕುಗಳನ್ನು ಕಟ್ಟಲಾಗಿದೆ.(ಚಿತ್ರ ಸಂ. 47)

**ವೀರಗಲ್ಲು ಹಿಟ್ಟುವಳ್ಳಿ**

ಹಿಟ್ಟುವಳ್ಳಿ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 15 ಕಿ.ಮೀ ದೂರದಲ್ಲಿದೆ. ಮುಖ್ಯರಸ್ತೆಯ ಬಸ್ ನಿಲ್ದಾಣದಲ್ಲಿ 3 ಅಡಿ ಉದ್ದ, 3 ಅಡಿ ಅಗಲ, 4 ಇಂಚು ದಪ್ಪವಾಗಿದ್ದು, ಬೆಣಚುಕಲ್ಲಿನಿಂದ ಕೆತ್ತನೆಯನ್ನು ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಒಳಗೊಂಡಿದೆ. ಮೊದಲ ಹಂತದಲ್ಲಿ ಇಬ್ಬರು ಅಶ್ವರೋಹಿ ಸೈನಿಕರು ಎಡಭಾಗದಿಂದ ದಾಳಿ ಮಾಡುತ್ತಿದ್ದು ಅವರನ್ನು ಇಬ್ಬರು ಸತ್ತಿಗೆ ಮಾನ್ಯ ವೀರರು ಖಡ್ಗ ಹಿಡಿದು ಎದುರಿಸಿ ನಿಂತಿದ್ದಾರೆ. 2ನೇ ಹಂತದಲ್ಲಿ ಒಬ್ಬ ವೀರನು ಮಂಟಪದಲ್ಲಿ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದು ಅಪ್ಸರೆಯರು ಮಂಟಪವನ್ನು ಹಿಡಿದು ಸ್ವರ್ಗಕ್ಕೆ ಹಾರುತ್ತಿರುವ ದೃಶ್ಯದ ಶಿಲ್ಪವಿದೆ. ಅಪ್ಸರೆಯರ ಎಡ ಮತ್ತು ಬಲದಲ್ಲಿ ಸೊಂಡಲಿನಲ್ಲಿ ಪುಷ್ಪಾಮಾಲಿಕೆಯನ್ನು ಹಿಡಿದ ಆನೆಗಳೆರಡು ದೇವಕನ್ಯೆಯರ ಸಮೇತ ವೀರನನ್ನು ಗೌರವಿಸಲು ಆಗಮಿಸುತ್ತಿರುವುದು ಕಂಡುಬರುತ್ತದೆ. 3ನೇ ಹಂತವು ಸಂಪೂರ್ಣವಾಗಿ ಶಿಥಿಲವಾಗಿದೆ.(ಚಿತ್ರ ಸಂ. 48)

**ಮಾರನಪುರದ ವೀರಗಲ್ಲು**

ಮಾರನಪುರ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 12 ಕಿ.ಮೀ ದೂರದಲ್ಲಿದೆ. ಈ ವೀರಗಲ್ಲನ್ನು ಕಣಶಿಲೆಯಲ್ಲಿ ರಚಿಸಲಾಗಿದೆ. ಇದು ಸುಮಾರು 4 ಅಡಿಗಳ ಎತ್ತರವಾಗಿದ್ದು 3 ಅಡಿಗಳ ಅಗಲ ಮತ್ತು 4 ಇಂಚು ದಪ್ಪನಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಕೆಳಹಂತದಲ್ಲಿ ಇಬ್ಬರು ವೀರಪುರುಷರು ಕತ್ತಿ ಗುರಾಣಿಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದ್ದರೆ ಎರಡನೆ ಹಂತದಲ್ಲಿ ಹೋರಾಡಿ ವೀರಮರಣವನ್ನಪ್ಪಿದ ಪುರುಷನನ್ನು ಇಬ್ಬರು ದೇವ ಕನ್ಯೆಯರು ಒಂದು ಕೈಯಲ್ಲಿ ಚಾಮರವನ್ನು ಹಿಡಿದುಕೊಂಡು ಮತ್ತೊಂದು ಕೈಯಲ್ಲಿ ವೀರಪುರುಷನನ್ನು ಹಿಡಿದುಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೆ ಹಂತದಲ್ಲಿ ಪದ್ಮಾಸನದಲ್ಲಿ ಕೈಮುಗಿದು ಕುಳಿತಿರುವ ವೀರಪುರುಷ ಅವನ ಎಡಭಾಗದಲ್ಲಿ ಒಂಟಿ ಕಾಲಿನಲ್ಲಿ ನಿಂತು ಕೊಳಲನ್ನು ನುಡಿಸುತ್ತಿರುವ ಕೃಷ್ಣನ ಶಿಲ್ಪ ಕೊಳಲಿನ ನಾದವನ್ನೆ ಆಲಿಸುತ್ತಾ ತಲೆಯನ್ನು ಮೇಲೆ ಮಾಡಿ ಆಲಿಸುತ್ತಿರುವ ಹಸು ನಿಂತಿರುವಂತೆ ಬಹಳ ಸುಂದರವಾಗಿ ಕೆತ್ತನೆ ಮಾಡಿ ನಿಲ್ಲಿಸಲಾಗಿದೆ.

**ಮಾರನಪುರದ ವೀರಗಲ್ಲು**

ಈ ಗ್ರಾಮದ ವೀರಗಲ್ಲನ್ನು ಕಣಶಿಲೆಯಲ್ಲಿ ಶಿಲ್ಪಗಳನ್ನು ರಚಿಸಿ ನಿಲ್ಲಿಸಲಾಗಿದೆ. ಇದರಲ್ಲಿಯೂ ಮೂರು ಹಂತಗಳಿದ್ದು ಸುಮಾರು 4 ಅಡಿ ಎತ್ತರ 3 ಅಡಿಗಳ ಅಗಲ ಮತ್ತು ಐದು ಇಂಚು ದಪ್ಪನಾಗಿರುವ ಕಲ್ಲಿನ ಚಪ್ಪಡಿಯ ಮೇಲೆ ಕೆತ್ತನೆಮಾಡಲಾಗಿದೆ. ಇದರಲ್ಲಿರುವ ಮೂರು ಹಂತಗಳಲ್ಲಿ ಕೆಳಭಾಗದ ಹಂತದಲ್ಲಿ ಇಬ್ಬರು ವೀರರು ಭರ್ಜಿಗಳನ್ನಿಡಿದು ಹೋರಾಟದಲ್ಲಿ ತೊಡಗಿರುವಂತೆ ಚಿತ್ರಿಸಲಾಗಿದೆ. ಮಧ್ಯದ ಹಂತದಲ್ಲಿ ಇಬ್ಬರು ಚಾಮರಧಾರರು ವೀರಪುರುಷನ ಕೈ ಹಿಡಿದು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗ ನಂದಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಪುರೋಹಿತ ಮತ್ತು ಪದ್ಮಾಸನದಲ್ಲಿ ಕೈಮುಗಿದು ದೇವರ ಧ್ಯಾನದಲ್ಲಿ ತೊಡಗಿರುವ ವೀರಪುರುಷನ ಶಿಲ್ಪವನ್ನು ಬಿಡಿಸಲಾಗಿದೆ.

**ದೊಡ್ಡಬಾಗಿಲು ವೀರಗಲ್ಲು**

ದೊಡ್ಡಬಾಗಿಲು ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 15 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಶಾಲೆಯ ಮುಂಭಾಗದಲ್ಲಿ ಸುಮಾರು 3 ಅಡಿ ಎತ್ತರ ಮತ್ತು 4 ಅಡಿಗಳ ಅಗಲ ಹಾಗು ಅರ್ಧ ಅಡಿ ದಪ್ಪವಿರುವ ಕಣಶಿಲೆಯ (ಗ್ರಾನೈಟ್)ಲ್ಲಿ ರಚಿಸಲಾಗಿದೆ. ಈ ವೀರಗಲ್ಲಿನಲ್ಲಿ ಸ್ತ್ರೀ ಮತ್ತು ಪುರುಷನ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಪುರುಷನು ಬಲಗೈಯನ್ನು ಮೇಲಕ್ಕೆ ಎತ್ತಿದ್ದಾನೆ. ಎಡಗೈಯಲ್ಲಿ ಹಿಡಿದುಕೊಂಡಿರುವ ವಸ್ತು ಸ್ಪಷ್ಟವಾಗಿ ಕಾಣಬರುವುದಿಲ್ಲ. ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾನೆ. ಈ ವೀರಪುರುಷನ ಬಲಭಾಗದಲ್ಲಿ ಸ್ತ್ರೀಯೋರ್ವಳು ನಿಂತಿದ್ದಾಳೆ ಬಹುಶಃ ಅವನ ಪತ್ನಿ ಇರಬಹುದೆಂದು ಕಾಣಬರುತ್ತದೆ. ಈ ಸ್ತ್ರೀಯು ತನ್ನ ಎರಡು ಕೈಗಳನ್ನು ಕೆಳಗೆ ಇಳಿಸಿದ್ದಾಳೆ ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾಳೆ.

**ದೊಡ್ಡಬಾಗಿಲು ವೀರಗಲ್ಲು**

ಈ ಗ್ರಾಮದ ಶಾಲೆಯ ಮುಂಭಾಗದಲಿರುವ್ಲ ಮತ್ತೊಂದು ವೀರಗಲ್ಲು ಸುಮಾರು 4 ಅಡಿಗಳ ಎತ್ತರ ಮೇಲ್ಭಾಗ 3 ಅಡಿ ಅಗಲ ಕೆಳಭಾಗ 2 ಅಡಿ ಅಗಲವಿರುವ ಮತ್ತು ಅರ್ಧಅಡಿ

ದಪ್ಪವಿರುವ ಕಲ್ಲಿನಲ್ಲಿ ರಚಿಸಲಾಗಿದೆ. ಇದರಲ್ಲಿ ಮೂರು ಜನರ ಸ್ತ್ರೀಯರ ಶಿಲ್ಪಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿರುವ ಸ್ತ್ರೀಯು ತನ್ನ ಎರಡೂ ಕೈಗಳನ್ನು ಕೆಳಗಿಳಿಸಿದ್ದಾಳೆ. ಕೈಗಳಲ್ಲಿ ಹಿಡಿದುಕೊಂಡಿರುವ ವಸ್ತುಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಬಲಭಾಗದಲ್ಲಿರುವ ಪುರುಷನು ಮಧ್ಯದ ಮಹಿಳೆಯ ತಲೆಯ ಮೇಲೆ ಎಡಗೈಯನ್ನಿಟ್ಟು ಆಶೀರ್ವದಿಸುವಂತಿದ್ದರೆ ಬಲಗೈಯಲ್ಲಿ ದಂಡವನ್ನು ಹಿಡಿದುಕೊಂಡಿದ್ದಾನೆ. ತಲೆಯ ಕೂದಲನ್ನು ತುರುಬಿನಂತೆ ಕಟ್ಟಲಾಗಿದೆ. ಎಡಭಾಗದಲ್ಲಿ ನಿಂತಿರುವ ಸ್ತ್ರೀಯು ಮಧ್ಯದ ಸ್ತ್ರೀಗೆ ಸಮಾಧಾನ (ಸಂತ್ವಾನ) ಹೇಳುತ್ತಿರುವಂತೆ ರಚಿಸಲಾಗಿದೆ. ಈ ಮಹಿಳೆಯು ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾಳೆ, ಎಡಗೈ ತೋಳಿನ ಭಾಗ ಮಾತ್ರ ಬರುತ್ತದೆ. ಬಲಗೈಯನ್ನು ಮಧ್ಯದ ಮಹಿಳೆಯ ತಲೆಯ ಮೇಲಿರಿಸಿದ್ದಾಳೆ.

**ದೊಡ್ಡಬಾಗಿಲು ವೀರಗಲ್ಲು**

ಈ ಗ್ರಾಮದ ಶಾಲೆಯ ಮುಂಭಾಗದಲಿರುವ್ಲ ಮತ್ತೊಂದು ವೀರಗಲ್ಲು 5 ಅಡಿ ಅಗಲ ಮತ್ತು 3 ಅಡಿಗಳ ಎತ್ತರವಿರುವ ಬೆಣಚು ಕಲ್ಲಿನಲ್ಲಿ ರಚಿಸಿ ನಿಲ್ಲಿಸಲಾಗಿದೆ. ಕಲ್ಲಿನ ಅರ್ಧಭಾಗ ಭೂಮಿಯಲ್ಲಿ ಊತು ಹೋಗಿದೆ. ಇದರಲ್ಲಿ ಸ್ತ್ರೀ ಮತ್ತು ಪುರುಷನ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಪುರುಷನು ಎಡಗೈ ಮೇಲಕ್ಕೆ ಎತ್ತಿಕೊಂಡಿದ್ದಾನೆ. ಬಲಗೈನ್ನು ಅರ್ಧಭಾಗ ಮೇಲಕ್ಕೆ ಎತ್ತಿ ಹಿಡಿದು ಕೊಂಡಿದ್ದಾಳೆ. ಇವನ ಎಡಭಾಗದಲ್ಲಿ ನಿಂತಿರುವ ಸ್ತ್ರೀಯು ಪುರುಷನನ್ನು ನೋಡುತ್ತಿರುವಂತೆ ರಚಿಸಲಾಗಿದ್ದು ಈ ಮಹಿಳೆಯು ತನ್ನ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾಳೆ ತನ್ನ ಎರಡೂ ಕೈಗಳನ್ನು ಕೆಳಗೆ ಇಳಿಸಿದ್ದಾಳೆ.

**ಕೆಬ್ಬೆಹುಂಡಿಯ ವೀರಗಲ್ಲು**

ಕೆಬ್ಬೆಹುಂಡಿ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 10 ಕಿ.ಮೀ ದೂರದಲ್ಲಿದೆ. ಈ ವೀರಗಲ್ಲು ಹೊಲದಲ್ಲಿದ್ದು, ಸುಮಾರು ಎರಡುವರೆ ಅಡಿ ಎತ್ತರ ಎರಡು ಅಡಿಗಳ ಕಣ ಶಿಲೆಯಲ್ಲಿ ರಚಿಸಿ ನಿಲ್ಲಿಸಲಾಗಿದೆ. ಇದರ ಅರ್ಧಭಾಗ ಭೂಮಿಯಲ್ಲಿ ಊತುಹೋಗಿದೆ. ಇದರಲ್ಲಿ ವೀರಪುರುಷನೋರ್ವನು ತನ್ನ ಬಲಗೈಯಲ್ಲಿ ಈಟಿಯನ್ನು ಹಿಡಿದುಕೊಂಡು ಮೇಲಕ್ಕೆ ಎತ್ತಿಹಿಡಿದಿದ್ದಾನೆ. ಎಡಗೈಯಲ್ಲಿ ಶತ್ರುವಿನ ಕುತ್ತಿಗೆಯನ್ನು

ಹಿಡಿದುಕೊಂಡು ಕೆಳಗೆ ಜಗ್ಗಿಸಿ ಬಿಳಿಸುತ್ತಿದ್ದಾನೆ. ಶತ್ರು ಪುರುಷನು ತನ್ನ ಎಡಗೈಯನ್ನು ಇಳಿಬಿಟ್ಟು ಬಲಗೈ ಮೇಲಕ್ಕೆ ಎತ್ತಿಕೊಂಡು ಬೀಳುತ್ತಿರುವಂತೆ ರಚಿಸಲಾಗಿದೆ.

**ಕೆಬ್ಬೆಹುಂಡಿಯ ವೀರಗಲ್ಲು**

ಅದೇ ಗ್ರಾಮದ ಮತ್ತೊಂದು ವೀರಗಲ್ಲು ಹೊಲದಲ್ಲಿದ್ದು, ಈ ವೀರಗಲ್ಲನ್ನು ಬೆಣಚುಕಲ್ಲಿನಲ್ಲಿ ರಚಿಸಲಾಗಿದೆ. ಇದು ೩ ಅಡಿಗಳ ಎತ್ತರ ಒಂದುವರೆ ಅಡಿಯ ಅಗಲವಾಗಿದೆ. ಇದರಲ್ಲಿ ವೀರಪುರುಷನು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ತನ್ನ ಭುಜದ ಮೇಲೆ ಇರಿಸಿಕೊಂಡಿದ್ದಾನೆ. ಕಚ್ಚೆ ಪಂಚೆಯನ್ನು ಮೇಲಕ್ಕೆತ್ತಿ ಕಟ್ಟಿದ್ದಾನೆ ಎನ್ನುವಂತೆ ಬಹಳ ಸುಂದರವಾಗಿ ರಚಿಸಲಾಗಿದೆ.

ಇದರ ಬಲಭಾಗದಲ್ಲಿ ಸುಮಾರು ಒಂದುವರೆ ಅಡಿ ಎತ್ತರವಿರುವ ಚಿಕ್ಕದೊಂದು ವೀರಗಲ್ಲನ್ನು ಇರಿಸಲಾಗಿದೆ. ಇದರಲ್ಲಿ ಸ್ತ್ರೀ ಮತ್ತು ಪುರುಷರ ಶಿಲ್ಪಗಳನ್ನು ಬಿಡಿಸಲಾಗಿದೆ. ಪುರುಷನು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಎಡಗೈಯಲ್ಲಿ ಯಾವುದೋ ರುಂಡದಂತಿರುವ ವಸ್ತುವನ್ನು ಹಿಡಿದಿದ್ದಾನೆ. ಇವನ ಎಡಭಾಗದಲ್ಲಿ ನಿಂತಿರುವ ಸ್ತ್ರೀಯು ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾಳೆ. ಬಲಗೈಯನ್ನು ಸೊಂಟದ ಮೇಲೆ ಇರಿಸಿಕೊಂಡಿದ್ದಾಳೆ ಎಡಗೈ ಅರ್ಧ ಮಾತ್ರ ಗೋಚರಿಸುತ್ತಿದೆ.

**ಕೆಬ್ಬೆಹುಂಡಿಯ ವೀರಗಲ್ಲು**

ಅದೇ ಗ್ರಾಮದ ಮತ್ತೊಂದು ವೀರಗಲ್ಲು ಹೊಲದಲ್ಲಿದ್ದು, ಸುಮಾರು ನಾಲ್ಕುವರೆ ಅಡಿ ಎತ್ತರ ೩ ಅಡಿಗಳ ಅಗಲವಾಗಿರುವ ಬೆಣಚು ಕಲ್ಲಿನಲ್ಲಿ ರಚಿಸಲಾಗಿದೆ. ಇದರಲ್ಲಿ ಮೂರು ಶಿಲ್ಪಗಳು ಕಾಣಬರುತ್ತವೆ. ಒಬ್ಬ ಪುರುಷನು ಕೆಳಗೆ ಬಿದ್ದಿದ್ದಾನೆ ಮತ್ತೊಬ್ಬ ಪುರುಷನು ಎದುರಾಳಿಗೆ ಇರಿಯಲು ಎಡಗೈಯಲ್ಲಿ ಭರ್ಜಿಯನ್ನು ಹಿಡಿದು ಮೇಲಕ್ಕೆತ್ತಿ ಶತ್ರುವಿನ ಕುತ್ತಿಗೆಯ ಹತ್ತಿರ ತಂದಿದ್ದಾನೆ. ಬಲಗೈಯಲ್ಲಿ ಕತ್ತಿ ಹಿಡಿದು ಕೆಳಗೆ ಇರಿಸಿದ್ದಾನೆ. ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾನೆ, ಮತ್ತೊಬ್ಬನು ಹೆದರಿಕೊಂಡು ನಿಂತಿದ್ದಾನೆ. ಕೈಯಲ್ಲಿ ಯಾವುದೋ ಒಂದು ದಂಡವನ್ನು ಹಿಡಿದು ಕೆಳಗೆ ಇಳಿಸಿದ್ದಾನೆ ಎಡಗೈಯನ್ನು ಬಲತೋಳಿನ ಮೇಲೆ ಇರಿಸಿದ್ದಾನೆ. ಇವನೂ ತಲೆಯ ಕೂದಲನ್ನು ತುರುಬಿನಂತೆ ಕಟ್ಟಿದ್ದಾನೆ.

**ವಡೆಯಾಂಡಹಳ್ಳಿಯ ಹೊಲದಲ್ಲಿರುವ ವೀರಗಲ್ಲು**

ಈ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 11 ಕಿ.ಮೀ ದೂರದಲ್ಲಿದೆ. ಈ ವೀರಗಲ್ಲಿನಲ್ಲಿ ಅಕ್ಕಪಕ್ಕದಲ್ಲಿ ರಾವಳೇಶ್ವರ ಸಂಸ್ಕೃತಿಗೆ ಸೇರಿದ ಶಿಲ್ಪಗಳ ಪಕ್ಕದಲ್ಲಿದ್ದ ಈ ವೀರಗಲ್ಲು ಶಿಲ್ಪವನ್ನು ಗಮನಿಸಿದರೆ ಯುದ್ಧದಲ್ಲಿ ಮಡಿದ ಸೈನಿಕರನ್ನು ದೇವಲೋಕಕ್ಕೆ ಕರೆದೊಯ್ಯುತ್ತಿರುವ ಭಂಗಿಯಲ್ಲಿ ಶಿಲ್ಪವನ್ನು ಕಡೆಯಲಾಗಿದೆ. ಈ ವೀರರು ಇಕ್ಕೆಲಗಳಲ್ಲಿ ಒಂದು ಕಡೆ ಪುರುಷ ಮತ್ತೊಂದು ಕಡೆ ಸ್ತ್ರೀಯ ಶಿಲ್ಪ ಮೂಡಿ ಬಂದಿರುವುದು ಒಂದು ವಿಶೇಷತೆ ಎನಿಸುತ್ತದೆ. ಇದರಿಂದ ಈ ರೀತಿಯ ವೀರಗಲ್ಲು ಸಿಕ್ಕಿರುವುದು ಒಂದು ವಿಶೇಷವೆಂದೇ ನಾನು ಭಾವಿಸಿದ್ದೇನೆ. ವೀರಗಲ್ಲುಗಳ ಬಗ್ಗೆ ಹೀಗಾಗಲೇ ಹಲವಾರು ವಿದ್ವಾಂಸರು ಸಂಶೋಧನೆಗಳನ್ನು ಮಾಡಿದ್ದಾರೆ. ಇದೇ ರೀತಿಯ ಒಂದು ವೀರಗಲ್ಲು ದೊರೆತಿರುವುದು ಸಂತೋಷಕರವಾದ ಸಂಗತಿಯಾಗಿದೆ.

ಮೇಲ್ಭಾಗದಲ್ಲಿಯೂ ಇಬ್ಬರು ವೀರರು ಕೈ ಹಿಡಿದುಕೊಂಡು ಹೋಗುತ್ತಿರುವ ದೃಶ್ಯ ಕಂಡುಬರುತ್ತದೆ. ಎರಡನೇ ಭಾಗದ ವಿಶೇಷತೆ ಏನೆಂದರೆ ಕೆಳಭಾಗದಲ್ಲಿ ಸ್ತ್ರೀ ಮತ್ತು ಪುರುಷರಿದ್ದರೆ ಮೇಲ್ಭಾಗದಲ್ಲಿ ಇಬ್ಬರು ಪುರುಷರು ವೀರನನ್ನು ಕರೆದೊಯ್ಯುತ್ತಿರುವುದು ಒಂದು ವಿಶೇಷವೆಂದೇ ಹೇಳಬಹುದಾಗಿದೆ. ಪ್ರಾಯಶಃ ಇದರ ಮೇಲ್ಭಾಗದಲ್ಲಿ ಮತ್ತೊಂದು ಅಂತಸ್ತು ಇತ್ತು ಎಂದು ಹೇಳಬಹುದಾದರೂ ಇಂದು ಮೇಲ್ಭಾಗ ಸಂಪೂರ್ಣ ಮುರಿದು ಹೋಗಿದೆ. ಈ ಹಿನ್ನೆಲೆಯಲ್ಲಿ ಇದರ ಪರಿಪೂರ್ಣವಾದ ಚಿತ್ರಣವನ್ನು ತಿಳಿಯಲು ಸಾಧ್ಯವಾಗಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ಇದೊಂದು ಮಹತ್ವ ಪೂರ್ಣವಾದ ಸ್ಥಳೀಯ ಪ್ರಾಂತ್ಯಕ್ಕೆ ಸೀಮಿತವಾದ ಒಂದು ಅಪರೂಪದ ವೀರಗಲ್ಲು ಎಂದು ಹೇಳಬಹುದಾಗಿದೆ. ಮತ್ತೊಂದು ವೀರಗಲ್ಲು 3 ಹಂತಸ್ತುಗಳಿಂದ ಕೂಡಿದ್ದು, ಕೆಳಭಾಗದಲ್ಲಿ ನಾಲ್ಕು ವೀರಯೋಧರ ಉಬ್ಬು ಶಿಲ್ಪವನ್ನು ಕಡೆಯಲಾಗಿದೆ. ಆದರೆ ಈ ಭಾಗದಲ್ಲಿ ನಾಲ್ಕು ಜನ ಯಾವುದೇ ರೀತಿಯ ದೃಶ್ಯಾವಳಿಯನ್ನು ಕಾಣದೇ ಇಬ್ಬರು ಕುಳಿತ್ತಿದ್ದು ಹಾಗೂ ಇಬ್ಬರು ನಿಂತಿರುವುದು ಕಂಡು ಬರುತ್ತದೆ. ಎರಡನೇ ಅಂತಸ್ತಿನಲ್ಲಿ ಮಡಿದ ಯೋಧನನ್ನು ದೇವಲೋಕಕ್ಕೆ ದೇವ–ಅಪ್ಸರೆಯರು ಚಾಮರಗಳನ್ನು ಹಿಡಿದು ಮೇಲೆ ಕರೆದೊಯ್ಯುತ್ತಿರುವ ದೃಶ್ಯ ಮಹತ್ವದ್ದಾಗಿದೆ. ಅದರ ಮೇಲ್ಭಾಗದಲ್ಲಿ ಶಿವಲಿಂಗವಿದ್ದು, ಶಿವಲಿಂಗದ ಮೇಲ್ಭಾಗದಲ್ಲಿ ನಂದಿ ಶಿಲ್ಪವನ್ನು ಕಡೆಯಲಾಗಿದೆ.

ಶಿವಲಿಂಗ ಮತ್ತು ನಂದಿಯ ಶಿಲ್ಪಕ್ಕೆ ಎದುರಾಗಿ ಇಬ್ಬರು ಅಂಜಲಿಬದ್ಧರಾಗಿ ಶಿವಾರ್ಚನೆ ಮಾಡುತ್ತಿರುವ ದೃಶ್ಯ ಈ ವೀರಗಲ್ಲಿನಲ್ಲಿ ಕಂಡುಬರುತ್ತದೆ. ಅಂದರೆ ಮಡಿದ ಯೋಧನಿಗಾಗಿ ಆತನು ದೇವಲೋಕವನ್ನು ಸೇರಲಿ ಎಂಬ ಹಿನ್ನೆಲೆಯಿಂದ ಈ ಶಿವಭಕ್ತರು ವೀರನಿಗೋಸ್ಕರ ಪೂಜೆ ಪುರಸ್ಕಾರ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ.

**ಹೆಮ್ಮಿಗೆಯ ಹೊಳೆಯ ಬದಿಯಲ್ಲಿರುವ ವೀರಗಲ್ಲು**

ಹೆಮ್ಮಿಗೆ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 10 ಕಿ.ಮೀ ದೂರದಲ್ಲಿದೆ. ಹೊಳೆಯ ಬದಿಯಲ್ಲಿರುವ ವೀರಗಲ್ಲುಈ ಸ್ಮಾರಕಶಿಲ್ಪದಲ್ಲಿ ಆರು ಜನ ವ್ಯಕ್ತಿಗಳ ಉಬ್ಬು ಶಿಲ್ಪಗಳಿದ್ದು ಆರು ಜನರು ತಮ್ಮ ತಮ್ಮ ಸ್ನೇಹಿತರ ಕೈಗಳನ್ನು ಹಿಡಿದುಕೊಂಡಿರುವುದು ಕಂಡು ಬರುತ್ತದೆ. ಪ್ರಾಯಶಃ ಇದರ ಉದ್ದೇಶವೇನೆಂದರೆ ಇಲ್ಲಿರುವ ನಾವು ಒಂದೇ ಎನ್ನುವಂತೆ ಎಲ್ಲರೂ ಒಗ್ಗಟ್ಟಾಗಿ ಯುದ್ಧ ಮಾಡೋಣ ಎಂಬ ಹಿನ್ನೆಲೆಯಿಂದ ಈ ಒಂದು ಶಿಲ್ಪಕಲೆಯನ್ನು ಮೂಡಿಸಿರಬಹುದು. ಅಂದರೆ ಎದುರಾಳಿಗಳು ಯುದ್ಧಕ್ಕೆ ಬಂದರೆ ನಾವುಗಳು ಒಗ್ಗಟ್ಟಾಗಿದ್ದೇವೆ ಎಂಬ ಅಂಶವನ್ನು ಈ ಶಿಲ್ಪಕಲೆಯಲ್ಲಿ ಶಿಲ್ಪಿ ಕಡೆದಿರುವುದು ಮನೋಜ್ಞವಾಗಿದೆ.

**ಹಂದಿ ಬೇಟೆ ವೀರಗಲ್ಲು ಬೊಮ್ಮನಾಯಕನಹಳ್ಳಿ**

ಬೊಮ್ಮನಾಯಕನಹಳ್ಳಿತಿರುಮಕೂಡಲು ನರಸೀಪುರದಿಂದ 12 ಕಿ.ಮೀ. ದೂರದಲ್ಲಿದೆ. ಈ ಹಂದಿ ಬೇಟೆ ವೀರಗಲ್ಲು ಸುಮಾರು 3.5 ಅಡಿ ಎತ್ತರ, 2.5 ಅಗಲವಿದೆ. ಈ ವೀರಗಲ್ಲು 4 ಇಂಚು ಅಗಲವನ್ನು ಹೊಂದಿದ್ದು 3 ಹಂತಗಳಿಂದ ಕೂಡಿದೆ. ಮೊದಲನೆಯ ಹಂತದಲ್ಲಿ ಹಂದಿ ಬೇಟೆಯಾಡುತ್ತಿರುವ ವ್ಯಕ್ತಿಗಳು ಮತ್ತು ಹಂದಿ ಮತ್ತು ಬೇಟೆ ನಾಯಿಯ ಶಿಲ್ಪವಿದೆ. ಹಂದಿಯು ಮಧ್ಯಭಾಗದಲ್ಲಿದ್ದು ಹಿಂಭಾಗದಿಂದ ನಾಯಿಯೊಂದು ದಾಳಿ ಮಾಡುತ್ತಿದೆ. ಒಬ್ಬ ವೀರ ಹಿಂಭಾಗದಿಂದ ಹಂದಿಯನ್ನು ಚುಚ್ಚುತ್ತಿದ್ದಾನೆ. ಮುಂಭಾಗದಿಂದ ಒಬ್ಬ ವೀರ ಹಂದಿಯನ್ನು ಬಾಕಿನಿಂದ ಹಿರಿಯುತ್ತಿದ್ದಾನೆ. 2ನೇ ಹಂತದಲ್ಲಿ ವೀರ, ಮಾಸ್ತಿ ಮತ್ತು ಮಗುವನ್ನು ಸ್ವರ್ಗಕ್ಕೆ ಎಳೆದ್ಯೊಯುತ್ತಿರುವ ಇಬ್ಬರು ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ವೀರ, ಮಾಸ್ತಿ ಮತ್ತು ಇಬ್ಬರು ಮಕ್ಕಳ ಶಿಲ್ಪವಿದೆ. ಹಾಗೂ ಲಿಂಗ, ಬಸವನ ಶಿಲ್ಪವಿದೆ. ಈ ವೀರಗಲ್ಲನ್ನು ಗಮನಿಸಿದಾಗ ಇಡೀ ಕುಟುಂಬವೇ ಹಂದಿ ಬೇಟೆಯಲ್ಲಿ ಬಲಿಯಾಗಿರುವುದು ಕಂಡುಬರುತ್ತದೆ.(ಚಿತ್ರ ಸಂ. 49)

**ಹಂದಿ ಬೇಟೆ ವೀರಗಲ್ಲು ಬೊಮ್ಮನಾಯಕನಹಳ್ಳಿ**

ಬೊಮ್ಮನಾಯಕನಹಳ್ಳಿತಿರುಮಕೂಡಲು ನರಸೀಪುರದಿಂದ 12 ಕಿ.ಮೀ. ದೂರದಲ್ಲಿದೆ. ಈ ಹಂದಿ ಬೇಟೆ ವೀರಗಲ್ಲು ಸುಮಾರು 3ಅಡಿ ಎತ್ತರ, 5 ಅಡಿ ಅಗಲ, 6 ಇಂಚು ದಪ್ಪವಾಗಿದ್ದು, ಬಿಳಿ ಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ಹಂದಿ ಬೇಟೆ ವೀರಗಲ್ಲು ಒಂದು ಹಂತವನ್ನು ಹೊಂದಿದ್ದು ಹಂದಿ ಬೇಟೆಯ ವಿಧಾನವನ್ನು ಕೆತ್ತನೆ ಮಾಡಲಾಗಿದೆ. ಮುಂಭಾಗದಿಂದ ವೀರನೊಬ್ಬನು ಭರ್ಜಿಯಿಂದ ಹಂದಿಯನ್ನು ತಿವಿಯುತ್ತಿದ್ದಾನೆ. ಹಿಂಭಾಗದಿಂದ ಮೂರು ಬೇಟೆ ನಾಯಿಗಳು ಹಂದಿಯ ಮೇಲೆರಗಿವೆ.(ಚಿತ್ರ ಸಂ. 50)

**ನಿಲಸೋಗೆ**

ತಿರುಮಕೂಡಲು ನರಸೀಪುರ ತಾಲೂಕು ನಿಲಸೋಗೆ ಗ್ರಾಮದ ಮಾಲಾರಸಮ್ಮ ದೇವಾಲಯದ ಹಿಂಭಾಗದಲ್ಲಿ ವೀರಗಲ್ಲು 2 ಅಡಿ ಉದ್ದ, 4 ಇಂಚು ದಪ್ಪದಾಗಿದ್ದು ಬಿಳಿ ಅರೆಗಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಇದು ಮೂರು ಅಂತಸ್ತಿನಿಂದ ಕೂಡಿದ್ದು ಕೆಳಭಾಗದ ಅಂತಸ್ತಿನಲ್ಲಿ ಇಬ್ಬರು ಯೋಧರು ವೀರಾವೇಷದಿಂದ ಹೋರಾಡುತ್ತಿರುವ ದೃಶ್ಯಾವಳಿಯನ್ನು ಮನೋಜ್ಞವಾಗಿ ಶಿಲ್ಪದಲ್ಲಿ ಕೆತ್ತಲಾಗಿದೆ. ಈ ಶಿಲ್ಪವನ್ನು ನೋಡಿದರೆ ರಾಜರೇ ಹೋರಾಟ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಏಕೆಂದರೆ ರಾಜನ ವೇಷ-ಭೂಷಣವನ್ನು ಹೊಂದಿರುವ ಒಬ್ಬ ರಾಜ ಸೊಂಟದಲ್ಲಿ ಖಡ್ಗವನ್ನು ಕಟ್ಟಿಕೊಂಡಿದ್ದು, ಒಂದು ಕೈಯಲ್ಲಿ ಗುರಾಣಿ, ಮತ್ತೊಂದು ಕೈಯಲ್ಲಿ ಕುಡುಗೋಲು ಮಾದರಿಯ ಆಯುಧವನ್ನು ಹಿಡಿದಿರುವುದು ಕಂಡುಬರುತ್ತದೆ. ಮತ್ತೊಬ್ಬನು ಖಡ್ಗ, ಗುರಾಣಿಯನ್ನು ಹಿಡಿದು ಹೋರಾಟ ಮಾಡುತ್ತಿರುವ ಉಬ್ಬು ಶಿಲ್ಪಗಳು ಮೂಢಿಬಂದಿವೆ. ಈ ಎರಡು ಶಿಲ್ಪಗಳಲ್ಲಿಯೂ ರಾಜಮರ್ಯಾದೆಯ ವಸ್ತ್ರಾಭರಣಗಳನ್ನು ಧರಿಸಿರುವುದು ಸೊಗಸಾಗಿ ಮೂಢಿಬಂದಿದೆ. ಈ ಹಿನ್ನೆಲೆಯಿಂದ ನೋಡಿದರೆ ಈ ಇಬ್ಬರೂ ಹೋರಾಡಿ ಒಬ್ಬ ಮಡಿದಿರಬೇಕು. ಆತನ ನೆನಪಿಗೋಸ್ಕರ ವೀರಗಲ್ಲನ್ನು ಸ್ಮಾರಕ ಶಿಲ್ಪವಾಗಿ ನಿರ್ಮಿಸಲಾಗಿದೆ. ಇದರ ಮೇಲಿನ ಹಂತದಲ್ಲಿ ಮೂರು ಜನ ವ್ಯಕ್ತಿಗಳ ಉಬ್ಬು ಶಿಲ್ಪಗಳಿದ್ದು ಈ ಉಬ್ಬು ಶಿಲ್ಪಗಳು ಮಡಿದವರನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯಾವಳಿಯನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಇದರಲ್ಲಿ ಇಬ್ಬರು ಸೇವಕರು ದೇವಲೋಕಕ್ಕೆ ಕರೆದೊಯ್ಯುತ್ತಿರುವುದು ಮನೋಜ್ಞವಾಗಿದೆ.

ಇದರ ಮೇಲಿನ ಭಾಗ 3ನೇ ಅಂತಸ್ತಿನದಾಗಿದ್ದು ಇಲ್ಲಿ ನಂದಿಯ ಉಬ್ಬು ಶಿಲ್ಪವನ್ನು ಸುಂದರವಾಗಿ ಕಡೆಯಲಾಗಿದೆ. ಈ ನಂದಿಗೆ ಪೂಜೆಯನ್ನು ಮಾಡುತ್ತಾ ನಂದಿಗೆ ಭಕ್ತಿಪೂರ್ವಕವಾಗಿ ಕೈಮುಗಿಯುತ್ತಿರುವ ಶಿಲ್ಪ ಸುಂದರವಾಗಿದೆ. ಮಧ್ಯದಲ್ಲಿ ಕೋಷ್ಠಮಂಟಪವನ್ನು ನಿರ್ಮಿಸಿದ್ದು ಈ ಮಂಟಪದ ಮಧ್ಯದಲ್ಲಿ ಶಿವಲಿಂಗವನ್ನು ಕಡೆಯಲಾಗಿದೆ. ಈ ಮಂಟಪದ ಏರು ವಿನ್ಯಾಸದಲ್ಲಿ ದ್ರಾವಿಡ ಶೈಲಿಯ ವಿಮಾನವನ್ನು ಕಡೆಯಲಾಗಿದೆ. ಈ ಮಂಟಪದ ಎದುರಿಗೆ ಇಬ್ಬರು ಶಿವಭಕ್ತರು ಅಂಜಲಿಬದ್ಧರಾಗಿ ಪದ್ಮಾಸನದಲ್ಲಿ ಕುಳಿತು ಕೈಮುಗಿಯುತ್ತಿರುವುದು ಭಕ್ತಿಪೂರ್ವಕವಾಗಿ ಮೂಡಿ ಬಂದಿದೆ. ವೀರಗಲ್ಲು ಶೈವಧರ್ಮಕ್ಕೆ ಪೂರಕವಾಗಿದ್ದು, ಸೂರ್ಯಚಂದ್ರರ ಸಾಕ್ಷಿಯಾಗಿ ನಿಲ್ಲಿಸಿರುವುದನ್ನು ಈ ಸ್ಮಾರಕ ಶಿಲ್ಪದ ಹಿನ್ನೆಲೆಯಿಂದ ಗುರುತಿಸಬಹುದಾಗಿದೆ.

**ನಿಲಸೋಗೆ**

ಅದೇ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಪಕ್ಕದಲ್ಲಿ ಅರಳಿಮರದ ಕೆಳಗಡೆ 3.5 ಅಡಿ ಎತ್ತರ, 2 ಅಡಿ ಅಗಲ, 3 ಇಂಚು ದಪ್ಪದಾಗಿರುವ ವೀರಗಲ್ಲಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದ್ದು ಬೆಣಚುಕಲ್ಲಿನಿಂದ ನಿರ್ಮಾಣವಾಗಿದೆ. ಮೊದಲನೇ ಹಂತವು ಶಿಥಿಲವಾಗಿದ್ದು, ಕಣ್ಮರೆಯಾಗಿದೆ. 2ನೇ ಹಂತದಲ್ಲಿ ವೀರನ ಕೈಹಿಡಿದು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಪೀಠದ ಮೇಲೆ ಕೈಮುಗಿದು ಕುಳಿತ ವೀರ, ಪುರೋಹಿತ, ಲಿಂಗದ ಶಿಲ್ಪಗಳಿವೆ.

**ಹಿರಿಯೂರು**

ಹಿರಿಯೂರು ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 5 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಮಾರಿಗುಡಿಯ ಪಕ್ಕದಲ್ಲಿರುವ ವೀರಗಲ್ಲು 5 ಅಡಿ ಎತ್ತರ, 2.5 ಅಡಿ ಅಗಲ, 5 ಇಂಚು ದಪ್ಪದಾಗಿದ್ದು, ಬೆಣಚುಕಲ್ಲಿನಿಂದ ನಿರ್ಮಾಣವಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೇ ಹಂತದಲ್ಲಿ ಖಡ್ಗ ಗುರಾಣಿ ಹಿಡಿದು ವೀರರು ಹೋರಾಟದ ಭಂಗಿಯ ಶಿಲ್ಪವಿದೆ. ಎರಡನೆಯ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. ಮೂರನೆಯ ಹಂತದಲ್ಲಿ ಕೈಮುಗಿದು ನಿಂತ ವೀರ, ಲಿಂಗ, ಬಸವ, ಸೂರ್ಯ, ಚಂದ್ರರ ಶಿಲ್ಪಗಳಿರುವುದನ್ನು ಕಾಣಬಹುದಾಗಿದೆ.(ಚಿತ್ರ ಸಂ. 51)

**ವೀರಗಲ್ಲು**

ಅದೇ ಗ್ರಾಮದ ವೀರಗಲ್ಲು 6 ಅಡಿ ಎತ್ತರವಿದ್ದು, 4 ಅಡಿ ಅಗಲವನ್ನು ಹೊಂದಿದ್ದು, 6 ಇಂಚು ದಪ್ಪವನ್ನು ಹೊಂದಿದೆ. ಈ ವೀರಮಾಸ್ತಿಗಲ್ಲು ಬೆಣಚುಕಲ್ಲಿನಿಂದ ರಚನೆಯನ್ನು ಮಾಡಲಾಗಿದ್ದು, ಇದು 3 ಹಂತಗಳಿಂದ ಕೂಡಿದೆ.

ಮೊದಲನೆಯ ಹಂತದಲ್ಲಿ ಖಡ್ಗ ಗುರಾಣಿಯನ್ನು ಹಿಡಿದ ವೀರರು ಹೋರಾಟದ ಭಂಗಿಯಲ್ಲಿದ್ದಾರೆ. 2ನೇ ಹಂತದಲ್ಲಿ ಮಂಟಪದಲ್ಲಿ ಪದ್ಮಾಸನದಲ್ಲಿ ಕುಳಿತ ಕೈಯನ್ನು ಶಿರದ ಮೇಲೆ ನಮಸ್ಕರಿಸುತ್ತಿರುವ ವೀರನನ್ನು ಸ್ವರ್ಗಕ್ಕೆ ಎತೊಯ್ಯುತ್ತಿರುವ ದೇವಕನ್ಯೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ ಪುರೋಹಿತ, ಲಿಂಗ, ಬಸವನ ಶಿಲ್ಪವಿದೆ.

**ಶಾಸನೋಕ್ತ ವೀರಗಲ್ಲು: ಹಿರಿಯೂರು**

ಹಿರಿಯೂರು ಗ್ರಾಮದ ಮಾರಿ ಗುಡಿಯ ಪಕ್ಕದಲ್ಲಿ ಶಾಸನೋಕ್ತ ವೀರಗಲ್ಲು 5 ಅಡಿ ಎತ್ತರ, 2.5 ಅಡಿ ಅಗಲ, 6 ಇಂಚು ದಪ್ಪದಾಗಿರುವ ಈ ವೀರಗಲ್ಲು ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೆ ಹಂತದಲ್ಲಿ ವೀರರಿಬ್ಬರ ಹೋರಾಟದ ದೃಶ್ಯವಿದೆ. ಎಡಭಾಗದ ವೀರ ಬಿಲ್ಲಿಗೆ ಬಾಣ ಮಾಡಿ ನಿಂತಿದ್ದಾನೆ. ಆತನ ಬತ್ತಳಿಕೆಯಲ್ಲಿ ಹಲವಾರು ಬಾಣಗಳಿವೆ, ಬಲಭಾಗದ ವೀರ ಖಡ್ಗ ಮತ್ತು ಈಟಿಯನ್ನು ಹಿಡಿದಿದ್ದಾನೆ. 2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. ಮೂರನೆಯ ಹಂತದಲ್ಲಿ ಕೈಮುಗಿದು ಕುಳಿತ ವೀರ, ಲಿಂಗ, ಬಸವ, ಸೂರ್ಯ, ಚಂದ್ರರ ಶಿಲ್ಪಗಳಿವೆ. ಇದು ಶಾಸನೋಕ್ತ ವೀರಗಲ್ಲಾಗಿದ್ದು ಕ್ರಿ.ಶ.1354 ಫೆಬ್ರವರಿ 24ರ ಶಕವರ್ಷ 1207ರಲ್ಲಿ ಚಿಕ್ಕಣ್ಣ ಒಡೆಯ ಎಂಬುವನು ಶಾಸನವನ್ನು ಹಾಕಿಸಿದ್ದಾನೆ. 3 ಹಂತಗಳ ಅಡ್ಡಪಟ್ಟಿಕೆಗಳಲ್ಲಿ ಶಾಸನವಿದೆ.[4](ಚಿತ್ರ ಸಂ. 52)

**ಕಲಿಯೂರು ಶಾಸನೋಕ್ತ ವೀರಗಲ್ಲು**

ಇತಿಹಾಸ ಪ್ರಸಿದ್ಧವಾಗಿರುವ ಕಲಿಯೂರು ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 15 ಕಿ.ಮೀ ದೂರದಲ್ಲಿದೆ. ಈ ಶಾಸನೋಕ್ತ ವೀರಗಲ್ಲು ಮಾರಿಗುಡಿಯ ಬಲಭಾಗದಲ್ಲಿ ನಿಲ್ಲಿಸಿರುವ ಈ ವೀರಗಲ್ಲು ಕ್ರಿ.ಶ.12-13ನೇಶತಮಾನಕ್ಕೆ ಸೇರಿದ್ದು, ಕ್ರಿ.ಶ.1241

ಜನವರಿ 29ರಂದು ಬರೆಯಲಾಗಿದೆ.[5] ಈ ವೀರಗಲ್ಲು 5 ಅಡಿ ಎತ್ತರ, 1.5 ಅಡಿ ಅಗಲ, 4.5 ಇಂಚು ದಪ್ಪವಾಗಿದ್ದು ಬಿಳಿ ಅರೆಗಲ್ಲಿನಿಂದ ಕೆತ್ತನೆಯನ್ನು ಮಾಡಲಾಗಿದೆ. ಈ ವೀರಗಲ್ಲು 4 ಹಂತಗಳನ್ನು ಒಳಗೊಂಡಿದೆ. ಮೊದಲನೇ ಹಂತದಲ್ಲಿ ವೀರರಿಬ್ಬರು ಖಡ್ಗ ಹಿಡಿದು ಹೋರಾಡುತ್ತಿರುವ ದೃಶ್ಯವನ್ನು ಕೆತ್ತನೆಯನ್ನು ಮಾಡಲಾಗಿದೆ. 2ನೇ ಹಂತದಲ್ಲಿ ವೀರ ಮತ್ತು ಮಾಸ್ತಿಯರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಉಬ್ಬು ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಪೀಠದ ಮೇಲೆ ಕುಳಿತ ವೀರನಿಗೆ ಪುಷ್ಪಾಮಾಲೆಯನ್ನು ಹಾಕುತ್ತಿರುವ ದೇವಕನ್ಯೆಯರ ಶಿಲ್ಪವಿದೆ. 4ನೇ ಹಂತದಲ್ಲಿ ಕೈಮುಗಿದು ಕುಳಿತ ಇಬ್ಬರು ವೀರರು, ಲಿಂಗ, ಪುರೋಹಿತ, ಬಸವನ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ.(ಚಿತ್ರ ಸಂ. 53)

**ಮಾಸ್ತಿಗಲ್ಲುಗಳು ಮತ್ತು ವೀರಮಾಸ್ತಿಕಲ್ಲುಗಳು**

ಯಾವುದೇ ಒಬ್ಬ ವ್ಯಕ್ತಿ ವೃದ್ಧಾಪ್ಯದಿಂದಾಗಲಿ, ಅನಾರೋಗ್ಯದಿಂದಾಗಲಿ, ಯುದ್ಧದಲ್ಲಾಗಲಿ ಅಥವಾ ಮತ್ತಾವುದೇ ಕಾರಣದಿಂದಾಗಲಿ ಮರಣಿಸಿದಾಗ ಆತನ ಪತ್ನಿ ಅಥವಾ ಪತ್ನಿಯರು ಸಹಗಮನ ಮಾಡುತ್ತಿದ್ದರು. ಇಂತಹವರು ಮಹಾಸತಿಯರೆಂದು ಕರೆಯಿಸಿಕೊಂಡರು ಇವರ ಸ್ಮರಣಾರ್ಥವಾಗಿ ನಿಲ್ಲಿಸಿದ ಸ್ಮಾರಕಗಳನ್ನು ಮಹಾಸತಿಕಲ್ಲು ಅಥವಾ ಮಾಸ್ತಿಕಲ್ಲು ಎಂದು ಕರೆಯಲಾಗುತ್ತದೆ.[6] ಇವು ಇಂದಿಗೂ ಉಳಿದುಕೊಂಡು ಬಂದಿದ್ದು, ಮಹಾಸತಿ ಪರಂಪರೆಯ ಬಗ್ಗೆ ವಿಶ್ವಾಸನೀಯ ಮಾಹಿತಿಯನ್ನು ನೀಡುತ್ತವೆ.

ಸತ್ತವ್ಯಕ್ತಿಯೊಡನೆ ಅವನ ಪ್ರಿಯ ವಸ್ತುಗಳನ್ನು ಹೂಳಬೇಕು ಇಲ್ಲವೇ ಸುಡಬೇಕು ಎಂಬ ಭಾವನೆ ಈ ಸಂಪ್ರದಾಯಕ್ಕೆ ದಾರಿ ಮಾಡಿಕೊಟ್ಟಿರಬಹುದಾದರೂ ಇದರ ಉಗಮಕ್ಕೆ ಮೂರು ವ್ಯವಹಾರಿಕ ಕಾರಣಗಳನ್ನು ಊಹಿಸಬಹುದು.[7]

**1)** ಮರಣದ ತರುವಾಯ ತನ್ನ ಪತ್ನಿಯು ಅನ್ಯರ ವಶವಾಗಬಾರದೆಂಬ ಪುರುಷವರ್ಗದ ಪ್ರತಿಷ್ಠೆ ಈ ಸಂಪ್ರದಾಯವನ್ನು ಸ್ತ್ರೀಯರಿಗೆ ರೂಪಿಸಿಕೊಟ್ಟಿರಬಹುದು.

2) ಪತಿಯ ಮರಣದ ತರುವಾಯ ತನ್ನ ಬದುಕು ಮತ್ತು ಪಾವಿತ್ರ್ಯತೆಗಳ ಅನಿಶ್ಚಿತತೆಯ ಕಾರಣವಾಗಿ ಸ್ತ್ರೀ ವರ್ಗವೇ ಇದನ್ನು ರೂಪಿಸಿಕೊಂಡಿರಬಹುದು.

3) ಪತಿಯ ಮರಣದ ತರುವಾಯ ಸತಿಯನ್ನು ಮರಣಕೂಪಕ್ಕೆ ತಳ್ಳಿ ಅವಳ ಆಸ್ತಿಯನ್ನು ಸೆಳೆಯಲು ಪ್ರಭುವರ್ಗ ಇಲ್ಲವೇ ಪುರೋಹಿತ ವರ್ಗ ಈ ಯೋಜನೆಯನ್ನು ರೂಪಿಸಿರಬಹುದು.

ಇವುಗಳಲ್ಲಿ ಒಂದನೆಯ ಮತ್ತು ಮೂರನೆಯ ಕಾರಣಗಳು ಪ್ರಬಲವಾಗಿ ಕಾಣುತ್ತಿದ್ದು, ಧಾರ್ಮಿಕ ಮುಖವಾಡವನ್ನು ಧರಿಸಿ ಈ ಪರಂಪರೆಯು ವೈಭವದ ಪ್ರಚಾರ ಪಡೆಯಿತು. ಕೆಲವೊಮ್ಮೆ ಪ್ರತಿಷ್ಠೆಗೆ ಬಲಿಯಾಗಿ, ಒತ್ತಡಕ್ಕೆ ಒಳಗಾಗಿ ಅನೇಕ ಸ್ತ್ರೀಯರು ಸಹಗಮನವನ್ನು ಆಚರಿಸಿ ಮಹಾಸತಿ ಪರಂಪರೆಯನ್ನು ಬೆಳೆಸಿದ್ದಾರೆ.

ಮಾಸ್ತಿ ಸ್ಮಾರಕಗಳಲ್ಲಿ ಶಿಲೆ, ಶಿಲ್ಪ, ಬರಹ, ಶಿಲ್ಪ-ಬರಹ, ಗುಡಿ, ಊರು, ಅವಶೇಷಗಳು ಹೀಗೆ ಹಲವು ವಿಧಗಳು ಸಿಗುತ್ತವೆ.

**ಮಾಸ್ತಿಶಿಲೆ**: ಕೆಲವು ಊರುಗಳಲ್ಲಿ ಮಾಸ್ತಿಯಾದವಳ ನೆನಪಿಗೆ ಗುಂಡುಕಲ್ಲನ್ನು ಇಟ್ಟು ಪೂಜಿಸುತ್ತಾರೆ. ಇವುಗಳನ್ನೆ ಮಾಸ್ತಿಶಿಲೆಗಳೆನ್ನಬಹುದು.

**ಮಾಸ್ತಿಶಿಲ್ಪ**: ಮಾಸ್ತಿಶಿಲ್ಪಗಳಲ್ಲಿ ಎತ್ತಿದ ಬಲಗೈ, ಮುಂಗೈಯಲ್ಲಿ ಬಳೆ, ಹೆಬ್ಬೆರಳು ಮತ್ತು ತೋರುಬೆರಳು ನಡುವೆ ನಿಂಬೆಹಣ್ಣು, ವಿರಳವಾಗಿ ಪದ್ಮ ಇರುತ್ತದೆ. ಸ್ವರೂಪದ ದೃಷ್ಟಿಯಿಂದ ಮಾಸ್ತಿಶಿಲ್ಪಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು.

1) ಸ್ತಂಭದಿಂದ ಹೊರಬಂದ ಎತ್ತಿದ ಬಲದೋಳು ಶಿಲ್ಪ

2) ಎತ್ತಿದ ಬಲದೋಳಿನ ಸ್ತ್ರೀ ಶಿಲ್ಪ

3) ಪತಿಯೊಂದಿಗೆ ನಿಂತು ಎತ್ತಿದ ಬಲದೋಳಿನ ಸ್ತ್ರೀ ಶಿಲ್ಪ

ಸ್ತಂಭದಿಂದ ಹೊರಬಂದ ತೋಳಿನ ಶಿಲ್ಪವನ್ನು ವ್ಯಾಸನ ತೋಳು ಎಂದು ಕರೆಯಲಾಗುತ್ತದೆ. ಒಬ್ಬ ವ್ಯಕ್ತಿಯ ಒಬ್ಬ ಪತ್ನಿ ಸಹಗಮನ ಮಾಡಿದ್ದರೆ, ಕಂಬದಿಂದ ಒಂದು ಕೈ ಹೊರಬಂದಂತೆ ಕೆತ್ತಲಾಗಿರುತ್ತದೆ. ಇದನ್ನು ಒಕ್ಕೈ ಮಾಸ್ತಿ ಎಂದು ಕರೆಯಲಾಗುತ್ತದೆ. ಇಬ್ಬರು ಪತ್ನಿಯರು ಸಹಗಮನ ಮಾಡಿದ್ದರೆ, ಕಂಬದಿಂದ ಎರಡು ಕೈ ಹೊರಬಂದಂತೆ ಕೆತ್ತಿರುತ್ತಾರೆ. ಇದನ್ನು ಇಕ್ಕೈ ಮಾಸ್ತಿ ಎಂದು ಕರೆಯಲಾಗುತ್ತದೆ.

**ಮಾಸ್ತಿಶಾಸನ**: ಸ್ತ್ರೀಯೊಬ್ಬಳು ಮಹಾಸತಿಯಾದ ಬಗ್ಗೆ ಶಾಸನಗಳನ್ನು ಕೆತ್ತಿಸಿರಬಹುದು. ಇಂತಹವು ಮಾಸ್ತಿಶಾಸನಗಳೆನಿಸಿಕೊಳ್ಳುತ್ತವೆ.

**ಮಾಸ್ತಿಶಿಲ್ಪ-ಶಾಸನ**: ಮಾಸ್ತಿ ಶಿಲ್ಪದ ಕೆಳಗೆ ಅಥವಾ ಮೇಲೆ ಅಥವಾ ಸ್ಥಂಭದ ಮಧ್ಯದ ಪಟ್ಟಿಕೆಗಳಲ್ಲಿ ಬರಹಗಳು ಗೋಚರಿಸುತ್ತವೆ. ಇವುಗಳು ಮಾಸ್ತಿಶಿಲ್ಪ-ಶಾಸನಗಳು ಎನಿಸಿಕೊಳ್ಳುತ್ತವೆ.

**ಮಾಸ್ತಿಗುಡಿ**: ಕೆಲವು ಊರುಗಳಲ್ಲಿ ಮಾಸ್ತಿಶಿಲೆ ಅಥವಾ ಶಿಲ್ಪದ ಮೇಲೆ ಗುಡಿಕಟ್ಟಿ ಪೂಜಿಸಲಾಗುತ್ತಿದೆ. ಇವು ಮಾಸ್ತಿಗುಡಿಗಳೆನಿಸಿಕೊಳ್ಳುತ್ತವೆ.

**ಮಾಸ್ತಿ ಅವಶೇಷಗಳು**: ಕೆಲವು ಸಲ ಮಾಸ್ತಿಯಾದವಳ ವಂಶಜರ ಮನೆಯಲ್ಲಿ ಅವಳ ಬಳೆ, ಕಾಲಂದಿಗೆ, ಕನ್ನಡಿ, ಇನ್ನಿತರ ಆಭರಣಗಳು ಇನ್ನೂ ಪೂಜಿಸಲ್ಪಡುತ್ತಿವೆ. ಇವುಗಳು ಮಾಸ್ತಿ ಅವಶೇಷಗಳೆನಿಸಿವೆ.

**ಮಾಸ್ತಿ ಊರು**: ಮಹಾಸತಿಯಾದವಳ ನೆನಪನ್ನು ಹೊತ್ತು ಅನೇಕ ಊರುಗಳು ತಲೆಯೆತ್ತಿ ನಿಂತಿವೆ. ಇಂತವು ಮಾಸ್ತಿ ಊರುಗಳೆನಿಸಿಕೊಳ್ಳುತ್ತವೆ.

ಕರ್ನಾಟಕದ ವಿವಿಧ ಭಾಗಗಳಂತೆ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲೂಕು ಪ್ರಾಚೀನ ಕಾಲದಿಂದಲೂ ಮಹಾಸತಿ ಪದ್ಧತಿಯು ಒಂದು ಪರಂಪರೆಯಾಗಿ ಉಳಿದುಕೊಂಡು ಬಂದಿದ್ದು, ಈ ಬಗ್ಗೆ ಮಾಹಿತಿ ನೀಡುವ ಅಪಾರ ಆಕರಗಳು ದೊರೆಯುತ್ತವೆ. ಮೇಲ್ಕಂಡ ಮಾಹಿತಿ ಆಧಾರದ ಮೇಲೆ ಹಾಗೂ ಮಾರ್ಗದರ್ಶಕರ ಸಲಹೆಯಂತೆ ಮಹಾಸತಿ ಪರಂಪರೆಯ ಬಗ್ಗೆ ಮಾಹಿತಿ ಸಂಗ್ರಹಿಸಿ ಹಲವಾರು ಹೊಸ ವಿಚಾರಗಳನ್ನು ಬೆಳಕಿಗೆ ತರುವ ಪ್ರಾಮಾಣಿಕ ಪ್ರಯತ್ನ ಮಾಡಲಾಗುವುದು.

**ಇಕ್ಕೈ ಮಾಸ್ತಿ ಚಿದರವಳ್ಳಿ**

ಚಿದರವಳ್ಳಿ ಗ್ರಾಮದ ಇಕ್ಕೈಮಾಸ್ತಿಗಲ್ಲು 4 ಅಡಿ ಎತ್ತರ, 3 ಅಡಿ ಅಗಲ, 4 ಇಂಚು ದಪ್ಪವನ್ನು ಹೊಂದಿದ್ದು, ಬೆಣಚುಕಲ್ಲಿನಿಂದ ನಿರ್ಮಾಣ ಮಾಡಲಾಗಿದೆ.

ಈ ಇಕ್ಕೈ ಮಾಸ್ತಿಗಲ್ಲು 3 ಹಂತಗಳಿಂದ ಕೂಡಿದ್ದು, ಮೊದಲನೆಯ ಹಂತದಲ್ಲಿ ಮಧ್ಯಭಾಗದಲ್ಲಿ 1.6 ಅಡಿ ಎತ್ತರದ ಸ್ತಂಭವಿದೆ. ಸ್ತಂಭದ 1 ಅಡಿ ಎತ್ತರದಲ್ಲಿ ಎರಡೂ ಬಾಹುಗಳಲ್ಲಿಯೂ 8 ಅಂಗುಲ ಉದ್ದದ, 2 ಅಂಗುಲ ದಪ್ಪದ ತೋಳಿನ ಶಿಲ್ಪವಿದೆ. ಮೊಳಸಂದಿನಿಂದ 6 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಹೆಬ್ಬೆರಳು ಮತ್ತು ತೋರುಬೆರಳಿನ

ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ಸ್ತಂಭದ ಬಲಭಾಗದ ಅವಕಾಶದಲ್ಲಿ ಕುದುರೆ ಮೇಲೆ ಕುಳಿತು ಖಡ್ಗವನ್ನು ಮೇಲೆತ್ತಿರುವ ಶಿಲ್ಪವಿದೆ. ಎಡಭಾಗದ ಅವಕಾಶದಲ್ಲಿ ಕುದುರೆಯ ಮೇಲೆ ಕುಳಿತು ಎರಡೂ ಕೈಗಳನ್ನು ಮೇಲೆತ್ತಿದ ಮಾಸ್ತಿ ಶಿಲ್ಪವಿದೆ.

2ನೇ ಹಂತದಲ್ಲಿ ಒಬ್ಬ ವೀರ ಆತನ ಎಡಬಲದಲ್ಲಿ ನಿಂತಿರುವ ಇಬ್ಬರು ಮಹಾಸತಿಯರನ್ನು ಸ್ವರ್ಗಕ್ಕೆ ಎಳೆದೊಯ್ಯುತ್ತಿರುವ ಇಬ್ಬರು ಅಪ್ಸರೆಯರ ಶಿಲ್ಪವಿದೆ.

3ನೇ ಹಂತದಲ್ಲಿ ಒಬ್ಬ ವೀರ ಆತನ ಎಡಬಲದಲ್ಲಿ ಕೈಮುಗಿದು ಕುಳಿತ ಇಬ್ಬರು ಮಾಸ್ತಿಯರ ಶಿಲ್ಪವಿದೆ. ಬಲಭಾಗದಲ್ಲಿ ಪುರೋಹಿತ, ಲಿಂಗ, ಬಸವನ ಶಿಲ್ಪವಿರುವುದರಿಂದ ಇದೊಂದು ಅದ್ಭುತವಾದ ವೀರಮಾಸ್ತಿ ಎಂದು ಹೇಳಬಹುದಾಗಿದೆ.(ಚಿತ್ರ ಸಂ. 54)

**ಒಕ್ಕೈ ಮಾಸ್ತಿಕಲ್ಲು ಮಾದಾಪುರ**

ಈ ಗ್ರಾಮವು ತಿರುಮಕೂಡಲು ನರಸೀಪುರದಿಂದ 6 ಕಿ.ಮೀ. ದೂರದಲ್ಲಿದೆ. ಮಾದಾಪುರ ವೀರಶೈವರ ಬೀದಿಯಲ್ಲಿ ಈ ಒಕ್ಕೈ ಮಾಸ್ತಿಕಲ್ಲಿದೆ. ಇದು 4.5 ಅಡಿ ಎತ್ತರ, 2 ಅಡಿ ಅಗಲ, 6 ಇಂಚು ದಪ್ಪದಾಗಿದ್ದು ಬಿಳಿಅರೆಗಲ್ಲಿನಿಂದ ಕೆತ್ತನೆ ಮಾಡಲಾಗಿದೆ.

ಈ ಮಾಸ್ತಿಗಲ್ಲು ಶಿಲೆಯ ಎಡಭಾಗದಲ್ಲಿ ಸುಮಾರು 3 ಅಡಿ ಎತ್ತರದ ಸ್ತಂಭವಿದೆ. ಸ್ತಂಭದ 2 ಅಡಿ ಎತ್ತರದಲ್ಲಿ 1 ಅಡಿ ಉದ್ದ 3 ಅಂಗುಲ ದಪ್ಪದ ಬಲದೋಳು ಶಿಲ್ಪವಿದೆ. ಮೊಳಸಂದಿನಿಂದ 1 ಅಡಿ 3 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಹೆಬ್ಬೆರಳನಲ್ಲಿ ಬಳೆಯಿದೆ. ಮುಂಗೈಯಲ್ಲಿ(ಕಂಕಣ) 4 ತೋಳಿನಲ್ಲಿ ಒಂದು ಬಳೆಯಿದೆ. ತೋಳಿನ ಶಿಲ್ಪದ ತಳಭಾಗದ ಅವಕಾಶದಲ್ಲಿ ಕೈ ಮುಗಿದು ನಿಂತ ದಂಪತಿಗಳ ಶಿಲ್ಪವಿದೆ.(ಚಿತ್ರ ಸಂ. 55)

**ಒಕ್ಕೈ ಮಾಸ್ತಿಕಲ್ಲು ಬೆನಕನಹಳ್ಳಿ**

ಬೆನಕನಹಳ್ಳಿ ಗ್ರಾಮದ ಮಂಟೇಸ್ವಾಮಿ ಗದ್ದುಗೆಯ ಹಿಂಭಾಗದಲ್ಲಿರುವ ಈ ಮಾಸ್ತಿಗಲ್ಲು 4 ಅಡಿ ಎತ್ತರ, 3 ಅಡಿ ಅಗಲ, 6 ಇಂಚು ದಪ್ಪದಾಗಿ ಬಿಳಿಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ.

ಈ ಮಾಸ್ತಿಯು ಎಡಭಾಗದಲ್ಲಿ 3 ಅಡಿ ಎತ್ತರದ 4 ಅಂಗುಲ ದಪ್ಪದ ಸ್ತಂಭವಿದೆ. ಸ್ತಂಭದ 1 ಅಡಿ 4 ಅಂಗುಲ ಎತ್ತರದಲ್ಲಿ 1 ಅಡಿ ಉದ್ದದ ಬಲದೋಳು ಶಿಲ್ಪವಿದೆ.

ಮೊಳಸಂದಿನಿಂದ 1 ಅಡಿ 4 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಹೆಬ್ಬೆರಳು ಮತ್ತು ತೋರುಬೆರಳಿನ ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ತೋಳಿನಲ್ಲಿ 2 ಮತ್ತು ಮುಂಗೈಯಲ್ಲಿ 2 ಬಳೆಗಳಿವೆ. ಬಲದೋಳು ಶಿಲ್ಪದ ಅವಕಾಶದಲ್ಲಿ ಬಲಗೈಯಲ್ಲಿ ಖಡ್ಗ ಹಿಡಿದು ಎಡಗೈಯನ್ನು ಮಾಸ್ತಿ ಹೆಗಲ ಮೇಲೆ ಹಾಕಿ ನಿಂತಿರುವ ವೀರ ಮಾಸ್ತಿಯರ ಶಿಲ್ಪವಿದೆ.(ಚಿತ್ರ ಸಂ. 56)

**ಒಕ್ಕೈ ಮಾಸ್ತಿಕಲ್ಲು ಬೆನಕನಹಳ್ಳಿ**

ಅದೇ ಗ್ರಾಮದ ಮಾಸ್ತಿಕಲ್ಲಿನ ಪಕ್ಕದಲ್ಲಿರುವ ಮತ್ತೊಂದು ಮಾಸ್ತಿಗಲ್ಲು 4.5 ಅಡಿ ಎತ್ತರ, 2.5ಅಡಿ ಅಗಲ, 6 ಇಂಚು ದಪ್ಪದಾಗಿ ಬಿಳಿಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ.

ಈ ಮಾಸ್ತಿಯು ಎಡಭಾಗದಲ್ಲಿ 3 ಅಡಿ ಎತ್ತರದ 4 ಇಂಚು ದಪ್ಪದಾದ ಸ್ತಂಭವಿದೆ. ಸ್ತಂಭದ 1 ಅಡಿ ಎತ್ತರದಲ್ಲಿ 1 ಅಡಿ ಉದ್ದದ, 3 ಅಂಗುಲ ದಪ್ಪದಾಗಿ ಹೊರಬಂದ ಬಲದೋಳು ಶಿಲ್ಪವಿದೆ. ಮೊಳಸಂದಿನಿಂದ 1 ಅಡಿ 6 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಹೆಬ್ಬೆರಳು ಮತ್ತು ತೋರುಬೆರಳಿನ ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ಮುಂಗೈಯಲ್ಲಿ 4, ತೋಳಿನಲ್ಲಿ 4 ಬಳೆಗಳಿವೆ. ಬಲದೋಳು ಶಿಲ್ಪದ ಅವಕಾಶದಲ್ಲಿ ಪರಸ್ಪರ ಹೆಗಲ ಮೇಲೆ ಹಾಕಿ ನಿಂತಿರುವ ವೀರ ದಂಪತಿಗಳ ಶಿಲ್ಪವಿದೆ.(ಚಿತ್ರ ಸಂ.57)

**ಒಕ್ಕೈ ಮಾಸ್ತಿ ಬೆನಕನಹಳ್ಳಿ**

ಅದೇ ಗ್ರಾಮದ ಮಾಸ್ತಿಕಲ್ಲಿನ ಪಕ್ಕದಲ್ಲಿರುವ ಮತ್ತೊಂದು ಮಾಸ್ತಿಗಲ್ಲು 3 ಅಡಿ ಎತ್ತರ, 2.5ಅಡಿ ಅಗಲ, 5 ಇಂಚು ದಪ್ಪದಾಗಿ ಬಿಳಿಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ಒಕ್ಕೈ ಮಾಸ್ತಿ ಶಿಲೆಯ ಎಡಭಾಗದ ಮೇಲ್ತುದಿಯು ಶಿಥಿಲವಾಗಿದೆ. ಶಿಲೆಯ ಎಡಭಾಗದಲ್ಲಿ 2.5 ಅಡಿ ಎತ್ತರದ ಸ್ತಂಭವಿದ್ದು, ಸ್ತಂಭದ ಮೇಲ್ಭಾಗ ಶಿಥಿಲವಾಗಿದೆ. 1 ಅಡಿ 6 ಇಂಚು ಎತ್ತರದಲ್ಲಿ 1 ಅಡಿ ಉದ್ದ, 3 ಅಂಗುಲ ದಪ್ಪದ ಬಲದೋಳು ಶಿಲ್ಪವಿದ್ದು, ಮೊಳಸಂದಿನಿಂದ 1 ಅಡಿ 6 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಅಭಯಹಸ್ತದ ಶಿಲ್ಪವು ಶಿಥಿಲವಾಗಿರುವುದರಿಂದ ಅಸ್ಪಷ್ಟವಾಗಿದೆ. ತೋಳಿನ ತಳಭಾಗದಲ್ಲಿ ಪರಸ್ಪರ ಹೆಗಲ ಮೇಲೆ ಹಾಕಿ ನಿಂತಿರುವ ವೀರ ದಂಪತಿಗಳ ಶಿಲ್ಪವಿದೆ.(ಚಿತ್ರ ಸಂ. 58)

**ಒಕ್ಕೈ ಮಾಸ್ತಿ ಕೆಂಪಯ್ಯನಹುಂಡಿ**

ಮೈಸೂರು–ತಿ.ನರಸೀಪುರ ಮುಖ್ಯ ರಸ್ತೆಯ ಕೆಂಪಯ್ಯನಹುಂಡಿಗೆ ಹತ್ತಿರದಲ್ಲಿ 5 ಅಡಿ ಎತ್ತರ, 3ಅಡಿ ಅಗಲ, 5 ಇಂಚು ದಪ್ಪದಾದ ಬೆಣಚುಕಲ್ಲಿನಿಂದ ಈ ವೀರಮಾಸ್ತಿಗಲ್ಲನ್ನು ಕೆತ್ತನೆಯನ್ನು ಮಾಡಲಾಗಿದೆ. ಈ ವೀರಮಾಸ್ತಿಗಲ್ಲು 3 ಹಂತಗಳನ್ನು ಒಳಗೊಂಡಿದೆ.

ಮೊದಲನೆ ಹಂತದಲ್ಲಿ ಎಡಭಾಗದಲ್ಲಿ ಈಟಿಯನ್ನು ಹಿಡಿದ ಅಶ್ವರೋಹಿ ಸೈನಿಕ/ವೀರನೊಡನೆ ಗುರಾಣಿ ಮತ್ತು ಈಟಿಯನ್ನು ಹಿಡಿದ ವೀರನು ಹೋರಾಡುತ್ತಿರುವ ದೃಶ್ಯದ ಶಿಲ್ಪವಿದೆ. ಬಲಭಾಗದಲ್ಲಿ ಸ್ತಂಭದಿಂದ ಹೊರಬಂದ ಒಕ್ಕೈಮಾಸ್ತಿ/ಬಲದೋಳು ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ.

2ನೇ ಹಂತದಲ್ಲಿ ಪರಸ್ಪರ ಕೈ ಹಿಡಿದು ನಿಂತ ವೀರಮಾಸ್ತಿಯರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವನ್ನು ಕಡೆಯಲಾಗಿದೆ.

3ನೇ ಹಂತದಲ್ಲಿ ಕೈಮುಗಿದು ಪದ್ಮಾಸನದಲ್ಲಿ ಕುಳಿತ ವೀರಮಾಸ್ತಿಯರ ಶಿಲ್ಪ, ದೂಪದ ಆರತಿ ಮತ್ತು ಗಂಟೆಯಿಂದ ಪೂಜಿಸುತ್ತಿರುವ ಪುರೋಹಿತನ ಶಿಲ್ಪ, ಲಿಂಗ, ಬಸವನ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ.(ಚಿತ್ರ ಸಂ. 59)

**ಒಕ್ಕೈ ಮಾಸ್ತಿ ಕಲ್ಲು ತಿರುಮಕೂಡಲು ನರಸೀಪುರ**

ತಿರುಮಕೂಡಲು ನರಸೀಪುರ ಹಳೆಯ ಸಂತೆಮಾಳದಲ್ಲಿರುವ ಮೂಲಸ್ಥಾನೇಶ್ವರದ ದೇವಾಲಯದ ಸ್ವಲ್ಪ ದೂರಕ್ಕೆ ಮಾರಮ್ಮನ ದೇವಾಲಯದ ಪಕ್ಕದಲ್ಲಿಯೇ ಮೂರು ಮಾಸ್ತಿಕಲ್ಲುಗಳನ್ನು ನಿಲ್ಲಿಸಲಾಗಿದೆ. ವೀರರ ಅಥವಾ ರಾಜ ಪ್ರಮುಖರ ಪತ್ನಿಯರೂ ಗಂಡ ಮರಣ ಹೊಂದಿದ ನಂತರ ಪ್ರಾಣಾರ್ಪಣೆಯನ್ನು ಮಾಡಿಕೊಳ್ಳುತ್ತಿದ್ದರು. ಅಂದರೆ ಬೆಂಕಿಯಲ್ಲಿ ಆಹುತಿಯಾಗುತ್ತಿದ್ದುದು ಹಿಂದೆ ಪ್ರಚಲಿತದಲ್ಲಿತ್ತು. ಆದಕಾರಣ ತಮ್ಮ ಗಂಡಂದಿರ ನೆನಪಿಗೋಸ್ಕರ ಪ್ರಾಣಾರ್ಪಣೆ ಮಾಡಿದಂತಹ ವೀರವನಿತೆಯರು ಸಾಕಷ್ಟು ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಈ ಹಿನ್ನೆಲೆಯನ್ನು ಅವಲೋಕಿಸಿದಾಗ ತಿರುಮಕೂಡಲು ನರಸೀಪುರದಲ್ಲಿ ನನ್ನ ಕ್ಷೇತ್ರ ವ್ಯಾಪ್ತಿಗೆ ಸೇರಿದ ನೆಲೆಯಲ್ಲಿ ಮೂರು ಮಾಸ್ತಿಕಲ್ಲುಗಳು ಒಂದೇ ಸ್ಥಳದಲ್ಲಿ ದೊರೆತಿರುವುದು ಒಂದು ವಿಶೇಷತೆ ಎಂದರೆ ತಪ್ಪಾಗಲಾರದು.

ಈ ಮಹಾಸತಿಕಲ್ಲಿನ ಒಕ್ಕೈ ಮಹಾಸತಿ ಶಿಲ್ಪಗಳಿವೆ. ಈ ಶಿಲ್ಪಗಳು ನಿಲ್ಲಿಸಿರುವ ಕಲ್ಲಿನಲ್ಲಿ ಮೇಲೆತ್ತಿದ ತೋಳುಗೈಯನ್ನೂ ಜೋಡಿಸಲಾಗಿದೆ. ಈ ಕಲ್ಲುಗಳಿಗೆ ಸರಳವಾಗಿ ಅಲಂಕರಣವನ್ನೂ ಮಾಡಲಾಗಿದ್ದು ಕಲ್ಲಿನ ತುದಿಗಳನ್ನು ಶಿಖರ ಮಾದರಿಯಲ್ಲಿ ಅಂದರೆ ಅರಳಿ ಎಲೆಯ ಮಾದರಿಯಲ್ಲಿ ಕಡೆಯಲಾಗಿದೆ. ಇಲ್ಲಿಯೂ ಶಿವಮುದ್ರೆಯನ್ನು ಕಾಣಬಹುದು. ನಂತರ ಸೂರ್ಯ-ಚಂದ್ರರ ಸಾಕ್ಷಿಯಾಗಿ ಕೆತ್ತಲ್ಪಟ್ಟಿರುವುದು ಕಂಡು ಬರುತ್ತದೆ.

**ಒಕ್ಕೈ ಮಾಸ್ತಿ ಕಲ್ಲು ತಿರುಮಕೂಡಲು ನರಸೀಪುರ**

ಈ ಮಹಾಸತಿಕಲ್ಲಿನ ಒಕ್ಕೈ ಮಹಾಸತಿ ಶಿಲ್ಪಗಳಿವೆ. ಈ ಶಿಲ್ಪಗಳು ನಿಲ್ಲಿಸಿರುವ ಕಲ್ಲಿನಲ್ಲಿ ಮೇಲೆತ್ತಿದ ತೋಳುಗೈಯನ್ನೂ ಜೋಡಿಸಲಾಗಿದೆ. ಈ ಕಲ್ಲುಗಳಿಗೆ ಸರಳವಾಗಿ ಅಲಂಕರಣವನ್ನೂ ಮಾಡಲಾಗಿದ್ದು ಕಲ್ಲಿನ ತುದಿಗಳನ್ನು ಶಿಖರ ಮಾದರಿಯಲ್ಲಿ ಅಂದರೆ ಅರಳಿ ಎಲೆಯ ಮಾದರಿಯಲ್ಲಿ ಕಡೆಯಲಾಗಿದೆ. ಇಲ್ಲಿಯೂ ಶಿವಮುದ್ರೆಯನ್ನು ಕಾಣಬಹುದು. ನಂತರ ಸೂರ್ಯ-ಚಂದ್ರರ ಸಾಕ್ಷಿಯಾಗಿ ಕೆತ್ತಲ್ಪಟ್ಟಿರುವುದು ಕಂಡು ಬರುತ್ತದೆ.

**ವೀರಮಾಸ್ತಿ ಆಲಗೂಡು**

ಆಲಗೂಡು ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ ಮೂರು ಕಿ.ಮೀ.ದೂರದಲ್ಲಿದೆ. ಈ ಗ್ರಾಮದ ಸಿದ್ದೇಶ್ವರ ದೇವಾಲಯದ ಮುಂಭಾಗದಲ್ಲಿರುವ ವೀರಗಲ್ಲೊಂದು 5 ಐದು ಅಡಿ ಎತ್ತರವಿದ್ದು 6 ಅಡಿ ಅಗಲವಾಗಿದ್ದು, 5 ಇಂಚು ದಪ್ಪವಾಗಿದೆ. ಈ ವೀರಗಲ್ಲು 3 ಹಂತಗಳನ್ನೊಂದಿದ್ದು, ಮೊದಲನೆಯ ಹಂತದಲ್ಲಿ ವೀರರಿಬ್ಬರ ಹೋರಾಟದ ದೃಶ್ಯವಿದೆ. ಬಲಭಾಗದ ವೀರನು ಈಟಿ ಮತ್ತು ಗುರಾಣಿಯನ್ನು ಹಿಡಿದಿದ್ದು, ಈಟಿಯಿಂದ ಶತ್ರು ವೀರನನ್ನು ಹಿರಿಯುತ್ತಿದ್ದಾನೆ. ಈಟಿಯು ವಿಶೇಷವಾಗಿದ್ದು ಈಟಿಯ ಹಿಂಭಾಗದಲ್ಲಿ ಅಲಂಕೃತ ಕುಚ್ಚನ್ನು ಕಟ್ಟಲಾಗಿದೆ. ಎಡಭಾಗದ ವೀರನು **'ಎಸ್'** ಆಕಾರದಲ್ಲಿ ಭಾಗಿರುವ ವಿಶೇಷವಾದ ಖಡ್ಗವನ್ನು ಮತ್ತು ಎಲೆಭರ್ಜಿಯನ್ನು (ಸೂಜಿ ಭರ್ಜಿ, ಎಲೆಭರ್ಜಿ, ತ್ರಿಶೂಲಾಕಾರದ ಭರ್ಜಿ) ಹಿಡಿದಿದ್ದಾನೆ.

2ನೇ ಹಂತದಲ್ಲಿ ಅಪ್ಸರೆಯರಿಬ್ಬರು ವೀರನ ಕೈಯನ್ನು ಹಿಡಿದು ಸ್ವರ್ಗಕ್ಕೆ ಹಾರುತ್ತಿರುವ ಶಿಲ್ಪವಿದೆ. ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಮತ್ತು ಮಾಸ್ತಿಯರ ಶಿಲ್ಪವಿದೆ. ಮಧ್ಯದಲ್ಲಿ ಬಸವನ ಶಿಲ್ಪವಿದೆ. ಎಡಭಾಗದಲ್ಲಿ ಅಲಂಕೃತ ಮಂಟಪದಲ್ಲಿರುವ ಲಿಂಗದ ಭಾಗದಲ್ಲಿ

ಪೂಜಿಸುತ್ತಿರುವ ಮಾಸ್ತಿ, ಎಡಭಾಗದಲ್ಲಿ ಕೈಮುಗಿದು ನಿಂತ ವೀರನ ಶಿಲ್ಪವಿದೆ.(ಚಿತ್ರ ಸಂಖ್ಯೆ 60)

**ವೀರಮಾಸ್ತಿ ಆಲಗೂಡು**

ಇದೇ ಗ್ರಾಮದ ಅನತಿ ದೂರದಲ್ಲಿರುವ ವೀರಗಲ್ಲು 4 ಅಡಿ ಎತ್ತರ, 3 ಅಡಿ ಅಗಲ, 6 ಅಂಗುಲ ದಪ್ಪವಾಗಿದೆ. ಈ ವೀರಗಲ್ಲು ಒರಟಾದ ಬೆಣಚುಕಲ್ಲಾಗಿದೆ. ಈ ವೀರ ಮಾಸ್ತಿಗಲ್ಲು 3 ಹಂತಗಳಿಂದ ಕೂಡಿದ್ದು, ಮೊದಲನೆಯ ಹಂತದಲ್ಲಿ ವೀರರ ಹೋರಾಟದ ದೃಶ್ಯವಿದೆ. ಎಡಭಾಗದ ವೀರ ಈಟಿ ಮತ್ತು ಗುರಾಣಿಯನ್ನು ಹಿಡಿದಿದ್ದಾನೆ. ಬಲಭಾಗದ ವೀರ ಕುದುರೆಯ ಮೇಲೆ ಕುಳಿತು ಈಟಿಯನ್ನು ಎಸೆಯುತ್ತಿದ್ದಾನೆ. 2ನೇ ಹಂತದಲ್ಲಿ ವೀರ ಮತ್ತು ಆತನ ಎಡ ಬಲದಲ್ಲಿ ನಿಂತ ಇಬ್ಬರ ಮಾಸ್ತಿಯರನ್ನು ಸ್ವರ್ಗಕ್ಕೆ ಕರೆದ್ಯೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ.

3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಮಧ್ಯಭಾಗದಲ್ಲಿ ಲಿಂಗ ಮತ್ತು ಎಡಭಾಗದಲ್ಲಿ ಕೈಮುಗಿದು ನಿಂತಿರುವ ಭಕ್ತನ ಮತ್ತು ಬಸವನ ಶಿಲ್ಪವಿದೆ.

**ವೀರಮಾಸ್ತಿ ಚಿದರವಳ್ಳಿ**

ಚಿದರವಳ್ಳಿ ಗ್ರಾಮದ ಗಣೇಶ ಗುಡಿಯ ಅನತಿ ದೂರದಲ್ಲಿರುವ ಮತ್ತೊಂದು ವೀರಮಾಸ್ತಿಗಲ್ಲು. ಈ ವೀರಗಲ್ಲು 6 ಅಡಿ ಎತ್ತರ, 3 ಅಡಿ ಅಗಲ, 6 ಇಂಚು ದಪ್ಪವನ್ನು ಹೊಂದಿದೆ. ಈ ವೀರಗಲ್ಲು ಬೆಣಚು ಕಲ್ಲನ್ನು ಬಳಸಿ ಕೆತ್ತನೆ ಮಾಡಲಾಗಿದೆ. ಈ ವೀರಮಾಸ್ತಿಗಲ್ಲು ನಾಲ್ಕು ಹಂತಗಳಿಂದ ಕೂಡಿದೆ. ಮೊದಲನೆಯ ಹಂತದಲ್ಲಿ ಖಡ್ಗ ಗುರಾಣಿಯನ್ನು ಹಿಡಿದಿರುವ ವೀರರಿಬ್ಬರ ಹೋರಾಟದ ದೃಶ್ಯವಿದೆ. 2ನೇ ಹಂತದಲ್ಲಿ ವೀರಮಾಸ್ತಿಯನ್ನು ಸ್ವರ್ಗಕ್ಕೆ ಕರೆದ್ಯೊಯ್ಯುತ್ತಿರುವ ಶಿಲ್ಪವಿದೆ. 3ನೇ ಹಂತದಲ್ಲಿ ಪೀಠದ ಮೇಲೆ ಕುಳಿತ ವೀರನಿಗೆ ಪುಷ್ಪಮಾಲಿಕೆಯನ್ನು ಹಾಕುತ್ತಿರುವ ಅಪ್ಸರೆಯರ ಶಿಲ್ಪವಿದೆ. 4ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ ಮತ್ತು ಮಾಸ್ತಿ ಲಿಂಗ, ಪುರೋಹಿತ, ಬಸವನ ಶಿಲ್ಪವಿದೆ.(ಚಿತ್ರ ಸಂಖ್ಯೆ 61)

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ ಅನತಿ ದೂರದಲ್ಲಿರುವ ಮತ್ತೊಂದು ವೀರಮಾಸ್ತಿಗಲ್ಲು. ಈ ವೀರಮಾಸ್ತಿಗಲ್ಲು 3ಅಡಿ ಎತ್ತರ, 2 ಅಡಿ ಅಗಲ, 5 ಇಂಚು ದಪ್ಪವನ್ನು ಹೊಂದಿರುವ ವೀರಗಲ್ಲೊಂದು ಬೆಣಚು ಕಲ್ಲಿನಿಂದ ಕಡೆಯಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಒಳಗೊಂಡಿದ್ದು, ಮೊದಲನೆಯ ಭಾಗವು ಶಿಥಿಲವಾಗಿದ್ದುದರಿಂದ ಅಸ್ಪಷ್ಟವಾಗಿದೆ. 2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3 ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ ಮಾಸ್ತಿ ಪುರೋಹಿತ ಮತ್ತು ಲಿಂಗದ ಶಿಲ್ಪವಿದೆ.(ಚಿತ್ರ ಸಂಖ್ಯೆ 62)

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ ಗಣೇಶನ ಗುಡಿಯ ಹತ್ತಿರವಿರುವ ಈ ವೀರಮಾಸ್ತಿಗಲ್ಲು 4 ಅಡಿ ಎತ್ತರ, 2.5 ಅಡಿ ಅಗಲ, 6 ಇಂಚು ದಪ್ಪವನ್ನು ಹೊಂದಿರುವ ಅರೆಗಲ್ಲಿನಿಂದ ರಚನೆಯನ್ನು ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಒಳಗೊಂಡಿದೆ. ಮೊದಲನೆಯ ಹಂತದಲ್ಲಿ ವೀರರಿಬ್ಬರು ಖಡ್ಗ ಗುರಾಣಿಯನ್ನು ಹಿಡಿದು ಹೋರಾಡುತ್ತಿದ್ದಾರೆ. ಬಲಭಾಗದ ವೀರ ಶತ್ರು ಒಬ್ಬನನ್ನು ನಾಶ ಮಾಡಿ ತನ್ನ ಪಾದದಲ್ಲಿ ಮೆಟ್ಟಿನಿಂತಿದ್ದಾನೆ. ಎಡಭಾಗದ ವೀರ ಖಡ್ಗದಿಂದ ಹಿರಿಯುತ್ತಿದ್ದಾನೆ. 2ನೇ ಹಂತದಲ್ಲಿ ವೀರರನ್ನು ಸ್ವರ್ಗಕ್ಕೆ ಎಳೆದೊಯ್ಯುತ್ತಿರುವ ಶಿಲ್ಪವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ, ಕೈಮುಗಿದು ನಿಂತ ಮಾಸ್ತಿ, ಮಂಟಪದಲ್ಲಿರುವ ಲಿಂಗ, ಪುರೋಹಿತ, ಬಸವನ ಶಿಲ್ಪವಿದೆ.(ಚಿತ್ರ ಸಂಖ್ಯೆ 63)

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ ಗಣೇಶನ ಗುಡಿಯ ಹತ್ತಿರವಿರುವ ಈ ವೀರಮಾಸ್ತಿಗಲ್ಲು 6 ಅಡಿ ಎತ್ತರವಿದ್ದು, 3 ಅಡಿ ಅಗಲವನ್ನು ಹೊಂದಿದ್ದು, 8 ಇಂಚು ದಪ್ಪವನ್ನು ಹೊಂದಿದೆ. ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೆಯ ಹಂತದಲ್ಲಿ ಗುರಾಣಿ, ಭರ್ಜಿ ಹಿಡಿದು ಹೋರಾಡುತ್ತಿರುವ ಇಬ್ಬರು ವೀರರ ಶಿಲ್ಪವಿದೆ. ವೀರರ ಹಿಂಭಾಗದಲ್ಲಿ ಮುಂಗಾಲನ್ನು ಮೇಲೆತ್ತಿ ಹೋರಾಟ ಭಂಗಿಯಲ್ಲಿರುವ ಕುದುರೆ ಮೇಲೆ ಕುಳಿತ ವೀರರು ಈಟಿಯನ್ನು ಎಸೆಯುತ್ತಿರುವಂತೆ ಈ ವೀರಗಲ್ಲಿನಲ್ಲಿ ಕೆತ್ತನೆ

ಮಾಡಲಾಗಿದೆ. 2ನೇ ಹಂತದಲ್ಲಿ ವೀರ ಮತ್ತು ಮಾಸ್ತಿಯನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ಮಾಸ್ತಿ, ವೀರ, ಪುರೋಹಿತ, ಮಂಟಪದಲ್ಲಿರುವ ಲಿಂಗ ಬಸವನ ಶಿಲ್ಪವಿದೆ.

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ ಗಣೇಶನ ಗುಡಿಯ ಹತ್ತಿರವಿರುವ ಈ ವೀರಮಾಸ್ತಿಗಲ್ಲು 3 ಅಡಿ ಎತ್ತರ, 3 ಅಡಿ ಅಗಲ, 4 ಇಂಚು ದಪ್ಪವಾಗಿದ್ದು, ಬೆಣಚುಕಲ್ಲಿನಿಂದ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳಿಂದ ಕೂಡಿದೆ. ಮೊದಲನೆಯ ಹಂತದಲ್ಲಿ ಇಬ್ಬರು ವೀರರಿದ್ದು, ಎಡಭಾಗದ ವೀರನು ಖಡ್ಗ, ಗುರಾಣಿಯನ್ನು ಹಿಡಿದು ಹೋರಾಟದ ವೀರನ ಶಿಲ್ಪವಿದೆ. ಆತನ ಹಿಂದೆ ರಾಜ ಛತ್ರಿಯನ್ನು ಹಿಡಿದ ಸೇವಕನ ಶಿಲ್ಪವಿದೆ. ಬಲಭಾಗದಲ್ಲಿ ಖಡ್ಗ ಹಿಡಿದ ವೀರನ ಶಿಲ್ಪವಿದ್ದು, ಈತ ಮೊದಲನೆ ವೀರನ ಅನುಚರನಂತೆ ಕಂಡುಬರುತ್ತಾನೆ. ಇಲ್ಲಿ ಶತ್ರುವೀರನ ಶಿಲ್ಪವು ಕಾಣಬರುವುದಿಲ್ಲ. 2ನೇ ಹಂತದಲ್ಲಿ ಇಬ್ಬರು ವೀರರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ 3 ದೇವಕನ್ಯೆಯರ ಶಿಲ್ಪವಿದೆ. 3 ನೇ ಹಂತದಲ್ಲಿ ಪೀಠದ ಮೇಲೆ ಕುಳಿತಿರುವ ಇಬ್ಬರು ವೀರರು ಬಲಭಾಗದಲ್ಲಿ ಬಲಗೈಯನ್ನು ಮೇಲೆತ್ತಿರುವುದು ಮಾಸ್ತಿ, ಎಡಭಾಗದಲ್ಲಿ ಚಾಮರ ಬೀಸುತ್ತಿರುವ ಶಿಲ್ಪವಿದ್ದು ಅಪ್ಸರೆಯರಿದ್ದಾರೆ.(ಚಿತ್ರ ಸಂಖ್ಯೆ 64)

**ವೀರಮಾಸ್ತಿ ಚಿದರವಳ್ಳಿ**

ಚಿದರವಳ್ಳಿ ಗ್ರಾಮದಲ್ಲಿರುವ ಗಣೇಶನ ಗುಡಿಯ ಮುಂಭಾಗದಲ್ಲಿರುವ ವೀರಮಾಸ್ತಿಗಲ್ಲು 4.5 ಅಡಿ ಎತ್ತರವಾಗಿದ್ದು, 2 ಅಡಿ ಅಗಲವಾಗಿದೆ, 5 ಇಂಚು ದಪ್ಪವಾಗಿದ್ದು ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ.

ಈ ವೀರಮಾಸ್ತಿಗಲ್ಲಿನ ಎಡಭಾಗದಲ್ಲಿ 3 ಅಡಿ ಎತ್ತರದ ಸ್ತಂಭವಿದ್ದು, ಸ್ತಂಭದ 1 ಅಡಿ 6 ಅಂಗುಲ ಎತ್ತರದಲ್ಲಿ 1 ಅಡಿ ಉದ್ದ, 3 ಅಂಗುಲ ಅಗಲವಿರುವ ಬಲ ತೋಳಿನ ಶಿಲ್ಪವಿದೆ. ಮೊಳಸಂದಿನಿಂದ 1 ಅಡಿ 6 ಅಂಗುಲ ಎತ್ತರದ ಮುಂಗೈ ಶಿಲ್ಪವಿದೆ. ಕಂಕಣದಲ್ಲಿ 3 ಬಳೆಗಳಿದ್ದು, ಹೆಬ್ಬೆರಳು ಮತ್ತು ತೋರುಬೆರಳು ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ತೋಳಿನ ತಳಭಾಗದ ಅವಕಾಶದಲ್ಲಿ ಪರಸ್ಪರ ಕೈ ಹಿಡಿದು ನಿಂತ ವೀರ ಮಾಸ್ತಿಯರ ಶಿಲ್ಪವಿದೆ. ವೀರನು ಕೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿರುವುದರಿಂದ ಇದು ಒಕ್ಕೈ ವೀರಮಾಸ್ತಿ ಶಿಲ್ಪವಾಗಿದೆ.

ಈ ಶಿಲ್ಪದ ವಿಶೇಷವೆಂದರೆ ಸ್ತಂಭದ ಕಳಸದ ಮೇಲೆ ನಿಂಬೆಹಣ್ಣಿನ ಸರವನ್ನು ಇಡಲಾಗಿದೆ. ಆದ್ದರಿಂದ ಇದೊಂದು ವಿಶೇಷ ವೀರಮಾಸ್ತಿಗಲ್ಲು ಎಂದು ಹೇಳಬಹುದಾಗಿದೆ.(ಚಿತ್ರ ಸಂಖ್ಯೆ 65)

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ ಗಣೇಶನ ಗುಡಿಯ ಪಕ್ಕದಲ್ಲಿರುವ 2ನೇ ವೀರಮಾಸ್ತಿಗಲ್ಲು 4 ಅಡಿ ಎತ್ತರ, 2.2 ಅಡಿ ಅಗಲ, 5 ಇಂಚು ದಪ್ಪವಾಗಿದ್ದು ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಮಾಸ್ತಿಗಲ್ಲಿನ 3.6ಅಡಿ ಎತ್ತರದ ಸ್ತಂಭವಿದ್ದು, ಸ್ತಂಭದ 2 ಅಡಿ ಎತ್ತರದಲ್ಲಿ 1 ಅಡಿ ಉದ್ದ, 3 ಅಂಗುಲ ದಪ್ಪದ ತೋಳಿನ ಶಿಲ್ಪವಿದೆ. ಮೊಳಸಂದಿನಿಂದ 1 ಅಡಿ ಎತ್ತರದ ಮುಂಗೈ ಶಿಲ್ಪವಿದೆ. ಮುಂಗೈಯಲ್ಲಿ 2 ಬಳೆಗಳಿವೆ. ಹೆಬ್ಬೆರಳು ಮತ್ತು ತೋರುಬೆರಳಿನ ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ಬಲತೋಳಿನ ತಳಭಾಗದ ಅವಕಾಶದಲ್ಲಿ ಪರಸ್ಪರ ಕೈ ಹಿಡಿದು ನಿಂತ ವೀರಮಾಸ್ತಿಯರ ಶಿಲ್ಪವಿದೆ. ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಎತ್ತಿ ಮೇಲೆತ್ತಿರುವುದರಿಂದ ಇದು ವೀರಮಾಸಿಗಲ್ಲೆಂದು ಹೇಳಬಹುದು. ಈ ಶಿಲೆಯ ಮೇಲ್ಭಾಗದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಶಿಲ್ಪವನ್ನು ಕೆತ್ತನೆ ಮಾಡಿರುವುದು ಈ ಶಿಲ್ಪದ ವಿಶೇಷವಾಗಿದೆ.(ಚಿತ್ರ ಸಂಖ್ಯೆ 66)

**ವೀರಮಾಸ್ತಿ ಚಿದರವಳ್ಳಿ**

ಅದೇ ಗ್ರಾಮದ 3ನೇ ವೀರಮಾಸ್ತಿಗಲ್ಲಾಗಿದೆ. ಇದು 5 ಅಡಿ ಎತ್ತರ, 2.5 ಅಡಿ ಅಗಲ, 4 ಅಂಗುಲ ದಪ್ಪವಾಗಿದ್ದು, ಬಿಳಿ ಅರೆಕಲ್ಲಿನಿಂದ ಕೆತ್ತನೆ ಮಾಡಲಾಗಿದೆ.

ಈ ವೀರಮಾಸ್ತಿಗಲ್ಲಿನ ಶಿಲೆಯ ಎಡಭಾಗದಲ್ಲಿ 3 ಅಡಿ ಎತ್ತರದ ಸ್ತಂಭವಿದೆ. ಸ್ತಂಭದ 2.6 ಅಂಗುಲ ಎತ್ತರದಲ್ಲಿ 1 ಅಡಿ ಉದ್ದ, 3 ಅಂಗುಲ ದಪ್ಪದ ಬಲತೋಳು ಶಿಲ್ಪವಿದೆ. ಮೊಳಸಂದಿನಿಂದ 1 ಅಡಿ ಎತ್ತರದ ಮುಂಗೈ ಶಿಲ್ಪವಿದೆ. ಹೆಬ್ಬೆರಳು ಮತ್ತು ತೋರುಬೆರಳಿನ ನಡುವೆ ನಿಂಬೆಹಣ್ಣಿನ ಶಿಲ್ಪವಿದೆ. ಬಲದೊಳು ಶಿಲ್ಪದ ತಳಭಾಗದ ಅವಕಾಶದಲ್ಲಿ ಪರಸ್ಪರ ಕೈ ಹಿಡಿದು ನಿಂತ ವೀರ ಮಾಸ್ತಿಯರ ಶಿಲ್ಪವಿದೆ. ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿರುವುದರಿಂದ ಇದು ವೀರಮಾಸ್ತಿಯಾಗಿದೆ.(ಚಿತ್ರ ಸಂಖ್ಯೆ 67)

**ವೀರಮಾಸ್ತಿಕಲ್ಲು ಕುಪ್ಯೆ**

ಕುಪ್ಯ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 15 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಮುಖ್ಯರಸ್ತೆಯಲ್ಲಿ 5 ಅಡಿ ಎತ್ತರ, 3.5 ಅಡಿ ಅಗಲ, 6 ಇಂಚು ದಪ್ಪವಾಗಿದ್ದು, ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿರುವ ವೀರಗಲ್ಲೊಂದಿದೆ. ಈ ವೀರಗಲ್ಲು 3 ಹಂತಗಳನ್ನು ಒಳಗೊಂಡಿದೆ. ಮೊದಲನೆಯ ಹಂತದಲ್ಲಿ ಖಡ್ಗ ಮತ್ತು ಗುರಾಣಿಯನ್ನು ಹಿಡಿದು ಹೋರಾಟದ ಭಂಗಿಯಲ್ಲಿರುವ ಇಬ್ಬರು ವೀರರ ಶಿಲ್ಪವಿದೆ. ಬಲಭಾಗದಲ್ಲಿ ವೀರರ ಹಿಂಭಾಗದಲ್ಲಿ ನಿಂತ ಮಾಸ್ತಿಯ ಶಿಲ್ಪವಿದೆ.

2ನೇ ಹಂತದಲ್ಲಿ ವೀರಮಾಸ್ತಿಯನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಮಂಡಿಯೂರಿ ನಿಂತಿರುವ ಮಾಸ್ತಿಯ ಶಿಲ್ಪವಿದೆ. ಎಡಭಾಗದಲ್ಲಿ ಲಿಂಗ ಪುರೋಹಿತ ಬಸವನ ಶಿಲ್ಪವಿದೆ.(ಚಿತ್ರ ಸಂಖ್ಯೆ 68)

**ವೀರ ಮಾಸ್ತಿಗಲ್ಲು ನಿಲಸೋಗೆ**

ನಿಲಸೋಗೆ ಗ್ರಾಮವು ತಿರುಮಕೂಡಲು ನರಸೀಪುರ ತಾಲೂಕಿನಿಂದ 3 ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಗ್ರಾಮದೇವತೆಯಾದ ಮಾಲಾರಸಮ್ಮನ ದೇವಾಲಯದ ಹಿಂಭಾಗದಲ್ಲಿರುವ ಈ ವೀರಗಲ್ಲು 4ಅಡಿ ಉದ್ದ, 4ಅಡಿ ಅಗಲ, 4ಇಂಚು ದಪ್ಪವಾಗಿದ್ದು ಬೆಣಚುಕಲ್ಲಿನಿಂದ ಕಡೆಯಲಾಗಿದೆ. ಈ ವೀರ ಮಾಸ್ತಿಗಲ್ಲು 3 ಹಂತಗಳನ್ನೊಳಗೊಂಡಿದೆ. ಮೊದಲನೆ ಹಂತದಲ್ಲಿ ವೀರರಿಬ್ಬರು ಪರಸ್ಪರ ಈಟಿಯಿಂದ ಹಿರಿದುಕೊಂಡಿದ್ದಾರೆ. ಎಡಭಾಗದ ವೀರನಿಗೆ ಎದೆಯ ಭಾಗದಲ್ಲಿ ಈಟಿ ಚುಚ್ಚಿ ಹೊರಬಂದಿದೆ. ಎಡಭಾಗದ ವೀರನ ಹಿಂಭಾಗದಲ್ಲಿ ಕೈಮುಗಿದು ನಿಂತ ಮಾಸ್ತಿಯ ಶಿಲ್ಪವಿದೆ. 2ನೇ ಹಂತದಲ್ಲಿ ವೀರ ಮತ್ತು ಮಾಸ್ತಿಯನ್ನು ಕೈಹಿಡಿದು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ವೀರ, ಕೈಮುಗಿದು ನಿಂತ ಮಾಸ್ತಿ, ಲಿಂಗ, ಬಸವ, ಸೂರ್ಯ, ಚಂದ್ರ, ರಥಗಳ ಶಿಲ್ಪಗಳಿವೆ.(ಚಿತ್ರ ಸಂಖ್ಯೆ 69)

**ವೀರ ಮಾಸ್ತಿಕಲ್ಲು ಮೂಗೂರು**

ಇತಿಹಾಸ ಪ್ರಸಿದ್ಧ ತಿಬ್ಬಾದೇವಿ ದೇವಾಲಯವನ್ನು ಹೊಂದಿರುವ ಮೂಗೂರು ಗ್ರಾಮದ ಹಾಲು ಉತ್ಪಾದಕರ ಸಂಘದ ಎದುರುಗಡೆಯಲ್ಲಿ ವೀರಗಲ್ಲೊಂದು ಇದೆ. ಈ ವೀರಗಲ್ಲು 4.5 ಅಡಿ ಎತ್ತರ, 2.5 ಅಡಿ ಅಗಲ, 4 ಇಂಚು ದಪ್ಪವನ್ನು ಹೊಂದಿದೆ. ಈ ವೀರಗಲ್ಲು 3 ಹಂತಗಳನ್ನು ಒಳಗೊಂಡಿದೆ. ಮೊದಲನೆಯ ಹಂತ ಖಡ್ಗ, ಗುರಾಣಿಯನ್ನು ಹಿಡಿದ ವೀರರಿಬ್ಬರು ಹೋರಾಟದ ಭಂಗಿಯಲ್ಲಿದ್ದಾರೆ. ಖಡ್ಗ ಗುರಾಣಿಯನ್ನು ಹಿಡಿದ 4 ಮಂದಿ ವೀರರು ಹೋರಾಟದ ಭಂಗಿಯಲ್ಲಿದ್ದರೆ, ಎಡಭಾಗದಲ್ಲಿ ಸ್ತಂಭದಿಂದ ಹೊರಬಂದ ಬಲತೊಳ ಶಿಲ್ಪವನ್ನು ಕೆತ್ತಲಾಗಿದೆ. ಅಂಗೈಯಲ್ಲಿ ನಿಂಬೆಹಣ್ಣಿನ ಶಿಲ್ಪವಿದೆ. ತೋಳಿನ ತಳಭಾಗದ ಅವಕಾಶದಲ್ಲಿ 2 ಕೈಗಳನ್ನು ಮೇಲೆ ಎತ್ತಿದ ಮಾಸ್ತಿಯ ಶಿಲ್ಪವನ್ನು ಕಡೆಯಲಾಗಿದೆ. 2ನೇ ಹಂತದಲ್ಲಿ ಇಬ್ಬರು ವೀರರು ಮತ್ತು ಒಬ್ಬ ಮಾಸ್ತಿಯನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವನ್ನು ಕಡೆಯಲಾಗಿದೆ. 3ನೇ ಹಂತದಲ್ಲಿ ಕೈಮುಗಿದು ಕುಳಿತ ಒಬ್ಬ ಮಾಸ್ತಿ ಮತ್ತು ಇಬ್ಬರು ವೀರರ ಶಿಲ್ಪಗಳನ್ನು ಕೆತ್ತಲಾಗಿದೆ. ಮಧ್ಯಭಾಗದಲ್ಲಿ ವೀರ ಮಾಸ್ತಿಯರಿಗೆ ಚಾಮರ ಸೇವೆಯಲ್ಲಿ ನಿರತರಾದ ವೀರ ಕನ್ಯೆಯರ/ದೇವಕನ್ಯೆಯರ ಶಿಲ್ಪವಿದೆ. ಎಡಭಾಗದಲ್ಲಿ ಪುರೋಹಿತ ಮಂಟಪದಲ್ಲಿರುವ ಲಿಂಗ, ಪೀಠದ ಮೇಲೆ ಕುಳಿತಿರುವ ಬಸವನ ಶಿಲ್ಪವನ್ನು ಕಡೆಯಲಾಗಿದೆ.(ಚಿತ್ರ ಸಂಖ್ಯೆ 70)

**ತಿರುಮಕೂಡಲು ನರಸೀಪುರ ತಾಲೂಕಿನ ಬಿಡಿಶಿಲ್ಪಗಳು**

ದೇವಾಲಯದಲ್ಲಿರ ಬೇಕಾದ ಮುಖ್ಯವಾಸ್ತು ದೇವತಾಶಿಲ್ಪ, ದೇವತೆಗಳ ಬಿಂಬವೇ ಶಿಲ್ಪವೆನ್ನಬಹುದು. ದೇವಾಲಯಗಳು ಬೆಳೆದಂತೆ ಶಿಲ್ಪಗಳು ರೂಪಗೊಂಡು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸಿದವು. ಆದುದರಿಂದ ವಾಸ್ತುಕಲೆ ಮತ್ತು ಶಿಲ್ಪಕಲೆಗಳೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಆದರೂ ವಾಸ್ತು ಮತ್ತು ಶಿಲ್ಪಕಲೆ ಅರ್ಥ ವಿಶ್ಲೇಷಣೆಯು ಬೇರೆ ಬೇರೆಯೇ ಆಗಿದೆ, ಶಿಲ್ಪಗಳನ್ನು ಸೌಂದರ್ಯ ಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಅವುಗಳ ವಿಶಿಷ್ಟ ನೆಲೆಗಟ್ಟು ನಮಗೆ ಅರಿವಾಗುತ್ತದೆ. ಇಲ್ಲಿ ಕೆಲವು ಶಿಲ್ಪಗಳ ಲಕ್ಷಣಗಳನ್ನು ಅಧ್ಯಯನ ಮಾಡಿ ಕೂಲಂಕುಷವಾಗಿ ಚರ್ಚಿಸಿ ಸಮಗ್ರವಾದ ವಿವರಣೆಯನ್ನು ನೀಡಲಾಗುವುದು.

**ಜೈನಶಿಲ್ಪ**

ತಿರುಮಕೂಡಲು ನರಸೀಪುರ ತಾಲೂಕು ತಿರುಮಕೂಡಲು ನರಸೀಪುರದಲ್ಲಿ ಜೈನಶಿಲ್ಪ ದೊರೆತಿದೆ. ಒಟ್ಟಾರೆ ಹೇಳುವುದಾದರೆ ಇದು ತಲಕಾಡಿನ ಗಂಗರ ಕಾಲದಲ್ಲಿಯೇ ನಿರ್ಮಿತವಾಗಿರಬಹುದಾದ ಜೈನಶಿಲ್ಪ ಎಂದು ಮಾತ್ರ ಹೇಳಬಹುದಾಗಿದೆ. ಏಕೆಂದರೆ ಇದು ಗಂಗರ ಅಧೀನಕ್ಕೆ ಒಳಪಟ್ಟಂತಹ ಪ್ರಾಂತ್ಯವಾಗಿದ್ದು, ತದನಂತರ ದ್ವಾರಸಮುದ್ರದ ಹೊಯ್ಸಳರು ಇಲ್ಲಿ ಆಳ್ವಿಕೆ ಮಾಡಿದ್ದಾರೆ. ಭಾರತದ ಇತಿಹಾಸದಲ್ಲಿ ಜೈನ ಪರಂಪರೆಗೆ ಮಹತ್ವವಾದ ಇತಿಹಾಸವಿದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಅದರಲ್ಲೂ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ ಎಂದರೆ ತಪ್ಪಾಗಲಾರದು. ಜೈನಧರ್ಮ ಭಾರತದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ದಕ್ಷಿಣ ಭಾರತಕ್ಕೆ ಕ್ರಿ.ಪೂ ೩ ಮತ್ತು 4ನೇ ಶತಮಾನದ ನಂತರದ ಶ್ರವಣಬೆಳಗೊಳ ಶಾಸನಗಳನ್ನು ನೋಡುವುದಾದರೆ ಮೌರ್ಯರ ಕಾಲದಲ್ಲಿಯೇ ಜೈನಧರ್ಮ ಬಂದಿತ್ತೆಂದು ಹೇಳಬಹುದು. ಚಂದ್ರಗುಪ್ತಮೌರ್ಯ ತನ್ನ ಗುರುಗಳಾದ ಭದ್ರಬಾಹುವಿನ ಜೊತೆಗೆ ಶ್ರವಣಬೆಳಗೊಳಕ್ಕೆ ಬಂದು ಇಲ್ಲಿ ಜೈನ ಧರ್ಮ ಪ್ರಬುದ್ಧಮಾನವಾಗಿ ಬೆಳೆಯಲು ಕಾರಣರಾದರು ಎಂದು ಹೇಳಬಹುದು. ತದನಂತರ ಕರ್ನಾಟಕದ ಅರಸರ ಪ್ರೋತ್ಸಾಹದಿಂದ ಉನ್ನತ ಮಟ್ಟಕ್ಕೆ ಏರಿದ ಜೈನಧರ್ಮ, ಗಂಗ, ಕದಂಬ, ಚಾಳುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳರು ಅಲ್ಲದೆ ತಂಜಾವೂರಿನ ಚೋಳರೂ ಸಹ ಜೈನಧರ್ಮಕ್ಕೆ ಹೆಚ್ಚು ಪ್ರೊತ್ಸಾಹವನ್ನು ನೀಡಿದ್ದರು.

ಗಂಗರ ರಾಜಧಾನಿಗೆ ಹೊಂದಿಕೊಂಡಂತ್ತಿದ್ದು ಕೆಲವು ನೆಲೆಗಳಲ್ಲಿ ಜೈನಧರ್ಮಕ್ಕೆ ಪೂರಕವಾದ ಶಾಸನಗಳು, ನಾಣ್ಯಗಳು, ಕಂಚು ಶಿಲ್ಪಗಳು, ತಾಮ್ರಪಟಗಳು, ಓಲೆಗರಿಗಳು ಅಲ್ಲದೆ ಇತ್ತೀಚಿನ ಸಾಹಿತ್ಯಾಧಾರಗಳು ಲಭ್ಯವಾಗಿವೆ. ಈ ಹಿನ್ನೆಲೆಯಿಂದ ತಿರುಮಕೂಡಲು ನರಸೀಪುರದಲ್ಲೂ ಸಹ ಜೈನಪರಂಪರೆ ಇದ್ದಿತ್ತೆಂದು ಹೇಳಬಹುದು.

ಈ ಎಲ್ಲಾ ಆಧಾರಗಳಿಂದ ಇದು ಗಂಗರ ಕಾಲದಲ್ಲಿಯೇ ನಿರ್ಮಿತವಾದ ಜಿನಶಿಲ್ಪ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಅಲ್ಲದೆ ಇದೇ ತಾಲೂಕಿನ ಮೂಗೂರಿನಲ್ಲೂ ಗಂಗರ ಕಾಲಕ್ಕೆ ಪೂರಕವಾದ ಜೈನ ಆದಿನಾಥ ಬಸದಿ ಇದೆ. ಅಲ್ಲದೆ ಆಲಗೂಡಿನ ಸಿದ್ದೇಶ್ವರ ದೇವಾಲಯದ ಒಳಭಾಗದಲ್ಲಿ ಒಂದು ಕಂಬವಿದ್ದು, ಈ ಕಂಬದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಜಿನನ ಶಿಲ್ಪವಿದೆ. ಆದ್ದರಿಂದ ಈ ಶಿಲ್ಪವನ್ನೂ ಒಂದು ಸ್ಮಾರಕ ಶಿಲ್ಪವೆಂದು ಪರಿಗಣಿಸಬಹುದು.

**ಭಗ್ನಗೊಂಡಿರುವ ಜೈನ ಶಿಲ್ಪ**

ದಕ್ಷಿಣ ಭಾರತದ ಇತಿಹಾಸದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಪ್ರಬಲವಾಗಿ ಬೆಳೆದ ಜೈನಧರ್ಮವು ಭಾರತದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಚಂದ್ರಗುಪ್ತ ಮೌರ್ಯ ತನ್ನ ಗುರುಗಳಾದ ಭದ್ರಬಾಹುವಿನ ಜೊತೆಗೆ ಕರ್ನಾಟಕಕ್ಕೆ ಬಂದು ಇಲ್ಲಿ ಜೈನಧರ್ಮ ಪ್ರಬುದ್ಧವಾಗಿ ಬೆಳೆಯಲು ಕಾರಣರಾದರು. ನಂತರ ಕರ್ನಾಟಕವನ್ನಾಳಿದ ಅರಸರ ಪ್ರೋತ್ಸಾಹದಿಂದ ಉನ್ನತ ಮಟ್ಟಕ್ಕೇರಿದ ಜೈನಧರ್ಮ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳರಲ್ಲದೆ ತಂಜಾವೂರಿನ ಚೋಳರು ಜೈನಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದಾರೆ. ತಲಕಾಡು ಪ್ರಮುಖ ಜೈನ ಸಂಸ್ಕೃತಿಯ ಪ್ರವಾಸಿ ತಾಣವಾಗಿದೆ. ತಲಕಾಡು ಗಂಗರ ರಾಜಧಾನಿಯಾಗಿ ಜೈನ ಸಂಸ್ಕೃತಿಗೆ ತನ್ನದೇಯಾದ ಕೊಡುಗೆಯನ್ನು ನೀಡಿ ಈ ಪ್ರದೇಶದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಬೆಳೆಯಲು ಕಾರಣವಾಗಿದೆ.

ಬನ್ನಹಳ್ಳಿ (ಹುಂಡಿ)ಯ ಗ್ರಾಮದ ಹೊಲವೊಂದರಲ್ಲಿ ಭಗ್ನಗೊಂಡಿರುವ ಜೈನ ಶಿಲ್ಪವೊಂದು ಪತ್ತೆಯಾಗಿದೆ. (ಚಿತ್ರ ಸಂಖ್ಯೆ-71) ಈ ಶಿಲ್ಪವು ಮಹಾವೀರನ ಮುಖಭಾಗವನ್ನು ಹೊಂದಿದ್ದು, ಉಳಿದ ಭಾಗವು ಮುರಿದುಹೋಗಿದೆ. ಈ ಶಿಲ್ಪವು ಭಗ್ನಗೊಂಡಿರುವುದರಿಂದ ಇದನ್ನು 24 ತೀರ್ಥಂಕರರಲ್ಲಿ ಯಾವುದು ಎಂದು ಹೇಳುವುದು ತುಂಬ ಕಷ್ಟಕರವಾಗಿದೆ. ಜೈನಧರ್ಮದ ಪ್ರಭಾವವು ಈ ಪ್ರದೇಶದಲ್ಲಿ ಎಷ್ಟು ಪ್ರವರ್ಧಮಾನದಲ್ಲಿತ್ತು ಎಂದು ಹೇಳುವುದಕ್ಕೆ ಪತ್ತೆಯಾಗಿರುವ ಈ ಜೈನ ಶಿಲ್ಪವೇ ಸಾಕ್ಷಿಯಾಗಿದೆ ಎಂದು ಹೇಳಬಹುದು. ಈ ಶಿಲ್ಪವು ಯಾವ ಕಾಲಮಾನಕ್ಕೆ ಸೇರಿದ್ದು ಎಂದು ಹೇಳುವುದಕ್ಕೆ ಯಾವುದೇ ಆಧಾರಗಳಿಲ್ಲ.

ಈ ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಗಂಗರ ಕಾಲದಲ್ಲಿ ಜೈನಧರ್ಮ ಪ್ರಮುಖ ಧರ್ಮವಾಗಿ ಬೆಳೆಯಿತು. ಉದಾ: ಮೂಗೂರು, ತಲಕಾಡು, ತಿರುಮಕೂಡಲು ನರಸೀಪುರದಲ್ಲಿ ಜೈನ ಪರಂಪರೆಯನ್ನು ಕಾಣಬಹುದಾಗಿದೆ. ತಿರುಮಕೂಡಲು ನರಸೀಪುರ ಮತ್ತು ಬನ್ನಹಳ್ಳಿ(ಹುಂಡಿ)ಯಲ್ಲಿ ಪ್ರಾಚೀನ ಶಿಲ್ಪಗಳು ಹಾಗೂ ಸ್ಮಾರಕಗಳು ಇಂದಿಗೂ ಕಂಡುಬರುತ್ತವೆ.

ಗಂಗರ ರಾಜಧಾನಿಗೆ ಹೊಂದಿಕೊಂಡಂತೆ ಕೆಲವು ನೆಲೆಗಳಲ್ಲಿ ಪೂರಕವಾದ ಶಾಸನಗಳು, ನಾಣ್ಯಗಳು, ಕಂಚು ಶಿಲ್ಪಗಳು, ತಾಮ್ರಪಟಗಳು, ಓಲೆಗರಿಗಳಲ್ಲದೆ ಇತ್ತೀಚಿನ

ಸಾಹಿತ್ಯಾಧಾರಗಳಿಂದ ಇದು ಗಂಗರ ಕಾಲದಲ್ಲಿಯೇ ನಿರ್ಮಿತವಾದ ಜಿನ ಶಿಲ್ಪವೆಂದು ಸ್ಪಷ್ಟವಾಗಿ ಹೇಳಬಹುದು. ಈ ಹಿನ್ನೆಲೆಯಿಂದ ಬನ್ನಹಳ್ಳಿ(ಹುಂಡಿ)ಯಲ್ಲಿ ಜೈನ ಪರಂಪರೆ ಇದ್ದಿತ್ತೆಂದು ಹೇಳಬಹುದು.

**ಕುದುರೆ ಮೇಲೆ ಕುಳಿತ ರಾಜ**

ತಿರುಮಕೂಡಲು ನರಸೀಪುರ ತಾಲೂಕು ಚೌಹಳ್ಳಿ ಮುಖ್ಯರಸ್ತೆಯ ಎಡಭಾಗದಲ್ಲಿ ಒಂದು ಹೊಲದಲ್ಲಿ ಕುದುರೆ ಮೇಲೆ ಕುಳಿತ ರಾಜನ ಬಿಡಿಶಿಲ್ಪವಿದ್ದು, ಇದು ಉಬ್ಬುಶಿಲ್ಪ ರಚನಾ ಶೈಲಿಯಲ್ಲಿದೆ. ಕುದುರೆ ಮೇಲೆ ರಾಜ ಕುಳಿತಿದ್ದು ಎಡಗೈಯಲ್ಲಿ ಲಗಾಮು ಹಿಡಿದು, ಬಲಗೈಯಲ್ಲಿ ಖಡ್ಗವನ್ನು ಮೇಲೆ ಎತ್ತಿರುವುದು ಕಂಡುಬರುತ್ತದೆ. ಇದರಿಂದ ಇದೊಂದು ವೀರಾವೇಷದಿಂದ ಹೋರಾಡುತ್ತಿರುವ ದೃಶ್ಯಾವಳಿಯನ್ನು ವ್ಯಕ್ತಪಡಿಸಿರುವ ಶಿಲ್ಪವಾಗಿದೆ. ಕುದುರೆಯು ತನ್ನ ಬಾಲವನ್ನು ಮೇಲಕ್ಕೆ ಎತ್ತಿಕೊಂಡು ಹೋರಾಡುವ ಸನ್ನಿವೇಶವು ರೋಮಾಂಚನಕಾರಿಯಾಗಿದೆ. ಅಂದರೆ ಈ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ನಾಡನ್ನು ಗೆದ್ದ ನಂತರ ವಿಜಯಕ್ಕೆ ಸಂಬಂಧಿಸಿರುವಂತೆ ಶಿಲ್ಪಕಲೆ ಮೂಡಿಬಂದಿದೆ ಎಂದು ಹೇಳಿದರೆ ತಪ್ಪಾಗಲಾರದು.(ಚಿತ್ರಸಂಖ್ಯೆ 72)

**ರಾವಳೇಶ್ವರ ಶಿಲ್ಪ**

ಅಕ್ಕೂರಿನ ದೇವಾಲಯದ ಹಿಂಭಾಗದಲ್ಲಿ ರಾವಳೇಶ್ವರನ ಶಿಲ್ಪ ಕಂಡುಬರುತ್ತದೆ. ಈ ಶಿಲ್ಪವು ರಾಜ ಕುದುರೆ ಮೇಲೆ ಕುಳಿತ ಭಂಗಿಯಲ್ಲಿದೆ. ಕದಗಾರಪ್ಪ ವೀರನಂತೆ ಕುದುರೆ ಮೇಲೆ ಕುಳಿತಿದ್ದು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಈತನು ವೀರಖಡ್ಗ, ಬಿಲ್ಲುಬಾಣ, ಡಮರುಗ ಮತ್ತು ಕಪಾಲ ಪಾತ್ರೆಯನ್ನೂ ಹಿಡಿದಿರುವುದು ಕಂಡುಬರುತ್ತದೆ. ವೀರನ್ನು ಚತುರ್ಭುಜಧಾರೆಯಾಗಿ ದೈವ ಸ್ವರೂಪನಾಗಿ ಕೆತ್ತಿರುವುದು ಕಂಡುಬರುತ್ತದೆ. ಕುದುರೆ ಮೇಲೆ ಕುಳಿತರಾಜ ತನ್ನ ಗೆಲುವಿನ ಸಂಕೇತದಿಂದ ಹೋರಾಟ ಮಾಡುವ ಸನ್ನಿವೇಶವನ್ನು ಶಿಲ್ಪದಲ್ಲಿ ಬಿಂಬಿಸಲಾಗಿದೆ. ಅಂದಿನ ಕಾಲದಲ್ಲಿ ಈ ನಾಡನ್ನು ಗೆದ್ದ ನಂತರ ವಿಜಯಕ್ಕೆ ಸಂಬಂಧಿಸಿದಂತೆ ಶಿಲ್ಪ ಚಿತ್ರವನ್ನು ಬಿಡಿಸಿದ್ದಾನೆಂಬುದು ಈ ಶಿಲ್ಪದಿಂದ ಗೋಚರವಾಗುತ್ತದೆ.(ಚಿತ್ರ ಸಂಖ್ಯೆ 73)

## ಸ್ತ್ರೀಶಿಲ್ಪ

ಅಕ್ಕೂರಿನಲ್ಲಿ ಈ ಶಿಲ್ಪವು ನಾನಾ ಭಂಗಿಯಲ್ಲಿ ದೊರೆತಿದ್ದು ವಿವಿಧ ಮಾದರಿಯ ಆಯುಧಗಳನ್ನು ಹಿಡಿದಿರುವುದು ಕಂಡುಬರುತ್ತವೆ. ಕೆಲವು ಸ್ತ್ರೀ ಶಿಲ್ಪಗಳಗೂ ಮೂರು ತಲೆ, ಎರಡು ತಲೆ ಇರುವುದು ಕಂಡುಬರುತ್ತದೆ. ಕೆಲವೊಂದು ಶಿಲ್ಪಗಳಲ್ಲಿ ತನ್ನ ಮಗುವನ್ನು ಸೊಂಟದಲ್ಲಿ ಎತ್ತಿಕೊಂಡಿರುವಂತೆ ಕಂಡುಬರುತ್ತದೆ. ಕೆಲವೊಂದು ಶಿಲ್ಪಗಳಲ್ಲಿ ವನಿತೆಯರು ಸಾಲು-ಸಾಲಾಗಿ ನಿಂತು ಖಡ್ಗವನ್ನು ಹಿಡಿದು ಹೋರಾಟ ಮಾಡುತ್ತಿರುವ ದೃಶ್ಯಗಳು ಕಂಡುಬರುತ್ತದೆ.(ಚಿತ್ರ ಸಂಖ್ಯೆ 74)

## ರಾವಳೇಶ್ವರನ ಶಿಲ್ಪ

ತಿರುಮಕೂಡಲು ನರಸೀಪುರ ತಾಲೂಕಿನಾದ್ಯಂತ ರಾವಳೇಶ್ವರನ ಶಿಲ್ಪಗಳು ಕಂಡುಬರುತ್ತವೆ. ವಿಶೇಷವಾಗಿ ಚೌಹಳ್ಳಿಯಲ್ಲಿ ರಾವಳೇಶ್ವರನು ಬಲಗೈಯಲ್ಲಿ ಚಕ್ರ, ಮೇಲಿನ ಎಡಗೈಯಲ್ಲಿ ಬಿಲ್ಲು, ಕೆಳಗಿನ ಎಡಗೈಯಲ್ಲಿ ಶಾಂತಮುದ್ರೆಯಿಂದ ಇಳಬಿಟ್ಟು ಖಡ್ಗ, ಸೊಂಟದ ಮೇಲ್ಭಾಗದಲ್ಲಿ ವೇಷಭೂಷಣಗಳಲ್ಲಿಯೂ ರಾಜನಂತೆ ಕಾಲುಗಳಲ್ಲಿ ಪಾದುಕೆ ಧರಿಸಿರುವುದು, ಒಳಭಾಗದಲ್ಲಿ ಚಾಮರ ಹಿಡಿದಿರುವುದು, ಪೀಠದಲ್ಲಿ ಹೋರಾಟದ ಟಗರುಗಳರುವುದು ಕಂಡುಬರುತ್ತದೆ. ಜೊತೆಗೆ ಆಯುಧ ಹಿಡಿದಿರುವ ಸೈನಿಕರು ಇರುತ್ತಾರೆ. ಈ ರೀತಿಯ ಶಿಲ್ಪಗಳನ್ನೂ ಸೂಕ್ಷ್ಮವಾಗಿ ಅಭ್ಯಸಿಸಿದರೆ ಶಿಲ್ಪಿ ಬೇರೆ ಬೇರೆ ಸಂದರ್ಭಕ್ಕೆ ಕಥೆಯನ್ನೂ ಹೇಳಬಹುದು. ಕೆಲವು ವಿದ್ವಾಂಸರು ರಾವಣನ ಶಿಲ್ಪವೋ ಅಥವಾ ವೀರಭದ್ರನ ಶಿಲ್ಪವೋ ಅಥವಾ ಭೈರವನೋ ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ಆದರೆ ನನ್ನ ಸಂಶೋಧನಾ ವ್ಯಾಪ್ತಿಯಲ್ಲಿ ಕಂಡುಬಂದಿರುವ ಶಿಲ್ಪಕಲೆಯಿಂದ ಇವುಗಳನ್ನು ರಾವಳೇಶ್ವರ ಶಿಲ್ಪವೆಂದೇ ನಾನು ಪರಿಗಣಿಸಿರುತ್ತೇನೆ.(ಚಿತ್ರ ಸಂಖ್ಯೆ 75)

## ರಾವಳೇಶ್ವರ ಸಂಸ್ಕೃತಿ

ತಿರುಮಕೂಡಲು ನರಸೀಪುರ ಸಾಂಸ್ಕೃತಿಕ ನಗರೀ ಎಂದು ಹೆಸರು ಪಡೆದಿರುವ ಮೈಸೂರು ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದೆ. ಹಾಗೆಯೇ ಈ ತಾಲೂಕಿನಲ್ಲಿಯೂ ಸಹ ರಾವಳೇಶ್ವರ ಸಂಸ್ಕೃತಿಯು ಆಚರಣೆಯಲ್ಲಿದೆ. (ಆಲಗೂಡು, ಬನ್ನಹಳ್ಳಿ (ಹುಂಡಿ),

ಹಿರಿಯೂರು, ಬೆನಕನಹಳ್ಳಿ, ನಿಲಸೋಗೆ) ರಾವಳೇಶ್ವರನ ಆರಾಧನೆ ಕಂಡುಬರುತ್ತವೆ. ತಿ. ನರಸೀಪುರ ತಾಲೂಕಿನಲ್ಲಿ ರಾವಳೇಶ್ವರ ಸಂಸ್ಕೃತಿಯ ಪ್ರಭಾವ ವಿವಾಹದ ಸಂದರ್ಭದಲ್ಲಿಯೂ ಕಾಣಬಹುದು. ಉದಾರಣೆಗೆ: ಗಂಡು ಹೆಣ್ಣಿನ ಕುಲಗೋತ್ರವನ್ನು ಹೇಳುವಾಗ ಗಂಡು ದೇವರು ರಾವಳೇಶ್ವರ ಮತ್ತು ಹೆಣ್ಣು ದೇವರು ಚೌಡೇಶ್ವರಿ/ಕಾಳ ಮುಂತಾದ ಹೆಸರುಗಳನ್ನು ಹೇಳುವ ಸಂಪ್ರದಾಯ ರೂಢಿಯಲ್ಲಿದೆ. ಈ ಪ್ರದೇಶದಲ್ಲಿ ರಾವಳೇಶ್ವರನನ್ನು ಅನೇಕ ಹೆಸರುಗಳಿಂದ ಕರೆಯುವ ವಾಡಿಕೆಯು ಪ್ರಚಲಿತದಲ್ಲಿದೆ. ಉದಾ: ರಾವಳೇಶ್ವರ, ರಾವಣೇಶ್ವರ, ಕಾಳರಾಯ, ಕ್ಯಾತೆ ದೇವರು, ಕಾಮರಾಯ, ಕರ್ಪಸ್ವಾಮಿ, ದೊಡ್ಡಕಣ್ಣಯ್ಯ, ರಾವಳ ಮೊದಲಿಯಾರ್ ಮುಂತಾದವು. ಒಂದು ತಲೆ ರಾವಣನನ್ನು ರಾಜಪ್ರತ್ಯಕ್ಷದೇವತಾ, ಮೂರು ತಲೆಯ ರಾವಣನನ್ನು ತ್ರಿಮೂರ್ತಿ ಸ್ವರೂಪ, ಐದು ತಲೆಯ ರಾವಣನನ್ನು ವಿಶ್ವಕರ್ಮ ಮತ್ತು ಮಹೇಶ್ವರ ಎಂದು ಕರೆಯುತ್ತಾರೆ. ಈ ರಾವಳೇಶ್ವರನ ಶಿಲ್ಪಗಳು ಒಂದೇ ಆಕಾರವನ್ನು ಹೊಂದಿದ್ದು, ಎತ್ತರಕ್ಕೆ ಅಗಲಕ್ಕೆ ಪೂರಕವಾಗಿ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ.

## ಬನ್ನಹಳ್ಳಿ (ಹುಂಡಿ)ಯ ರಾವಳೇಶ್ವರ ಶಿಲ್ಪ

ಬನ್ನಹಳ್ಳಿ (ಹುಂಡಿ)ಯಲ್ಲಿ ರಾವಳೇಶ್ವರನ ಶಿಲ್ಪಗಳು ದೊರೆತಿವೆ. ಈ ಶಿಲ್ಪವು ವಿಶೇಷವಾಗಿದ್ದು, ರಾವಳೇಶ್ವರನ ಬಲಭಾಗದಲ್ಲಿ ಇಬ್ಬರು ಸ್ತ್ರೀಯರು ಎದುರು ಮುಖಮಾಡಿ ನಿಂತಿರುವುದನ್ನು ಕಾಣಬಹುದು. ಈ ಇಬ್ಬರು ಸ್ತ್ರೀಯರ ಶಿಲ್ಪಗಳ ಹಿಂಭಾಗದಲ್ಲಿ ಮತ್ತೆ ಇಬ್ಬರು ವೀರರು ಡಮರುಗಳನ್ನು ಹಿಡಿದು ಎದುರು ಮುಖಮಾಡಿ ನಿಂತಿರುವಂತೆ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಈ ಶಿಲ್ಪದ ಮೇಲ್ಭಾಗದ ಬಲಭಾಗದಲ್ಲಿ ಕುಳಿತಿರುವ ನವಿಲಿನ ಚಿತ್ರವನ್ನು ಸುಂದರವಾಗಿ ಕಡೆಯಲಾಗಿದೆ. ರಾವಳೇಶ್ವರ ಶಿಲ್ಪದ ಪೀಠದಲ್ಲಿ ಟಗರುಗಳ ಕಾಳಗದ ದೃಶ್ಯವಿದ್ದು, ಎರಡೂ ಕಡೆಗಳಲ್ಲಿ ಸೈನಿಕರ ಉಬ್ಬು ಕೆತ್ತನೆಯ ಶಿಲ್ಪಗಳನ್ನು ಮನೋಜ್ಞವಾಗಿ ಕಡೆಯಲಾಗಿದೆ. ಈ ಶಿಲ್ಪದ ಎಡಭಾಗವು ಭಗ್ನಗೊಂಡಿದ್ದು, ನಶಿಸಿ ಹೋಗುವಂತಹ ಸ್ಥಿತಿಯಲ್ಲಿರುವುದನ್ನು ಕಾಣಬಹುದು. ಸ್ಥಳೀಯರು ಈ ಶಿಲ್ಪಗಳ ಸಂಸ್ಕೃತಿಯನ್ನು ಚೋಳ ಸಂಸ್ಕೃತಿ ಎಂದು ಕರೆಯುತ್ತಾರೆ.

1. ಈ ರಾವಳೇಶ್ವರನ ಶಿಲ್ಪವನ್ನು ಸುಮಾರು 3 ಅಡಿ ಎತ್ತರ ಎರಡುವರೆ ಅಡಿ ಅಗಲವಿರುವ ಬೆಣಚು ಕಲ್ಲಿನಲ್ಲಿ ರಚಿಸಲಾಗಿದೆ. ಇದರಲ್ಲಿರುವ ರಾವಳೇಶ್ವರನಿಗೆ ಮೂರು ತಲೆಗಳು ಇವೆ.

ಎರಡು ಕೈಗಳು ಕೈಗಳಲ್ಲಿ ತ್ರಿಶೂಲ ಮತ್ತು ಡಮರು ಹಿಡಿದು ಸುಖಾಸನದಲ್ಲಿ ಕುಳಿತಿರುವಂತೆ ಕೆತ್ತನೆ ಮಾಡಿ ನಿಲ್ಲಿಸಲಾಗಿದೆ.

2. ಇದನ್ನು ಒಂದು ಕಲ್ಲು ಚಪ್ಪಡಿ ಮೇಲೆ ರಚಿಸಲಾಗಿದೆ. ಇದರಲ್ಲಿ ಐದು ತಲೆಗಳು ಸಾಲಾಗಿವೆ ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ ಎಡಗೈಯನ್ನು ಕೆಳಗಿಳಿಸಿದ್ದಾನೆ.

3. ಇದನ್ನು ಎರಡುವರೆ ಅಡಿ ಎತ್ತರ 4 ಅಡಿಗಳ ಅಗಲವಿರುವ ಕಲ್ಲಿನಲ್ಲಿ ರಚಿಸಲಾಗಿದೆ. ಇದರಲ್ಲಿ ಮೂರು ತಲೆಗಳು ಎರಡು ಕೈಯನ್ನು ಹೊಂದಿದೆ. ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದ್ದಾನೆ, ಎಡಗೈಯನ್ನು ಮೇಲಕ್ಕೆ ಎತ್ತಿಕೊಂಡಿದ್ದಾನೆ. ರಾಜನ ರೀತಿಯ ವಸ್ತ್ರವನ್ನು ಸೊಂಟಕ್ಕೆ ಕಟ್ಟಿಕೊಂಡಿದ್ದಾನೆ.

**ವೇಣುಗೋಪಾಲ ಶಿಲ್ಪ ; ಆಲಗೂಡು**

ಈ ಶಿಲ್ಪವು ಚತುರ್ಭುಜಧಾರೆಯಾಗಿದ್ದು ಮೇಲಿನ ಎರಡು ಕೈಗಳಲ್ಲಿ, ಶಂಖ ಮತ್ತು ಚಕ್ರವನ್ನು, ಕೆಳಗಿನ ಎರಡು ಕೈಗಳಲ್ಲಿ ಗದೆ ಮತ್ತು ಫಲವನ್ನು ಹಿಡಿದಿರುವುದು ಮೂಡಿಬಂದಿದೆ. ತಲೆಯ ಮೇಲ್ಭಾಗದಲ್ಲಿ ಎತ್ತರವಾದ ಕಿರೀಟವನ್ನು ಧರಿಸಿದ್ದು, ಪ್ರಭಾವಳಿಯಲ್ಲಿ ಸೂರ್ಯನ ಮಾದರಿಯ ಶಿಲ್ಪ (ಉಬ್ಬುಶಿಲ್ಪ)ವನ್ನು ಕಡೆಯಲಾಗಿದೆ. ಹಿಂಭಾಗದ ಪ್ರಭಾವಳಿಯಲ್ಲಿ ಲತೆಗಳಿಂದ ಆವೃತವಾಗಿದ್ದು ಮೇಲ್ಭಾಗದಲ್ಲಿ ಸಿಂಹದ ಮುಖವನ್ನು ಕಡೆಯಲಾಗಿದೆ. ಈ ಶಿಲ್ಪವು ವಿಶೇಷ ಶಿಲ್ಪವಾಗಿದ್ದು ಪ್ರಭಾವಳಿಯಲ್ಲಿ ನಾನಾ ರೀತಿಯ ಉಬ್ಬುಶಿಲ್ಪಗಳನ್ನು ಕಡೆಯಲಾಗಿದೆ. ಜೊತೆಗೆ ನವಗ್ರಹಗಳ ಶಿಲ್ಪದ ಕೆತ್ತನೆ ಕಂಡುಬಂದಿರುವುದನ್ನು ಇಲ್ಲಿ ಪ್ರಸ್ತುತಪಡಿಸಿರುತ್ತೇನೆ. ಶಿಲ್ಪದ ಇಕ್ಕೆಲಗಳಲ್ಲಿ ಗಂಗೆ-ಯಮುನೆಯರ ಶಿಲ್ಪವನ್ನು ಕಡೆಯಲಾಗಿದೆ. ಈ ಶಿಲ್ಪಕಲೆಯನ್ನು ನೋಡಿದರೆ ಹೊಯ್ಸಳರ ಶಿಲ್ಪಮಾದರಿಯನ್ನು ಮರೆಯುವಂತಿಲ್ಲ. ಈ ಶಿಲ್ಪದ ಪೀಠದ ಮೇಲೆ ಗರುಡನ ಉಬ್ಬುಶಿಲ್ಪವೂ ಮೂಡಿಬಂದಿದೆ. ಈ ಹಿನ್ನೆಲೆಯಿಂದ ಇದೊಂದು ವೈಷ್ಣವ ಧರ್ಮಕ್ಕೆ ಪೂರಕವಾಗಿರುವಂತಹ ಶಿಲ್ಪವಾಗಿದೆಯೆಂದು ಹೇಳಬಹುದು. ಅಲ್ಲದೆ ಕಲ್ಲುಪೀಠವೂ ಹೆಚ್ಚು ಕಡಿಮೆ ಹೊಯ್ಸಳರ ಕಾಲದ ದೇವಪೀಠಗಳ ಮಾದರಿಯಲ್ಲಿಯೇ ಕಂಡುಬರುತ್ತದೆ.(ಚಿತ್ರ ಸಂಖ್ಯೆ 76)

## ಸಿದ್ದೇಶ್ವರ ಶಿಲ್ಪ: ಆಲಗೂಡು

ಈ ಶಿಲ್ಪವು ಮೂರು ಅಡಿ ಎತ್ತರವಿದ್ದು ಒಂದುವರೆ ಅಡಿ ಅಗಲವಿದೆ. ಈ ಶಿಲ್ಪವನ್ನು ಶಿವನ ಪ್ರತಿರೂಪವಾಗಿ ಆರಾಧಿಸಿಕೊಂಡು ಬರುತ್ತಿದ್ದಾರೆ. ಸಿದ್ದೇಶ್ವರನು ಸಮಭಂಗಿಯಲ್ಲಿ ನಿಂತಿದ್ದು ನಗ್ನ ವ್ಯವಸ್ಥೆಯಲ್ಲಿರುವುದು ಮೂಡಿಬಂದಿದೆ. ಹಾಗೂ ಚತುರ್ಭುಜಕಾರವಾಗಿದ್ದು ತ್ರಿಶೂಲ, ಫಲ, ಅಭಯಾಸ್ತ ಮತ್ತು ಕೈಯಲ್ಲಿ ಢಮರು ಹಿಡಿದಿರುವುದು ಕಂಡುಬರುತ್ತದೆ. ನೀಳವಾದ ಮೂಗು, ಸುಂದರವಾದ ಕಣ್ಣು, ತಲೆಯ ಮೇಲ್ಭಾಗದಲ್ಲಿ ಜಡೆ ಕಟ್ಟಿರುವುದು ಸೊಗಸಾಗಿ ಮೂಡಿಬಂದಿದೆ. ಈತನ ದೇಹದ ಮೇಲೆ ಸರ್ಪವು ಸುತ್ತಿಕೊಂಡಿರುವುದು ಕಂಡುಬರುತ್ತದೆ. ಈ ಶಿಲ್ಪದ ವಿಶೇಷತೆ ಏನೆಂದರೆ ಈತನ ಒಂದು ಕಾಲಿನ ಪಾದ ಪೂರ್ವಾಭಿಮುಖವಾಗಿಯೂ, ಮತ್ತೊಂದು ಪಾದ ದಕ್ಷಿಣಾಭಿಮುಖವಾಗಿರುವುದು ಇಲ್ಲಿಯ ವಿಶೇಷವೆಂದೇ ಹೇಳಬಹುದು. ಈತನ ಪಕ್ಕದಲ್ಲಿ ಒಂದು ನಾಯಿಯ ಉಬ್ಬು ಶಿಲ್ಪವೂ ಕಂಡುಬರುತ್ತದೆ.(ಚಿತ್ರ ಸಂಖ್ಯೆ 77)

## ಲಕ್ಷ್ಮೀ ಶಿಲ್ಪ, ಆಲಗೂಡು

ಈ ಶಿಲ್ಪವು ಆಲಗೂಡಿನ ಶ್ರೀಲಕ್ಷ್ಮಿದೇವಿ ಮತ್ತು ರಾಮದೇವರ ದೇವಾಲಯದಲ್ಲಿ ಕಂಡು ಬರುತ್ತದೆ. ಇದು ಎರಡು ಅಡಿ ಎತ್ತರ ಒಂದು ಅಡಿ ಅಗಲವನ್ನು ಹೊಂದಿದೆ. ಲಕ್ಷ್ಮಿಯು ಅರಳಿದ ಕಮಲದ ಮೇಲೆ ನಿಂತಿದ್ದೂ ಚತುರ್ಭುಜಾಧಾರೆಯಾಗಿದ್ದಾಳೆ. ಒಂದು ಕೈಯಲ್ಲಿ ಶಂಖ, ಮತ್ತೊಂದು ಕೈಯಲ್ಲಿ ಚಕ್ರ, ಕೆಳಗಿನ ಎರಡು ಕೈಗಳು ಅಭಯಹಸ್ತವನ್ನು ನೀಡುತ್ತಿರುವುದು. ದೇವಿಯು ನೀಳವಾದ ನಾಸಿಕ, ಸೊಗಸಾದ ಕಣ್ಣು ಮತ್ತು ಉಬ್ಬನ್ನು ಹೊಂದಿದ್ದಾಳೆ ಹಾಗೂ ಸುಂದರವಾದ ನೆರಿಗೆಯಿಂದ ಕೂಡಿದ ವಸ್ತ್ರವನ್ನು ಧರಿಸಿದ್ದು (ಸೀರೆ) ಸೊಂಟದಲ್ಲಿ ಡಾಬು, ಕಂಠದಲ್ಲಿ ಹಲವು ಭಂಗಿಯ ಕಂಠಾಭರಣ – ಕಿವಿಯಲ್ಲಿ ಓಲೆ, ತಲೆಯ ಮೇಲ್ಭಾಗದಲ್ಲಿ ಸುಂದರವಾದ ವಿನ್ಯಾಸವನ್ನು ಹೊಂದಿರುವ ನಾಗರಶೈಲಿಯ ಮಾದರಿಯ ಕಿರೀಟವನ್ನು ಅಲ್ಲದೇ ನಾಲ್ಕು ಕೈಗಳಲ್ಲಿ ಬಳೆಗಳನ್ನೂ ಧರಿಸಿರುವುದು ಸುಂದರವಾಗಿ ಮೂಡಿಬಂದಿದೆ.(ಚಿತ್ರ ಸಂಖ್ಯೆ 78)

**ಮಹಿಷಮರ್ದಿನಿ ಶಿಲ್ಪ**

ತಿರುಮಕೂಡಲು ನರಸೀಪುರ ತಾಲೂಕು ಬನ್ನೂರು ಮುಖ್ಯರಸ್ತೆಯ ಎಡಭಾಗದಲ್ಲಿ ಒಂದು ಹೊಲದಲ್ಲಿ ಮಹಿಷಮರ್ದಿನಿ ಶಿಲ್ಪವಿದೆ. ಈ ಶಿಲ್ಪವು ಕ್ರಿ.ಶ 9 ಮತ್ತು 10ನೇ ಶತಮಾನಕ್ಕೆ ಸೇರಿರಬಹುದಾದ ಶಿಲ್ಪವೆಂದು ಪರಿಗಣಿಸಲಾಗಿದೆ. ಈ ಶಿಲ್ಪವು ಚತುರ್ಭುಜಧಾರೆಯಾಗಿ ಸಮಭಂಗಿಯಲ್ಲಿ ನಿಂತಿದ್ದು, ತನ್ನ ಒಂದು ಕಾಲಿನಿಂದ ಕೋಣವನ್ನು ತುಳಿಯುತ್ತಾ ಕೈಯಲ್ಲಿ ಭರ್ಜಿಹಿಡಿದು ತಿವಿಯುತ್ತಿರುವುದು ಮತ್ತೊಂದು ಕೈಯಿಂದ ಕೋಣದ ಮುಖವನ್ನು ಹಿಡಿದಿರುವುದು ಕಂಡುಬರುತ್ತದೆ. ಮೇಲಿನ ಎರಡು ಕೈಯಲ್ಲಿ ಆಯುಧಗಳನ್ನು ಹಿಡಿದಿರುವುದು ಕಂಡುಬಂದಿರುವುದರಿಂದ ಇದೊಂದು ಸರಳವಾದ ಶಿಲ್ಪ ಎಂದು ಹೇಳಬಹುದಾಗಿದೆ.(ಚಿತ್ರ ಸಂಖ್ಯೆ 79)

**ಭೈರವ ಶಿಲ್ಪ**

ಈ ಶಿಲ್ಪವು ತಿರುಮಕೂಡಲು ಕ್ಷೇತ್ರದಲ್ಲಿರುವ ಬನ್ನೂರು ಹೇಮಾದ್ರಮ್ಮ ದೇವಾಲಯದ ಮುಂಭಾಗದಲ್ಲಿ ಕಾಳಭೈರವ ಶಿಲ್ಪವಿದೆ. ಇದನ್ನು ಕಾಳಭೈರವ ಅಥವಾ ಭೈರವ ಶಿಲ್ಪವೆಂದು ಪರಿಗಣಿಸಲಾಗಿದೆ. ಕೆಲವು ಸ್ಥಳೀಯ ಪ್ರಕಾರ ಇದೊಂದು ಸಿದ್ದೇಶ್ವರನ ಶಿಲ್ಪವೆಂದು ಕರೆಯುತ್ತಾರೆ. ಆದರೆ ನನ್ನ ಸಂಶೋಧನೆಗೆ ಪೂರಕವಾಗಿ ಈ ಶಿಲ್ಪವನ್ನು 'ಕಾಳಭೈರವನ ಶಿಲ್ಪ' ಎಂದು ಪರಿಗಣಿಸುತ್ತೇನೆ. ಈ ಶಿಲ್ಪವು ನಗ್ನತೆಯಿಂದ ಕೂಡಿದ್ದು, ಚತುರ್ಭುಜವಾಗಿದ್ದು ನಾಲ್ಕು ಕೈಗಳಲ್ಲಿ ಖಡ್ಗ, ಢಮರು, ಪಾತ್ರೆ ಮತ್ತು ಸರ್ಪವನ್ನು ಹಿಡಿದಿರುವುದು ವಿಶೇಷತೆ ಎನಿಸುತ್ತದೆ. ಭೈರವನಿಗೆ ವಿಶೇಷವಾಗಿ ತಲೆಯ ಮೇಲೆ ವಿಚಿತ್ರವಾದ ಮಾದರಿಯಲ್ಲಿ ಕೂದಲು ಇರುತ್ತದೆ. ಆದರೆ ಈ ಶಿಲ್ಪದಲ್ಲಿ ತಲೆಯ ಕೂದಲನ್ನು ಮೇಲಕ್ಕೆ ಎತ್ತಿದ ಮಾದರಿಯಲ್ಲಿ ಕಟ್ಟಲಾಗಿದೆ. ಕಂಠದಲ್ಲಿ ರುದ್ರಾಕ್ಷಿಮಾಲೆಯನ್ನು ಧರಿಸಿದ್ದಾನೆ. ಕಾಲಿಗೆ ಕಾಲು ಕಡಗ ಧರಿಸಿದ್ದು, ಕಾಳಭೈರವನು ವಿಶೇಷವಾಗಿ ಹಲವು ಕೈಗಳನ್ನು ಹೊಂದಿರುವುದು. ಇಲ್ಲಿ ಸಿಕ್ಕಿರುವ ಶಿಲ್ಪದಲ್ಲಿ ಮಾತ್ರ ನಾಲ್ಕು ಕೈಗಳನ್ನು ಕಾಣುತ್ತೇವೆ. ಪ್ರಮುಖವಾಗಿ ಕಾಳಭೈರವನ ಕೈಗಳಲ್ಲಿ ಢಮರುಗ, ವೀರಖಡ್ಗ, ತ್ರಿಶೂಲ, ಕಪಾಲ, ಪಾತ್ರೆ ಮತ್ತು ರುಂಡಗಳು ಕಂಡುಬರುತ್ತದೆ. ಕೆಲವೊಂದು ಭೈರವ ಶಿಲ್ಪಗಳಲ್ಲಿ ನಾಯಿ, ಎರಡು ಕಾಲುಗಳನ್ನು ಮೇಲೆ ಎತ್ತಿ ನಿಂತು ನೋಡುತ್ತಿರುವಂತೆ ಕಂಡುಬರುತ್ತದೆ. ಆದರೆ ಈ ಶಿಲ್ಪದಲ್ಲಿ ನಾಯಿಯ ಶಿಲ್ಪ ಕಂಡುಬರುವುದಿಲ್ಲ. ಸ್ಥಳೀಯ ಪ್ರಾಂತ್ಯದಲ್ಲಿ ಭೈರವನನ್ನು ಸಾಮಾನ್ಯ ವ್ಯಕ್ತಿಯ ಕಥೆಯ ಸನ್ನಿವೇಶಕ್ಕನುಗುಣವಾಗಿ ಶಿಲ್ಪಿ ಕೆತ್ತಿದ್ದಾನೆ ಎಂಬುದು ಈ ಶಿಲ್ಪಕಲೆಯಿಂದ ತಿಳಿದುಬರುತ್ತದೆ. ಕೆಲವು ವಿದ್ವಾಂಸರ ಪ್ರಕಾರ ಈ ಶಿಲ್ಪವನ್ನು ವೀರನ

ಶಿಲ್ಪವೆಂದು ಹೇಳುತ್ತಾರೆ. ಆದರೆ ಈ ಶಿಲ್ಪವು ದೇವಾಲಯದ ಒಳಗಡೆ ಇರುವುದರಿಂದ ದೈವತ್ವಕ್ಕೆ ಏರಿಸಿ, ಭೈರವನ ಕಥೆಯನ್ನು ವರ್ಣಿಸಿರುವಂತೆ ಈ ಶಿಲ್ಪದಲ್ಲಿ ಕಂಡುಬರುತ್ತದೆ.(ಚಿತ್ರ ಸಂಖ್ಯೆ ೮೦)

**ಕಾಳಭೈರವ ಶಿಲ್ಪ**

ಈ ಶಿಲ್ಪವು ತಿರುಮಕೂಡಲು ಕ್ಷೇತ್ರದಲ್ಲಿರುವ ಸೋಸಲೆ ಹೊನ್ನದೇವಿ ದೇವಾಲಯದ ಮುಂಭಾಗದಲ್ಲಿ ಕಾಳಭೈರವ ಶಿಲ್ಪವಿದೆ. ಇದನ್ನು ಕಾಳಭೈರವ ಅಥವಾ ಭೈರವ ಶಿಲ್ಪವೆಂದು ಪರಿಗಣಿಸಲಾಗಿದೆ. ಕೆಲವು ಸ್ಥಳೀಯ ಪ್ರಕಾರ ಇದೊಂದು ಸಿದ್ದೇಶ್ವರನ ಶಿಲ್ಪವೆಂದು ಕರೆಯುತ್ತಾರೆ. ಆದರೆ ನನ್ನ ಸಂಶೋಧನೆಗೆ ಪೂರಕವಾಗಿ ಈ ಶಿಲ್ಪವನ್ನು 'ಕಾಳಭೈರವನ ಶಿಲ್ಪ' ಎಂದು ಪರಿಗಣಿಸುತ್ತೇನೆ. ಈ ಶಿಲ್ಪವು ನಗ್ನತೆಯಿಂದ ಕೂಡಿದ್ದು, ಚತುರ್ಭುಜವಾಗಿದ್ದು ನಾಲ್ಕು ಕೈಗಳಲ್ಲಿ ಖಡ್ಗ, ಢಮರು, ಪಾತ್ರೆ ಮತ್ತು ಸರ್ಪವನ್ನು ಹಿಡಿದಿರುವುದು ವಿಶೇಷತೆ ಎನಿಸುತ್ತದೆ. ಭೈರವನಿಗೆ ವಿಶೇಷವಾಗಿ ತಲೆಯ ಮೇಲೆ ವಿಚಿತ್ರವಾದ ಮಾದರಿಯಲ್ಲಿ ಕೂದಲು ಇರುತ್ತದೆ. ಆದರೆ ಈ ಶಿಲ್ಪದಲ್ಲಿ ತಲೆಯ ಕೂದಲನ್ನು ಮೇಲಕ್ಕೆ ಎತ್ತಿದ ಮಾದರಿಯಲ್ಲಿ ಕಟ್ಟಲಾಗಿದೆ. ಕಂಠದಲ್ಲಿ ರುದ್ರಾಕ್ಷಿಮಾಲೆಯನ್ನು ಧರಿಸಿದ್ದಾನೆ. ಕಾಲಿಗೆ ಕಾಲು ಕಡಗ ಧರಿಸಿದ್ದು, ಕಾಳಭೈರವನು ವಿಶೇಷವಾಗಿ ಹಲವು ಕೈಗಳನ್ನು ಹೊಂದಿರುವುದು. ಇಲ್ಲಿ ಸಿಕ್ಕಿರುವ ಶಿಲ್ಪದಲ್ಲಿ ಮಾತ್ರ ನಾಲ್ಕು ಕೈಗಳನ್ನು ಕಾಣುತ್ತೇವೆ. ಪ್ರಮುಖವಾಗಿ ಕಾಳಭೈರವನ ಕೈಗಳಲ್ಲಿ ಢಮರುಗ, ವೀರಖಡ್ಗ, ತ್ರಿಶೂಲ, ಕಪಾಲ, ಪಾತ್ರೆ ಮತ್ತು ರುಂಡಗಳು ಕಂಡುಬರುತ್ತದೆ.

ಕೆಲವೊಂದು ಭೈರವ ಶಿಲ್ಪಗಳಲ್ಲಿ ನಾಯಿ, ಎರಡು ಕಾಲುಗಳನ್ನು ಮೇಲೆ ಎತ್ತಿ ನಿಂತು ನೋಡುತ್ತಿರುವಂತೆ ಕಂಡುಬರುತ್ತದೆ. ಆದರೆ ಈ ಶಿಲ್ಪದಲ್ಲಿ ನಾಯಿಯ ಶಿಲ್ಪ ಕಂಡುಬರುವುದಿಲ್ಲ. ಸ್ಥಳೀಯ ಪ್ರಾಂತ್ಯದಲ್ಲಿ ಭೈರವನನ್ನು ಸಾಮಾನ್ಯ ವ್ಯಕ್ತಿಯ ಕಥೆಯ ಸನ್ನಿವೇಶಕ್ಕನುಗುಣವಾಗಿ ಶಿಲ್ಪಿ ಕೆತ್ತಿದ್ದಾನೆ ಎಂಬುದು ಈ ಶಿಲ್ಪಕಲೆಯಿಂದ ತಿಳಿದುಬರುತ್ತದೆ. ಕೆಲವು ವಿದ್ವಾಂಸರ ಪ್ರಕಾರ ಈ ಶಿಲ್ಪವನ್ನು ವೀರನ ಶಿಲ್ಪವೆಂದು ಹೇಳುತ್ತಾರೆ. ಆದರೆ ಈ ಶಿಲ್ಪವು ದೇವಾಲಯದ ಒಳಗಡೆ ಇರುವುದರಿಂದ ದೈವತ್ವಕ್ಕೆ ಏರಿಸಿ, ಭೈರವನ ಕಥೆಯನ್ನು ವರ್ಣಿಸಿರುವಂತೆ ಈ ಶಿಲ್ಪದಲ್ಲಿ ಕಂಡುಬರುತ್ತದೆ. ಈ ಶಿಲ್ಪವು ಶೈವ ಸಂಪ್ರದಾಯಕ್ಕೆ ಸೇರಲ್ಪಟ್ಟಂತಹ ಶಿಲ್ಪವಾಗಿದೆ ಎಂದಷ್ಟೇ ಹೇಳಬಹುದು. ಆದ್ದರಿಂದ ಸಿದ್ದೇಶ್ವರ, ಕಾಳಭೈರವೇಶ್ವರ, ಭೈರವ ಶಿಲ್ಪಗಳು ಹುಟ್ಟು ನಿರ್ವಾಣದ ರೂಪಗಳನ್ನೇ ತಳೆಯತ್ತವೆ. ಉದಾ; ಆಲಗೂಡಿನ ಸಿದ್ದೇಶ್ವರ ದೇವಾಲಯದಲ್ಲಿರುವ ಸಿದ್ದೇಶ್ವರನ

ಶಿಲ್ಪವು ಒಂದು ಅತ್ಯುತ್ತಮ ಉದಾಹರಣೆಯಾಗಿದೆ. ಹಾಗೂ ಮತ್ತೊಂದು ಪುಣ್ಯ ಕ್ಷೇತ್ರವಾದ ಆದಿಚುಂಚನಗಿರಿ ಶ್ರೀ ಕ್ಷೇತ್ರದ ಮೂಲಸಿದ್ದೇಶ್ವರನ ಶಿಲ್ಪ ಮತ್ತು ಇತ್ತೀಚಿನ ಕಾಲದ ಹಲವಾರು ಕಾಳಭೈರವೇಶ್ವರನ ಶಿಲ್ಪಗಳನ್ನು ನೋಡಿದರೆ ಸೋಸಲೆ ಹೊನ್ನಾದೇವಿ ದೇವಾಲಯದ ಕಾಳಭೈರವೇಶ್ವರನ ಹೋಲಿಕೆಯನ್ನೆ ಹೋಲುತ್ತದೆ. ಇದರಿಂದ ಈ ಶಿಲ್ಪವನ್ನು ಕಾಳಭೈರವನೆಂದು ನಿರೂಪಿಸಿರುತ್ತೇನೆ.

**ಗಣೇಶನ ಶಿಲ್ಪ**

ಕಲಿಯೂರು-ಕೊಳ್ಳೇಗಾಲ ಮುಖ್ಯರಸ್ತೆಯ ಬಲಭಾಗದಲ್ಲಿ ಸುಂದರವಾದ ಗಣೇಶನ ಶಿಲ್ಪವಿದೆ. ಈ ಶಿಲ್ಪವು ಇತ್ತೀಚಿನ ಕಾಲದ ಶಿಲ್ಪವಾಗಿದ್ದು ಪದ್ಮಾಸನದಲ್ಲಿ ಕೂರಿಸಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಮುಂಭಾಗದ ಎರಡು ಕೈಗಳಲ್ಲಿ ಅಭಯ ಹಸ್ತ ತೋರಿಸುತ್ತಿರುವುದು ಮತ್ತೊಂದು ಕೈಯಲ್ಲಿ ಪಾತ್ರೆ ಹಿಡಿದಿರುವುದು ಕಂಡುಬರುತ್ತದೆ. ಹಾಗೂ ಹಿಂದಿನ ಎರಡು ಕೈಗಳಲ್ಲಿ ಪರಸು ಮತ್ತು ಪಾಸ ಹಿಡಿದಿರುವುದು ಕಂಡುಬರುತ್ತದೆ. ಪಕ್ಕದಲ್ಲಿ ವಾಹನವಾದ ಇಲಿಯನ್ನೂ ಸಹ ಕೂರಿಸಲಾಗಿದೆ. ತಲೆಯ ಮೇಲೆ ಸುಂದರವಾದ ಕಿರೀಟವಿದ್ದು, ಅಗಲವಾದ ಕಿವಿಗಳು ಸುಂದರವಾದ ಸೊಂಡಲು, ಕಂಠಾಭರಣಗಳು ಅಲ್ಲದೇ ಪ್ರಭಾವಳಿಯಲ್ಲಿ ಮಕರ ತೋರಣಗಳನ್ನು ಸುಂದರವಾಗಿ ಕಡೆಯಲಾಗಿದೆ. (ಚಿತ್ರ ಸಂಖ್ಯೆ 81)

**ಗಣೇಶನ ಶಿಲ್ಪ**

ಮೇದಿನಿ ಗ್ರಾಮದ ದೇವಾಲಯದ ಮುಂಭಾಗದಲ್ಲಿದೆ. ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ಪ್ರಮುಖವಾಗಿ ಶಕ್ತಿಯ ಸಂಕೇತವಾಗಿ ಕಡೆಯಲಾಗಿದೆ. ಗಣೇಶನ ಹುಟ್ಟಿನ ಕುರಿತು ಶ್ವೇತಶಿಲ್ಪ ಮತ್ತು ಶಿವಪುರಾಣಗಳು ವಿಸ್ತಾರವಾಗಿ ಹೇಳುತ್ತವೆ. ಗಣೇಶನು ಶಿವ, ಪಾರ್ವತಿಯ ಮಗನೆಂದು, ಪಾರ್ವತಿಯ ನಿಷ್ಠಾವಂತ ಸೇವಕನೆಂದು, ಅಲ್ಲದೆ ಭೂತಗಣಗಳ ನಾಯಕ ಎಂದು ಕರೆಯಲಾಗುತ್ತದೆ. ಅಲ್ಲದೆ ವಿನಾಯಕ, ವಿಘ್ನೇಶ್ವರ, ಏಕದಂತ, ಲಂಬೋಧರ, ಗಜಾನನ, ಬಾಲಗಣಪತಿ, ತರುಣಗಣಪತಿ, ವೀರವಿಘೇಶ್ವರ, ಶಕ್ತಿಗಣಪತಿ ಮತ್ತು ಸರ್ವಸಿದ್ಧಿವಿನಾಯಕ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಶಿಲ್ಪವು ನಾಲ್ಕು ಭುಜಗಳನ್ನು ಹೊಂದಿದ್ದು, ಕೈಗಳಲ್ಲಿ ಪರಸು, ಪಾಸ, ಪಾತ್ರೆ ಮತ್ತು ಶಂಖವನ್ನು ಹಿಡಿದಿರುವುದು ಕಂಡುಬರುತ್ತದೆ. ಪಕ್ಕದಲ್ಲಿ ತನ್ನ ವಾಹನವಾದ ಇಲಿಯನ್ನು ಕಡೆಯಲಾಗಿದೆ. ಮುಖವನ್ನು

ನೋಡಿದರೆ ಆನೆಯ ಸೊಂಡಿಲಿನಂತಿದ್ದು ಒಂದು ಕೊಂಬು ಸ್ವಲ್ಪ ತುಂಡರಿಸಿದ್ದು ಮತ್ತೊಂದು ಕೊಂಬು ಸಂಪೂರ್ಣವಾಗಿ ಮುರಿದು ಹೋಗಿದೆ, ತಲೆಯ ಮೇಲೆ ಕಿರೀಟ ಮುಕುಟವಿದೆ, ಕಿವಿಯಲ್ಲಿ ಕಂಠಹಾರವಿದೆ, ಯಜ್ಞೋಪವಿದೆ (ಜನಿವಾರ) ಮತ್ತು ನಾಗಬಂಧವಿದೆ. ಇದರಿಂದ ಇದೊಂದು ಸರಳವಾದ ಗಣೇಶನ ಶಿಲ್ಪ ಎಂದು ಪರಿಗಣಿಸಲಾಗುತ್ತದೆ.

**ಮಹಿಷಮರ್ದಿನಿ/ಕಾಳಿ, ಬಿ. ಬೆಟ್ಟಹಳ್ಳಿ**

ರಂಗನಾಥ ದೇವಾಲಯದ ಮುಂಭಾಗದಲ್ಲಿ ಕಲ್ಲುಪೀಠದ ಮೇಲೆ 2 $^{1}/_{2}$ ಅಡಿ ಎತ್ತರವಿರುವ ಸುಂದರವಾದ ಮಹಿಷಮರ್ದಿನಿ ಶಿಲ್ಪವನ್ನು ಇಡಲಾಗಿದೆ. ಈ ಶಿಲ್ಪವು ಶಕ್ತಿ ಪ್ರಧಾನವಾದ ಶಿಲ್ಪವಾಗಿದ್ದು, ಗಂಗರ ಕಾಲದ ಶಿಲ್ಪವೆಂದು ಪರಿಗಣಿಸಬಹುದಾಗಿದೆ. ದೇವತೆಯು ತನ್ನ ವಾಹನವಾದ ಕೋಣನ (ಕೋಣ) ಮೇಲೆ ಕುಳಿತಿದ್ದು, ಕೋಣದ ಮುಖವನ್ನು ಒಂದು ಕೈಯಲ್ಲಿ ಹಿಡಿದಿದ್ದು, ಮತ್ತೊಂದು ಕೈಯಲ್ಲಿ ಭರ್ಜಿಯನ್ನು ಹಿಡಿದು ಅದರ ದೇಹಕ್ಕೆ ತಿವಿಯುತ್ತಿರುವ ದೃಶ್ಯ ಮನೋಜ್ಞವಾಗಿದೆ. ಜೊತೆಗೆ ಒಂದು ಕೈಯಲ್ಲಿ ಶಂಖ ಮತ್ತೊಂದು ಕೈಯಲ್ಲಿ ಚಿಕ್ಕದಾದ ಖಡ್ಗವನ್ನು ಹಿಡಿದಿರುವುದು ಕಂಡುಬರುತ್ತದೆ. ಮಹಿಷಮರ್ದಿನಿ ರೂಪವತಿಯಾಗಿದ್ದು ಸೊಂಟದಲ್ಲಿ ವಸ್ತ್ರವನ್ನು ಧರಿಸಿದ್ದಾಳೆ. ಈ ವಸ್ತ್ರವು ಸುಂದರವಾದ ನೆರಿಗೆಗಳಿಂದ ಕೂಡಿದ್ದು ಮಹಿಷಿ ಮರ್ದಿನಿಯು ಕಂಠಾಭರಣವನ್ನು ಮತ್ತು ತಲೆಯ ಮೇಲೆ ನಾಗರಶೈಲಿಯನ್ನು ಹೊಂದಿರುವ ಕಿರೀಟವನ್ನು ಧರಿಸಿದ್ದಾಳೆ. ಈ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಕ್ರಿ.ಶ 9ನೇ ಶತಮಾನದಲ್ಲಿ ನಿರ್ಮಾಣವಾಗಿರುವ ಶಿಲ್ಪವೆಂದು ಹೇಳಬಹುದು.(ಚಿತ್ರ ಸಂಖ್ಯೆ 82)

**ಸೂರ್ಯಶಿಲ್ಪ**

ವಿಜಯಪುರ ಅರ್ಕೇಶ್ವರ ದೇವಾಲಯದ ಒಳಭಾಗದಲ್ಲಿ ಕಂಡುಬರುತ್ತದೆ. ಇದೊಂದು ಪುಟ್ಟದಾಗಿದ್ದು, ಈ ಶಿಲ್ಪವು ಗಟ್ಟಿ ಗ್ರಾನೈಟ್ ಕಲ್ಲಿನಿಂದ ಕೆತ್ತಲ್ಪಟ್ಟಿದೆ. ಸೂರ್ಯನು ತನ್ನ ಎರಡು ಕೈಗಳಿಂದ ಕಮಲದ ಮೊಗ್ಗನ್ನು ಭುಜಗಳಿಗೆ ಇಟ್ಟುಕೊಂಡಂತಿದ್ದು, ಚಿಕ್ಕದಾದ ಕಾಲುಗಳು, ಸೊಂಟಗಳಲ್ಲಿ ವಸ್ತ್ರವನ್ನು ಧರಿಸಿರುವುದು, ಕರ್ಣಕುಂಡಲ, ಕಂಠಾಭರಣ, ತಲೆಯ ಮೇಲೆ ಕಿರೀಟವನ್ನು ಹೊಂದಿದೆ. ಚಪ್ಪಟೆಯಾದ ಮೂಗು, ಅಷ್ಟು ಸೊಗಸಾಗಿಲ್ಲ ಕಣ್ಣು ಮೂಡಿ ಬಂದಿದೆ.

ಒಟ್ಟಾರೆ ಈ ಶಿಲ್ಪದ ವಾಸ್ತು ಮಾದರಿಯನ್ನು ನೋಡಿ ದರೆ ಸಾಧಾರಣ ಸೂರ್ಯಶಿಲ್ಪ ಎಂದು ಪರಿಗಣಿಸಬಹುದಾಗಿದೆ. (ಚಿತ್ರ ಸಂಖ್ಯೆ ೮೩)

**ಸೂರ್ಯಶಿಲ್ಪ**

ಅಗಸ್ತ್ಯೇಶ್ವರ ದೇವಾಲಯದಲ್ಲಿರುವ ಸೂರ್ಯಶಿಲ್ಪವು ಅತ್ಯಂತ ಸುಂದರವಾದ ಶಿಲ್ಪವಾಗಿದೆ. ಈ ಶಿಲ್ಪವು ಸಮಭಂಗಿಯಲ್ಲಿ ನಿಂತಿದ್ದು ತನ್ನ ಎರಡು ಕೈಗಳಿಂದ ಕಮಲದ ಮೊಗ್ಗನ್ನು ಹಿಡಿದಿದ್ದು, ಸೊಂಟದಲ್ಲಿ ವಸ್ತ್ರವನ್ನೂ ಧರಿಸಿದ್ದು, ವಸ್ತ್ರವು ಬಳ್ಳಿ–ಸುರುಳಿ ಲತೆಗಳಿಂದ ಆವೃತಗೊಂಡಿದೆ. ಹಿಂಭಾಗದಲ್ಲಿ ಇಳಿಬಿಟ್ಟಂತೆ ವಸ್ತ್ರವನ್ನು ಧರಿಸಲಾಗಿದೆ. ತಲೆಯ ಮೇಲೆ ಕಿರೀಟ ಧರಿಸಿದ್ದು, ಕಿವಿಯಲ್ಲಿ ಸುಂದರವಾದ ಕರ್ಣಕುಂಡಲವನ್ನು ಧರಿಸಿದ್ದಾನೆ. ಜೊತೆಗೆ ಕಾಲಿಗೆ ಕಾಲು ಕಡಗ ಧರಿಸಿದ್ದು ಈ ಶಿಲ್ಪದ ವಾಸ್ತುರಚನಾ ಶೈಲಿಯಿಂದ ಹೇಳುವುದಾದರೆ ಇದೊಂದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಸೂರ್ಯಶಿಲ್ಪವೆಂದು ಹೇಳಬಹುದು.

ಒಟ್ಟಾರೆ ಶಿಲ್ಪರಚನೆಯಲ್ಲಿ ಅಂದು ಕಲಾವಿದರ ಭಾವನೆಯಾಗಿರುವುದರಿಂದ ಬೇರೆ ಬೇರೆ (ಹಿರಿಯೂರು, ಆಲಗೂಡು, ನಿಲಸೋಗೆ, ತಿ.ನರಸೀಪುರ, ಉಕ್ಕಲಗೆರೆ, ಇತ್ಯಾದಿ) ಗ್ರಾಮಗಳಲ್ಲಿ ಶಿಲ್ಪರಚನೆಯನ್ನೂ ಮಾಡಿರುವುದರಿಂದ ಆ ಸಂದರ್ಭಕ್ಕೆ ಅನುಸಾರವಾಗಿ ಶಿಲ್ಪರಚನೆ ಮಾಡಿರುವುದುಂಟು ಈ ಹಿನ್ನೆಲೆಯಿಂದ ಶಿಲ್ಪಿಯ ಕಲ್ಪನೆ, ಭಾವನೆಯಲ್ಲಿದ್ದು ಅಂದಿನ ಕಥೆಯನ್ನು ಹೇಳಲು ಚಿತ್ರಕಲಾ ದೃಷ್ಠಿಯಿಂದ ಗಮನಿಸಬಹುದಾಗಿದೆ. ರಾವಳೇಶ್ವರ ಅಥವಾ ರಾವಣನ ಕಥೆಯನ್ನೂ ಬಹುಶಃ ಕ್ರಿ.ಶ. 10ನೇ ಶತಮಾನದಲ್ಲಿ ರಾಜನ ಕಥೆಯಾಗಿತ್ತೆಂದು ಹೇಳಬಹುದು. ಏಕೆಂದರೆ ಮೈಸೂರು (ಮಹಿಷಮಂಡಲ) ಪ್ರಾಂತ್ಯದಲ್ಲಿ ಹೇರಳವಾಗಿ ಈ ರೀತಿ ಶಿಲ್ಪಗಳು ಕಂಡುಬರುತ್ತವೆ. ಆದ ಕಾರಣ ಈ ರಾಜನ ಶಕ್ತಿ – ಸಾಮರ್ಥ್ಯದ ದೃಷ್ಠಿಕೋನದಿಂದ ಶಿಲ್ಪಕಲೆಯನ್ನೂ ಪ್ರತಿಬಿಂಬಿಸಲಾಗಿದೆ. ಶಿಲ್ಪಗಳಲ್ಲಿ ಸ್ತ್ರೀಯರು ಅಕ್ಕಪಕ್ಕದಲ್ಲಿ ಪ್ರತಿಬಿಂಬಿತ ಗೊಂಡಿವೆ. ಈ ಎಲ್ಲಾ ಬಹುಮುಖ ಆಧಾರಗಳಿಂದ ರಾವಳೇಶ್ವರನ ಸಂಸ್ಕೃತಿ ಪ್ರಸ್ತುತ ಆಚರಣೆಯಲ್ಲಿದೆ ಎಂಬುದು ಗೋಚರವಾಗುತ್ತದೆ.

## ಅಡಿಟಿಪ್ಪಣಿಗಳು

1. ಶೇಷಶಾಸ್ತ್ರಿ ಆರ್ ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1982 ಪು.ಟ. ಸಂ-4

2. ಪರಮಶಿವಮೂರ್ತಿ. ಡಿ.ವಿ. ಕನ್ನಡ ಶಾಸನ ಶಿಲ್ಪ, ಹಂಪಿ-1999, ಪುಟ ಸಂಖ್ಯೆ-12

3. ಶೇಷಶಾಸ್ತ್ರಿ. ಆರ್-ಪೂರ್ವೋಕ್ತ, ಪುಟ ಸಂಖ್ಯೆ-4

4. ಎಪಿಗ್ರಾಫಿಯ ಸಂಪುಟ-5, ಪುಟ ಸಂಖ್ಯೆ-543

5. ಎಪಿಗ್ರಾಫಿಯ ಸಂಪುಟ-5, ಪುಟ ಸಂಖ್ಯೆ-603

6. ಶೇಠೆ. ಬಿ.ಎಸ್-ಕರ್ನಾಟಕದಲ್ಲಿ ಸತಿಪದ್ಧತಿ, ಹಂಪಿ-1999, ಪುಟ ಸಂಖ್ಯೆ-259

7.ಚಿದಾನಂದಮೂರ್ತಿ. ಎಂ.-ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂಪುಟ-1, ಪುಟ ಸಂಖ್ಯೆ-1

# ಅಧ್ಯಾಯ–5

## ಉಪಸಂಹಾರ

ಭೂಮಿಯ ಮೇಲೆ ಎಂದು ಮಾನವನ ಉಗಮವಾಯಿತೋ ಅಂದೇ ಕಲೆಯೂ ಉಗಮವಾಯಿತೆಂದು ಭಾವಿಸಿದರೆ ಅತಿಶಯೋಕ್ತಿಯಾಗಲಾರದು. ಮನುಕುಲದಲ್ಲಿ ಭಾವನೆಯು ರೂಪಗೊಂಡಂತೆ ತನ್ನ ಅನುಭವಗಳ ಅಭಿವ್ಯಕ್ತಿಗೆ ತಕ್ಕಂತೆ ಕಲೆಯನ್ನು ರೂಪಿಸಿ ವಿವಿಧ ಕಲಾಪ್ರಕಾರಕ್ಕೆ ವಿವಿಧ ಹೆಸರುಗಳನ್ನು ನೀಡಿದನು. ಕರ್ನಾಟಕದ ಇತಿಹಾಸದಲ್ಲಿ ವಾಸ್ತುಶಿಲ್ಪ ಕಲೆ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಇತಿಹಾಸ ರಚನೆಯಲ್ಲಿ ನೆರವಾಗುವ ಅಂಶಗಳಲ್ಲಿ ವಾಸ್ತುಶಿಲ್ಪ ಆಕರವೂ ಒಂದು. ವಾಸ್ತುಶಿಲ್ಪ ಧಾರ್ಮಿಕ ಚೇತನದ ಪ್ರತೀಕವಾಗಿದ್ದಂತೆ ಸಮಕಾಲೀನ ಸಾಮಾಜಿಕ ಪರಂಪರೆಯ ಪ್ರತಿಬಿಂಬವೂ ಆಗಿದ್ದಿತ್ತು. ಯಾವ ಕಾಲ ಯುಗದಲ್ಲಾದರೂ ಕಲೆ ಮತ್ತು ವಾಸ್ತುಶಿಲ್ಪಗಳು ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಪ್ರತೀಕವಾಗಿರುತ್ತವೆ.

ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ವಾಸ್ತುಶಿಲ್ಪಗಳ ಅಧ್ಯಯನವನ್ನು ಅವು ಮೂಡಿ ಬಂದ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸಿ ವಾಸ್ತು ಮತ್ತು ಶಿಲ್ಪಗಳ ಒಂದು ಚಿತ್ರಣವನ್ನು ನೀಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಇತ್ತೀಚೆಗಂತೂ ದೇವಾಲಯಗಳನ್ನು ರಕ್ಷಿಸದೇ ಅವುಗಳನ್ನು ಉಳಿಸಿಕೊಳ್ಳುವ ಹೆಚ್ಚಿನ ಪ್ರಯತ್ನವೂ ನಡೆಯದಿರುವುದರಿಂದ ಇವು ಅವನತಿ ಹೊಂದುತ್ತಿವೆ. ಇದು ವಾಸ್ತುಶಿಲ್ಪದ ಅಧ್ಯಯನಕಾರರಿಗೆ ಅತ್ಯಂತ ನೋವಿನ ಸಂಗತಿಯಾಗಿದೆ. (ಉದಾ: ತಡಿಮಾಲಂಗಿ, ಸೋಮನಾಥಪುರ, ತಲಕಾಡು, ಸೋಸಲೆ, ಆಲಗೂಡು, ಅಕ್ಕೂರು, ಬನ್ನೂರು, ಮೂಗೂರು, ಮುಡುಕುತೊರೆ, ಒಡ್ಡಗ್ಗಲ್ಲರಂಗಪ್ಪನ ಬೆಟ್ಟ ಮುಂತಾದ ಕಡೆ ಇರುವ ದೇವಾಲಯಗಳು.) ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲೂ ಶಕ್ತಿಮೀರಿ ದೇವಾಲಯಗಳನ್ನು ಶೋಧಿಸಿ, ಮಾಹಿತಿ ಸಂಗ್ರಹಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕ ರಾಜ್ಯ ಪುರಾತತ್ವ ಮತ್ತು ಭಾರತ ಸರ್ಕಾರ ಪುರಾತತ್ವ ಇಲಾಖೆ ಕೆಲವು ದೇವಾಲಯಗಳನ್ನು ಸಂರಕ್ಷಿಸುವ ಕಾರ್ಯ ಕೈಗೊಂಡಿದೆ. ಇದು ಕೊಂಚ ಸಮಾಧಾನ ತರುವ ಸಂಗತಿಯಾಗಿದೆ.

ತಿರುಮಕೂಡಲು ನರಸೀಪುರ ತಾಲೂಕಿನಾದ್ಯಂತ ಚದುರಿ ಹೋಗಿರುವ ದೇವಾಲಯಗಳ ವಾಸ್ತುಶಿಲ್ಪಗಳನ್ನು ಅನೇಕ ಪರಿಮಿತಿಗಳೊಡನೆ ಕ್ಷೇತ್ರ ಕಾರ್ಯ ಕೈಗೊಂಡು ಬೇರೆ ಬೇರೆ ಕಾಲದಲ್ಲಿ ವಿವಿಧ ಪ್ರದೇಶಗಳಲ್ಲಿ ವಿವಿಧ ಧರ್ಮಗಳಿಗೆ ಸಂಬಂಧಿಸಿದಂತೆ ನಿರ್ಮಾಣವಾಗಿರುವ ದೇವಾಲಯ ಮತ್ತು ಬಸದಿಗಳನ್ನು ಕ್ಷೇತ್ರ ಪರಿವೀಕ್ಷಣೆ ಕಾರ್ಯದಲ್ಲಿ ಗುರುತಿಸಿದೆ. ಇದರಿಂದಾಗಿ ತಾಲೂಕಿನಲ್ಲಿ ದೇವಾಲಯಗಳ ಬೆಳವಣಿಗೆಯ ಸ್ಥೂಲ ಚಿತ್ರ ನಮಗೆ ದೊರೆಯುವಂತಾಗಿದೆ. ಇದು ಈ ಅಧ್ಯಯನದ ಪ್ರಮುಖ ಫಲಶ್ರುತಿ ಎಂದರೆ ತಪ್ಪಾಗಲಾರದು.

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕ್ಷೇತ್ರಕಾರ್ಯವನ್ನೇ ಪ್ರಧಾನವಾಗಿ ಕೈಗೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಈ ಬಗೆಯ ಕೆಲಸ ಈ ತಾಲೂಕಿನ ಮಟ್ಟಿಗೆ ಇದು ಮೊದಲ ಪ್ರಯತ್ನವಾಗಿದೆ.

ಇದುವರೆಗೂ ಯಾವುದಾದರೂಂದು ದೇವಾಲಯದ, ಒಂದು ಗ್ರಾಮದ ಅಥವಾ ಶಿಲ್ಪದ ಆಧಾರದ ಮೇಲೆ ಕೆಲವು ವಿದ್ವಾಂಸರು ಸ್ವಲ್ಪಮಟ್ಟಿನ ಕ್ಷೇತ್ರಕಾರ್ಯವನ್ನು ಮಾಡಿ ತಮ್ಮ ಲೇಖನಗಳಲ್ಲಿ ವಿವರಗಳನ್ನು ನೀಡಿದ್ದಾರೆ. ಆದರೆ ಇಡೀ ತಾಲೂಕಿನ ವಾಸ್ತುಶಿಲ್ಪ ಮತ್ತು ಸಾಂಸ್ಕೃತಿಕ ಅಧ್ಯಯನವನ್ನು ಗಮನದಲ್ಲಿರಿಸಿಕೊಂಡು ಸಮಗ್ರ ಕ್ಷೇತ್ರಕಾರ್ಯ ಇದುವರೆಗೂ ನಡೆದಿರಲಿಲ್ಲ. ಆ ಕೊರತೆಯನ್ನು ಪ್ರಸ್ತುತ ಸಂಶೋಧನಾ ಮಹಾಪ್ರಬಂಧ ತುಂಬಿ ಕೊಡುತ್ತಿರುವುದು ಸಮಾಧಾನಕರ ವಿಚಾರವಾಗಿದೆ. ಈ ಪ್ರಬಂಧದಲ್ಲಿ ತಾಲೂಕಿನ ಮಹತ್ವದ ಹಲವು ದೇವಾಲಯಗಳ ಹಾಗೂ ಶಿಲ್ಪಗಳ ಪರಿಚಯವನ್ನು ನೀಡಲಾಗಿದೆ.

ಈ ಮಹಾಪ್ರಬಂಧದ ಅಧ್ಯಾಯಗಳಲ್ಲಿ ಚರ್ಚಿಸಲಾಗಿರುವ, ಗಮನಿಸಿರುವ ವಿಷಯಗಳಿಗೆ ಅಲ್ಲಲ್ಲಿಯೇ ಸಂದರ್ಭೋಚಿತವಾಗಿ ನನ್ನ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿದ್ದೇನೆ. ಈ ಸಂಶೋಧನೆಯ ಮುಖ್ಯ ಉದ್ದೇಶ ದೇವಾಲಯಗಳ ವಾಸ್ತುಶಿಲ್ಪದ ವಿವರವಾದ ಅಧ್ಯಯನವಾಗಿದೆ. ಆಯಾಕಾಲಘಟ್ಟಗಳಲ್ಲಿ ನಿರ್ಮಾಣವಾದ ಎಲ್ಲಾ ದೇವಾಲಯಗಳನ್ನು ಅಧ್ಯಯನ ಮಾಡುವುದರಿಂದ, ದೇವಾಲಯದ ಪ್ರತಿಯೊಂದು ಭಾಗದ ವೈಶಿಷ್ಟ್ಯ, ಅದರ ಅಸ್ತಿತ್ವ, ಅದರ ಅರ್ಥಪೂರ್ಣತೆ ಇದ್ದಂತಹ ವಿಷಯಗಳನ್ನು ವಿಮರ್ಶಾತ್ಮಕವಾಗಿ ಸೈದ್ಧಾಂತಿಕವಾಗಿ ನೋಡಲು ಸಾಧ್ಯವಾಗುತ್ತದೆ. ಅಂಥದೊಂದು ಪ್ರಯತ್ನ ಇಲ್ಲಿನದು.

ಪ್ರಸ್ತುತ ಅಧ್ಯಯನವನ್ನು ಐದು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದ್ದು, ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ವ್ಯಾಪ್ತಿಯನ್ನು, ಆಕರಗಳನ್ನು ಇಲ್ಲಿಯವರೆಗೆ ಈ ಪ್ರದೇಶಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳನ್ನು ಕುರಿತಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಪ್ರದೇಶದ ಪರಿಚಯ, ಇಲ್ಲಿಯ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ಆರಂಭಕಾಲ ಮತ್ತು ಈ ಪ್ರದೇಶವನ್ನಾಳಿದ ವಿವಿಧ ರಾಜಮನೆತನಗಳು ಅರಸರು, ರಾಣಿಯರು, ಸ್ಥಳೀಯ ಸಾಮಂತ ನಾಯಕರು, ಅಧಿಕಾರಿಗಳ ಬಗೆಗೆ ಕಿರುಪರಿಚಯ ನೀಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಶೈವ ದೇವಾಲಯಗಳನ್ನು ವೈಷ್ಣವ ದೇವಾಲಯಗಳನ್ನು ಜೈನ ಬಸದಿಗಳನ್ನು ಮತ್ತು ಕೆಲವು ಶಾಸನ ಉಲ್ಲೇಖಿತ ದೇವಾಲಯಗಳನ್ನು ಸಮೀಕ್ಷಿಸಲಾಗಿದೆ. ಅವುಗಳು ಬೆಳೆದು ಬಂದ ದಾರಿ ವಾಸ್ತುಶೈಲಿಯ ಮುಖ್ಯ ಲಕ್ಷಣಗಳು ಮತ್ತು ನಿರ್ಮಾಣದ ಕಾಲ ಹಾಗೂ ನಿರ್ಮಾತೃಗಳು, ಪೋಷಕರು ಮೊದಲಾದ ವಿವರಗಳನ್ನು ನೀಡಲಾಗಿದೆ. ಜೊತೆಜೊತೆಗೆ ಆಯಾ ಸ್ಥಳದ ಭೌಗೋಳಿಕ ಲಕ್ಷಣಗಳು, ಸ್ಥಳೀಯ ಐತಿಹ್ಯಗಳು, ಸ್ಥಳ ಪುರಾಣಗಳನ್ನು ದಾಖಲಿಸಿವೆ, ದೇವಾಲಯಗಳ ವಾಸ್ತುಶಿಲ್ಪದ ಲಕ್ಷಣಗಳನ್ನು ಮೂರ್ತಿಶಿಲ್ಪದ ವಿಶೇಷತೆಯನ್ನೂ ನೀಡಲಾಗಿದೆ. ಶಾಸನದಲ್ಲಿ ಉಲ್ಲೆಖಿತವಾದ ಭಗ್ನಗೊಂಡಿರುವ, ಸಂಪೂರ್ಣವಾಗಿ ನಾಶ ವಾಗಿರುವ, ಯಾವ ದಾಖಲೆಯಲ್ಲೂ ದಾಖಲಾಗದ ಹಾಗೂ ವಾಸ್ತುಶೈಲಿ ದೃಷ್ಟಿಯಿಂದ ಸಾಧಾರಣವಾದ ದೇವಾಲಯಗಳ ವಿವರಣೆಯನ್ನೂ ನೀಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ತಾಲೂಕಿನಾದ್ಯಂತ ಕಂಡು ಬರುವ ವೀರಗಲ್ಲುಗಳು, ಶಾಸನೋಕ್ತ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ವೀರಮಾಸ್ತಿಗಲ್ಲುಗಳು ಮತ್ತು ಬಿಡಿಶಿಲ್ಪಗಳ ಬಗ್ಗೆ ವಿವರಿಸಲಾಗಿದೆ.

ಕೊನೆಯ ಅಧ್ಯಾಯ ಉಪಸಂಹಾರವಾಗಿದ್ದು ಇದರಲ್ಲಿ ಸಂಶೋಧನೆಯ ಒಟ್ಟು ಸಾರಾಂಶವನ್ನು ಕ್ರೋಢಿಕರಿಸಿದೆ.

ದೇವಾಲಯಗಳ ವಿವರಣೆಯನ್ನು ನೀಡಿ ಕೊನೆಯಲ್ಲಿ ದೇವಾಲಯಗಳ ಪಟ್ಟಿಯನ್ನು ನೀಡಿದ್ದು ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಕಂಡು ಬರುವ ದೇವಾಲಯಗಳ

ಹೆಸರು, ನಿರ್ಮಾಣದ ಕಾಲ, ನಿರ್ಮಾತೃರು, ಪೋಷಕರು, ಈಗ ಆ ದೇವಾಲಯಗಳ ಸ್ಥಿತಿಗತಿಗಳ ವಿಷಯಗಳನ್ನು ಬಗ್ಗೆ ವಿವರಣೆ ನೀಡಲಾಗಿದೆ. ಅನಂತರದಲ್ಲಿ ಗ್ರಂಥಸೂಚಿ, ತಳನಕ್ಷೆ ಮತ್ತು ಛಾಯಾಚಿತ್ರಗಳನ್ನೂ ಒದಗಿಸಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸುಮಾರು 1.೮೦೦ ಛಾಯಾಚಿತ್ರಗಳನ್ನು ತೆಗೆಯಲಾಯಿತು. ಇವುಗಳಲ್ಲಿ ಆಯ್ದ, ಅಗತ್ಯಕ್ಕೆ ಅನುಗುಣವಾದ ಕೆಲವು ಛಾಯಾಚಿತ್ರಗಳನ್ನು ಸೂಕ್ತವಾಗಿ ಅಳವಡಿಸಲಾಗಿದೆ.

ಪ್ರಸ್ತುತ ಅಧ್ಯಯನ ತಿರುಮಕೂಡಲು ನರಸೀಪುರ ತಾಲೂಕಿಗೆ ಸೀಮಿತವಾದಂತೆ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ವಿವರಣೆಯನ್ನು ಆದಷ್ಟು ಮಟ್ಟಿಗೆ ಅಧಿಕೃತವಾಗಿ ನೀಡಲಾಗಿದೆ. ದೇವಾಲಯಗಳು, ಬಸದಿಗಳು, ಶಿಲ್ಪಗಳು, ವೀರಗಲ್ಲುಗಳನ್ನು ಸಂರಕ್ಷಿಸಿಕೊಂಡು ಹೋಗಿ ಮುಂದಿನ ಪೀಳಿಗೆಗೆ ಹಸ್ತಾಂತರಿಸುವುದು ನಮ್ಮ ಆದ್ಯ ಕರ್ತವ್ಯವೂ ಜವಬ್ದಾರಿಯೂ ಆಗಿದೆ.

## ತಿರುಮಕೂಡಲು ನರಸೀಪುರ ತಾಲೂಕಿನ ದೇವಾಲಯಗಳ ಪಟ್ಟಿ

| ಕ್ರಮ ಸಂಖ್ಯೆ | ಸ್ಥಳ | ದೇವಾಲಯಗಳು | ಕಾಲಮಾನ/ ರಾಜಮನೆತನ | ನಿರ್ಮಾತೃರು | ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ದೇವಾಲಯಗಳ ಈಗಿನ ಸ್ಥಿತಿಗತಿ |
|---|---|---|---|---|---|
| 1 | ಅಕ್ಕೂರು | ಚೋಳೇಶ್ವರ ದೇವಾಲಯ | ಕ್ರಿ.ಶ. 12ನೇ ಶತಮಾನ | ಚೋಳರ ಕಾಲ | ಉತ್ತಮವಾಗಿದೆ |
| 2 | ಆಲಗೂಡು | ಲಕ್ಷ್ಮೀ ದೇವಾಲಯ | ಕ್ರಿ.ಶ. 15ನೇ ಶತಮಾನ | ವಿಜಯನಗರ ಕಾಲ | ಉತ್ತಮವಾಗಿದೆ |
| 3 | ಆಲಗೂಡು | ಮಾರಮ್ಮನ ದೇವಾಲಯ | | ವಿಜಯನಗರ ಕಾಲ | ಉತ್ತಮವಾಗಿದೆ |
| 4 | ಆಲಗೂಡು | ಬಿಸಿಲು ಮಾರಮ್ಮನ ದೇವಾಲಯ | ಕ್ರಿ.ಶ. 8ನೇ ಶತಮಾನ | | ಉತ್ತಮವಾಗಿದೆ |
| 5 | ಆಲಗೂಡು | ಸಿದ್ದೇಶ್ವರ ದೇವಾಲಯ | | ಗಂಗರ ಕಾಲ | ಉತ್ತಮವಾಗಿದೆ |
| 6 | ಆಲಗೂಡು | ಚಲುವರಾಯ ಸ್ವಾಮಿ ದೇವಾಲಯ | | ಗಂಗ/ಹೊಯ್ಸಳರ ಕಾಲ | ಶಿಥಿಲಾವಸ್ಥೆ |
| 7 | ಬನ್ನೂರು | ಹನುಮಂತೇಶ್ವರ ದೇವಾಲಯ | | ಗಂಗ/ಹೊಯ್ಸಳ | ಉತ್ತಮವಾಗಿದೆ |
| 8 | ಬನ್ನೂರು | ಕೈಲಾಸೇಶ್ವರ ದೇವಾಲಯ | | ಹೊಯ್ಸಳ/ವಿಜಯನಗರ | ಜೀರ್ಣೋದ್ಧಾರವಾಗಿದೆ |
| 9 | ಬನ್ನೂರು | ಜರ್ನಾಧನ ದೇವಾಲಯ | 12ನೇ ಶತಮಾನ | ಹೊಯ್ಸಳ | ಉತ್ತಮವಾಗಿದೆ |
| 10 | ಬನ್ನೂರು | ತೀರ್ಥ ರಾಮೇಶ್ವರ ಗುಡಿ | 16ನೇ ಶತಮಾನ | | ಜೀರ್ಣೋದ್ಧಾರವಾಗಿದೆ |
| 11 | ಬನ್ನೂರು | ಹೇಮಾದ್ರಮ್ಮನ ಗುಡಿ | | ವಿಜಯನಗರೋತ್ತರ ಕಾಲ | ಜೀರ್ಣೋದ್ಧಾರವಾಗಿದೆ |
| 12 | ಬನ್ನೂರು | ಸರೋವರಾಂಜನೇಯ ದೇವಾಲಯ | | ವಿಜಯನಗರ ಕಾಲ | ಜೀರ್ಣೋದ್ಧಾರವಾಗಿದೆ |
| 13 | ಬನ್ನೂರು | ಕೋದಂಡರಾಮ ಸ್ವಾಮಿ ದೇವಾಲಯ | | ಗಂಗ | ಉತ್ತಮವಾಗಿದೆ |
| 14 | ಬಿ. ಬೆಟ್ಟ ಹಳ್ಳಿ | ಒಡ್ಗಲ್ ರಂಗನಾಥಸ್ವಾಮಿ ಬೆಟ್ಟ | | ವಿಜಯನಗರ | ಉತ್ತಮವಾಗಿದೆ |

| 15 | ಭೈರಾಪುರ | ಬಸವೇಶ್ವರ ದೇವಾಲಯ | ಕ್ರಿ.ಶ. 14ನೇ ಶತಮಾನ | | ಜೀರ್ಣೋದ್ಧಾರವಾಗಿದೆ |
|---|---|---|---|---|---|
| 16 | ಚಿದರವಳ್ಳಿ | ಗಣಪತಿ ಗುಡಿ | ಕ್ರಿ.ಶ. 13ನೇ ಶತಮಾನ | | ಉತ್ತಮವಾಗಿದೆ |
| 17 | ಚಿದರವಳ್ಳಿ | ಸೋಮೇಶ್ವರ ದೇವಾಲಯ | ಹೊಯ್ಸಳ | 2ನೇ ಬಲ್ಲಾಳ | ಉತ್ತಮವಾಗಿದೆ |
| 18 | ಚಿಮಿಲಿ | ಸೋಮೇಶ್ವರ ದೇವಾಲಯ | ಕ್ರಿ.ಶ.17ನೇ ಶತಮಾನ | | ಉತ್ತಮವಾಗಿದೆ |
| 19 | ಗರ್ಗೇಶ್ವರಿ | ಗರ್ಗೇಶ್ವರ ಸ್ವಾಮಿ ದೇವಾಲಯ | | | ಉತ್ತಮವಾಗಿದೆ |
| 20 | ಹಿರಿಯೂರು | ಮಹಾಲಿಂಗೇಶ್ವರ ದೇವಾಲಯ | | | ಶಿಥಿಲಾವಸ್ಥೆ |
| 21 | ಹೆಮ್ಮಿಗೆ | ಸೋಮೇಶ್ವರ ಗುಡಿ | ಗಂಗ | | ಉತ್ತಮವಾಗಿದೆ |
| 22 | ಹೆಮ್ಮಿಗೆ | ರಾವಣೇಶ್ವರ ದೇವಾಲಯ | ಚೋಳ | | ಉತ್ತಮವಾಗಿದೆ |
| 23 | ಹೆಮ್ಮಿಗೆ | ವರದರಾಜ ದೇವಾಲಯ | ವಿಜಯನಗರ | | ಉತ್ತಮವಾಗಿದೆ |
| 24 | ಹೊಳೆಸಾಲು | ಮಹಾಲಿಂಗೇಶ್ವರ | | | ಶಿಥಿಲಾವಸ್ಥೆ |
| 25 | ಕರುಹಟ್ಟಿ | ಬಸವೇಶ್ವರ ದೇವಾಲಯ | 14ನೇ ಶತಮಾನ | | ಉತ್ತಮವಾಗಿದೆ |
| 26 | ಕುರುಬೂರು | ಮಹಾಲಿಂಗೇಶ್ವರ ದೇವಾಲಯ | | | ಜೀರ್ಣೋದ್ಧಾರವಾಗಿದೆ |
| 27 | ಕಾಳಿಹುಂಡಿ | ಚನ್ನಕಾಳಮ್ಮ ದೇವಾಲಯ | | | ಜೀರ್ಣೋದ್ಧಾರವಾಗಿದೆ |
| 28 | ಕಲಿಯೂರು | ಮಲ್ಲಿಕಾರ್ಜುನ ದೇವಾಲಯ | | | ಶಿಥಿಲಾವಸ್ಥೆ |
| 29 | ಮರಡಿಪುರ | ಮಲ್ಲಿಕಾರ್ಜುನ ಸ್ವಾಮಿ ದೇವಾಲಯ | 12ನೇ ಶತಮಾನ | ಗಂಗ | ಉತ್ತಮವಾಗಿದೆ |
| 30 | ಮರಡಿಪುರ | ಮರುಡೇಶ್ವರ ಸ್ವಾಮಿ ದೇವಾಲಯ | ಕ್ರಿ.ಶ.12 ನೇ ಶತಮಾನ | ಗಂಗ | ಉತ್ತಮವಾಗಿದೆ |
| 31 | ಮಡವಾಡಿ | ನಂಜುಂಡೇಶ್ವರ ದೇವಾಲಯ | | | ಉತ್ತಮವಾಗಿದೆ |
| 32 | ಮಾವಿನ ಹಳ್ಳಿ | ಈಶ್ವರ ಗುಡಿ | | | ಜೀರ್ಣೋದ್ಧಾರವಾಗಿದೆ |
| 33 | ಮಾರನಪುರ | ಬಸವೇಶ್ವರ ದೇವಾಲಯ | | | ಉತ್ತಮವಾಗಿದೆ |
| 34 | ಮುಡುಕುತೊರೆ | ಮಲ್ಲಿಕಾರ್ಜುನ ದೇವಾಲಯ | ಗಂಗ/ಹೊಯ್ಸಳ | ಮುಮ್ಮಡಿ ಕೃಷ್ಣರಾಜ ಒಡೆಯರ್ | ಉತ್ತಮವಾಗಿದೆ |

| 35 | ಮೂಗೂರು | ತಿಬ್ಬಾದೇವಿ ದೇವಾಲಯ | ಗಂಗ/ಹೊಯ್ಸಳ | | ಉತ್ತಮವಾಗಿದೆ |
|---|---|---|---|---|---|
| 36 | ಮೂಗೂರು | ದೇಶೇಶ್ವರ ದೇವಾಲಯ | 12ನೇ ಶತಮಾನ | ಚೋಳ/ಹೊಯ್ಸಳ | ಉತ್ತಮವಾಗಿದೆ |
| 37 | ಮೂಗೂರು | ಆದಿನಾಥ ಬಸದಿ | | ಚೋಳ/ಹೊಯ್ಸಳ | ಉತ್ತಮವಾಗಿದೆ |
| 38 | ಮೂಗೂರು | ನಾರಾಯಣ ಸ್ವಾಮಿ ಗುಡಿ | 13–14ನೇ ಶತಮಾನ | ಮುಮ್ಮಡಿ ನರಸಿಂಹ | ಉತ್ತಮವಾಗಿದೆ |
| 39 | ಮೇದಿನಿ | ವೈದ್ಯನಾಥೇಶ್ವರ ದೇವಾಲಯ | | | ಉತ್ತಮವಾಗಿದೆ |
| 40 | ಸೋಮನಾಥ ಪುರ | ಪಂಚಲಿಂಗೇಶ್ವರ ಗುಡಿ | ಕ್ರಿ.ಶ. 1269 | ಹೊಯ್ಸಳ | ಶಿಥಿಲಾವಸ್ಥೆ |
| 41 | ಸೋಮನಾಥ ಪುರ | ಹೊಳೆಯತಡಿ ನರಸಿಂಹ ದೇವಾಲಯ | ಕ್ರಿ.ಶ.1260 | ಹೊಯ್ಸಳ | ಉತ್ತಮವಾಗಿದೆ |
| 42 | ಸೋಸಲೆ | ವೀರಭದ್ರ ದೇವಾಲಯ | ವಿಜಯನಗರ/ ಮೈಸೂರು ಒಡೆಯರ್ | | ಉತ್ತಮವಾಗಿದೆ |
| 43 | ಸೋಸಲೆ | ಹೊನ್ನಾದೇವಿ ದೇವಾಲಯ | ಗಂಗ | | ಉತ್ತಮವಾಗಿದೆ |
| 44 | ಸೋಸಲೆ | ಬಸಪ್ಪನ ಗುಡಿ | | | ಉತ್ತಮವಾಗಿದೆ |
| 45 | ಸೋಸಲೆ | ಕೋಟೆ ಗಣಪತಿ | | | ಉತ್ತಮವಾಗಿದೆ |
| 46 | ಸೋಸಲೆ | ವೈದ್ಯನಾಥೇಶ್ವರ ದೇವಾಲಯ | 14ನೇ ಶತಮಾನ | ವಿಜಯನಗರ | ಉತ್ತಮವಾಗಿದೆ |
| 47 | ತಲಕಾಡು | ಪಾತಾಳೇಶ್ವರ ದೇವಾಲಯ | ಕ್ರಿ.ಶ. 10ನೆಯ ಶತಮಾನ | ಗಂಗ | ಉತ್ತಮವಾಗಿದೆ |
| 48 | ತಲಕಾಡು | ಮರುಳೇಶ್ವರ ದೇವಾಲಯ | | ಗಂಗ | ಉತ್ತಮವಾಗಿದೆ |
| 49 | ತಲಕಾಡು | ಚೌಡೇಶ್ವರಿ ದೇವಾಲಯ | | ಗಂಗ | ಉತ್ತಮವಾಗಿದೆ |
| 50 | ತಲಕಾಡು | ವೀರಭದ್ರ ದೇವಾಲಯ | ಕ್ರಿ.ಶ. 16ನೇ ಶತಮಾನ | ವಿಜಯನಗರ | ಉತ್ತಮವಾಗಿದೆ |

| 51 | ತಲಕಾಡು | ಕೀರ್ತಿನಾರಾಯಣ ದೇವಾಲಯ | ಕ್ರಿ.ಶ. 1117 | ಹೊಯ್ಸಳ ವಿಷ್ಣುವರ್ಧನ | ಜೀರ್ಣೋದ್ಧಾರಗೊಳ್ಳುತ್ತಿದೆ |
|---|---|---|---|---|---|
| 52 | ತಡಿಮಾಲಂಗಿ | ಜನಾರ್ಧನ ದೇವಾಲಯ | ಕ್ರಿ.ಶ. 1004 | ರಾಜರಾಜ ಚೋಳ | ಶಿಥಿಲಾವಸ್ಥೆ |
| 53 | ತಡಿಮಾಲಂಗಿ | ಮಹಾಲಿಂಗ ದೇವಾಲಯ | ಕ್ರಿ.ಶ. 13ನೇ ಶತಮಾನ | ಹೊಯ್ಸಳ | ಉತ್ತಮವಾಗಿದೆ |
| 54 | ತಡಿಮಾಲಂಗಿ | ಮಲ್ಲಿಕಾರ್ಜುನ ದೇವಾಲಯ | ಕ್ರಿ.ಶ. 11ನೇ ಶತಮಾನ | ಒಂದನೇ ರಾಜೇಂದ್ರ ಚೋಳ | ಶಿಥಿಲಾವಾಗಿದೆ |
| 55 | ತಿ. ನರಸೀಪುರ | ಅಗಸ್ತೇಶ್ವರ ದೇವಾಲಯ | ಚೋಳ/ಹೊಯ್ಸಳ/ವಿಜಯನಗರ | ತಂಜಾವೂರಿನ ಚೋಳರ ಕಾಲ | ಉತ್ತಮವಾಗಿದೆ |
| 56 | ತಿ. ನರಸೀಪುರ | ಹನಮಂತೇಶ್ವರ ದೇವಾಲಯ | | ಚೋಳ | ಉತ್ತಮವಾಗಿದೆ |
| 57 | ತಿ. ನರಸೀಪುರ | ವೀರಭದ್ರೇಶ್ವರ ದೇವಾಲಯ | ಕ್ರಿ.ಶ. 10ನೇ ಶತಮಾನ | ಚೋಳ | ಉತ್ತಮವಾಗಿದೆ |
| 58 | ತಿ. ನರಸೀಪುರ | ಮೂಲಸ್ಥಾನೇಶ್ವರ ದೇವಾಲಯ | | | ಉತ್ತಮವಾಗಿದೆ |
| 59 | ತಿ. ನರಸೀಪುರ | ಶಿವರಾಮ ಸುಂದರಿಯಮ್ಮ ದೇವಿ ದೇವಾಲಯ | | ಮೈಸೂರು ಒಡೆಯರು | ಉತ್ತಮವಾಗಿದೆ |
| 60 | ತಿ. ನರಸೀಪುರ | ಭಿಕ್ಷೇಶ್ವರ ದೇವಾಲಯ | | ಮೈಸೂರು ಒಡೆಯರು | ಉತ್ತಮವಾಗಿದೆ |
| 61 | ತಿ. ನರಸೀಪುರ | ಆನಂದೇಶ್ವರ ದೇವಾಲಯ | --- | ಮೈಸೂರು ಒಡೆಯರು | ಉತ್ತಮವಾಗಿದೆ |
| 62 | ತಿ. ನರಸೀಪುರ | ಚೌಡೇಶ್ವರಿ ದೇವಾಲಯ | --- | ಹೊಯ್ಸಳ ಕಾಲ | ಉತ್ತಮವಾಗಿದೆ |
| 63 | ತಿ. ನರಸೀಪುರ | ಮಾರಮ್ಮನ ದೇವಾಲಯ | | ಗಂಗರ ಕಾಲ | ಉತ್ತಮವಾಗಿದೆ |
| 64 | ತಿ. ನರಸೀಪುರ | ಮಹದೇಶ್ವರ ದೇವಾಲಯ | | | ಉತ್ತಮವಾಗಿದೆ |
| 65 | ತಿ. ನರಸೀಪುರ | ಬಳ್ಳೇಶ್ವರ ಸ್ವಾಮಿ ದೇವಾಲಯ | | | ಉತ್ತಮವಾಗಿದೆ |
| 66 | ತಿ. ನರಸೀಪುರ | ಗುಂಜಾ ನರಸಿಂಹಸ್ವಾಮಿ ದೇವಾಲಯ | | ವಿಜಯನಗರ/ಮೈಸೂರು ಒಡೆಯರು | ಉತ್ತಮವಾಗಿದೆ |
| 67 | ತುಂಬಲ | ಕಾಶಿಲಿಂಗ ದೇವಾಲಯ | | ಹೊಯ್ಸಳ | ಉತ್ತಮವಾಗಿದೆ |

| | | | | | |
|---|---|---|---|---|---|
| 68 | ತುಂಬಲ | ಉಪ್ಪರಿಗೆ ಬಸವೇಶ್ವರ ದೇವಾಲಯ | | ವಿಜಯನಗರ ಕಾಲ | ಉತ್ತಮವಾಗಿದೆ |
| 69 | ತುರುಗನೂರು | ನಡುಗದ್ದೇಶ್ವರ ಸ್ವಾಮಿ ದೇವಾಲಯ | | | ಉತ್ತಮವಾಗಿದೆ |
| 70 | ಟಿ. ದೊಡ್ಡಪುರ | ಮಹದೇಶ್ವರ ದೇವಾಲಯ | | | ಉತ್ತಮವಾಗಿದೆ |
| 71 | ಉಕ್ಕಲಗೆರೆ | ಮಹದೇಶ್ವರ ದೇವಾಲಯ | | | ಉತ್ತಮವಾಗಿದೆ |
| 72 | ಯರಹಳ್ಳಿ | ಸಿದ್ದೇಶ್ವರ ಸ್ವಾಮಿ ದೇವಾಲಯ | | | ಉತ್ತಮವಾಗಿದೆ |
| 73 | ಯಡದೊರೆ | ಜರ್ನಾಧನ ದೇವಾಲಯ | | | ಉತ್ತಮವಾಗಿದೆ |

# ಗ್ರಂಥಸೂಚಿ

## Original Sources


1. Annual Reports of the Archaeological Survery of India, 1887 onwards

2. Annual Reports on Indian Epigraphy 1887 onwards

3. Annual Reports of the Mysore Archaeological Department.

4. Epigraphia Carnatica

5. Epigraphia Indica (Relevant Volumes)

6. South Indian Inscriptions (Relevant Volumes)

7. Indian Antiquity – A Review

## ಆಂಗ್ಲ ಭಾಷೆಯ ಪುಸ್ತಕಗಳು


Altekar, A.S. - Position of women in Hindu civilization, Banaras – 1956

- Rashtrakutas and their Times, Poona- 1967

Krishna Rao M.V. The Gangas of Talkadu, B.G.Pal and Co.Madras, 1963

Krishnaswami. S. - Sources of Vijayanagar History, Delhi – 1986

Ajit Ghosh - Some Unpublished Early Chola Portrait Sculpture, Catasiatizea, Zeischift – 1933

Arnold Hauser - Social History of Art ( 2 vols) London – 1951

Acharya. P.K. - Indian Architecture according to Manasara Shilpa Shastra, Madras – 1927

- Architecture of Manasara, Oxford – 933

- An Encyclopedia of Hindu Architecture. London-1946

Acharya. P.K. - A Dictionary of Hindu Architrecture. Oxford – 1927

Alain Danielou - Hindu Polytehesim, New York – 1964

Brown Percy - Indian Architecture, Bombay- 1942

Balasubramanya. S.R. - The Early Chola Art, Bombay – 1966

Banarajee, J.N. - The Development of Hindu Iconography, Calcutta – 1956

Basavaraju, K.R. - History and Culture of Karnataka, Dharwad – 1984

Bharat Iyer, K. - Indian Art, A Short Introduction, Bombay-1958

Bhattachara, B.C. - Jaina Iconogrpahy, Lahore – 1939

Bhattacharya Hardiasa - The Cultural Heritage of India, Vol.IV, Calcutta- 1956

Chakravarti, P.C. - Art of War in Ancient India, Delhi – 1941

Coomaraswamy, A.K. - The History of Indian and Indonesian Art, New York- 1926

Chandra Pramoda - Studies in Indian Temple Architecture. Varanasi – 1975

Dayananda Patel, T. - Kesava Temple Somanathpura. A Cultural study, Delhi- 1990

Dasgupta, S.N. - Fundamentals of Indian Art, Bombay-1960

Desai, P.B. - A History of Karnatak, Dharwad – 1970

- Jainism in South India and Some Jaina Epigraphs, Sholapur – 1957

Derett, J.D.M - The Hoysalas, A Medieval Indian Royal Family, Oxford – 1957

Dhaky, M.A. - Encyclopedia of Indian Temple Architecture, Volume I, part 3, South India, upper Dravidadesa, later Phase, 2 Volumes, - 1996

Dhaky, M.A. - Encyclopedia of Indian Temple Architecture, Volume II, part 3, North India, 2 Volumes – 1998

Fabric Charles - Indian Temples and Sculptures, London – 1959

Fergusson James, H. - History of India and Eastern Architecture, Vol, I. (Revised Edtion), London – 1970

Gopinath Rao, T.V. - Elements of Hindu Iconography, Vol-I,II & III. Delhi (Reprint) – 1982

Ghosh. A. - Jaina art and architecture, vol-I, and II. New Delhi – 1975

Gerard foekema - Hoysala architecture Medieval Temples of Southern Karnataka, built during Hoysala rule, vol-I & II, Delhi-1994

George Michell - Encyclopedia of Indian Temple Architecture, South India, dravidadesa, Later Phase, Delhi-2001

Kalaghatgi, T.S. - Jainism in Karnataka, A study, Mysore-1976

Krishna Sastri, H. - South Indian Images of Gods and Goddesses, Madras – 1916

Krishna Rao, M.V. The Gangas of Talakad, Madras-1936

Krishna Swamy Iyangar - Dravidian Architecture, Varanasi-1984

Kelleson Collyer - Hoysala Artists their Identity, Mysore- 1989

Krmrish Stella - Indian Sculpture, Delhi – 1981

- The Hindu Temples, Vol. I & II, Calcutta – 1946

Louis Frederic - Indian Temple and Sculpture, London – 1959

Leela Shantakumari - History of the Agraharas in Karnataka. Madras – 1986

Mahalingam, T.V. - The South Indian Temple Complex. Dharwar – 1970

Mahalingam, T.V. - The South Indian Temple Complex. Dharwar – 1970

Maity, S.K. - Masterpieces of Hoysala Art, Bombay – 1976

Mehta Rustam - Master Pieces of Indian Sculptures, Bombay – 1976

Michell George - The Hindu Temples, Bombay – 1977

- Early Western Chalukyan Temple, London – 1975

Mookerjee, A. - The Art of India, Calcutta – 1969

Mugali, R.S. - The Heritage of Karnataka, Bangalore – 1946

Narasimhachar, R. - The Kesava Temple at Somanathapur, Mysore – 1919

Narasimha Murthy, A.V. - Archaeology of Karnataka, Mysore – 1978

Nilakanta Sastri, K.A. - History of South India, Delhi (Reprint) – 2002

Parthasarathi, A. - The Symbolism of Hindu Gods and Rituals, Bombay – 1983

Padmanabha,K. - Hoysala Sculptures – A Cultural Study, Sandeep Prakashan, New Delhi, 1979

Rajashekara, S. - Karnataka Architecture, Dharwad– 1985

- Master pieces of Vijayanagara Art. Bombay – 1983

Ramasharma, M.H. - The History of the Vijayanagara Empire, Bombay – 1985

Ramachandra Rao, S.K. - Indian Temples a Background, Bangalore – 1980

Raman, K.V. - Temple Art, Icons and Culture of India and South-East Asia, Delhi – 2006

Rowland Benjamin - The Art and Architecture of India, (Buddhist, Hindu, Jain ) Reprint – 1959

Saletore, B.A. - Vijayanagara Art, Delhi – 1982

Settar, S - Hoysala Sculptures in National Museum, Copenhagen – 1975

- Hoysala Temples, Bangalore – 1992
- Inviting Death, Dharwad – 1986

Settar, S - (Ed), Memorial Stones,Dharwad – 1986
- The Historical Inscriptions of Southern India – 1932

Sheik Ali, B - The Hoysala Dynasty, Mysore – 1972
- History of the Western Gangas, Mysore – 1976

Sastri, K.K. - South Indian Images of Gods and Goddesses, Madras – 1916

Sharma, I.K. - Temples of the Gangas of Karnataka, Delhi – 1993

Sharma, S.R. - Jainism and Karnataka Culture, Dharwar – 1940

Sivaramamurthy, C. - The Art of India, New York – 1977
- The Chola Temple, ASI, New Delhi – 1975

- The Chola Temple Tanjavur, Gangaikonda Cholapuram and Darasuram, ASI, New Delhi – 1960

Srinivasan, K.R. - Temples of South India, New Delhi – 1993

Stain Burton - South Indian Temples, New Delhi – 1978

Suryanath U. Kamath - A Concise History of Karnataka. Bangalore – 2002

Soundar Rajan, K.V. - Indian Temple Styles, New Delhi – 1972

- The Art of South India, (Tamilnadu and Kerala) Delhi – 1978

- Early Temple Architecture in Karnatak and its Ramifications, First Edition, Dharwad – 1969

Swaminathan, S. - The Early Cholas History,Art and Culture, New Delhi – 1998

Venkatesh Iyengar, M. - Popular Culture in Karnataka, Bangalore – 1983

Venkataramanayya, S. An Eassy on the Origin of the South Indian Temple, New Delhi – 1985

# ಗ್ರಂಥಋಣ


| | | |
|---|---|---|
| ಅಣ್ಣಾರಾಯ ಮಿರ್ಜಿ | – | ಜೈನ ಧರ್ಮ, ಶಾಂತಿ ಸೇವಾ ಸದನ, ಸೇಡಬಾಳ, 1952 |
| ಅಪರ್ಣ, ಕೂ.ಸ. | – | ದೇವಾಲಯ ವಾಸ್ತುಶಿಲ್ಪ ಪರಿಚಯ, ಹಂಪಿ–1999 |
| ಅನಂತರಂಗಾಚಾರ್ಯ. ಎನ್. | – | ಕರ್ನಾಟಕ ವಾಸ್ತುಶಿಲ್ಪ, ಮೈಸೂರು–1972 |
| ಆಲೂರು ವೆಂಕಟರಾಯ | – | ಕರ್ನಾಟಕ ವೀರರತ್ನಗಳು–1920 |
| ಬಸವರಾಜ ಕಲ್ಗುಡಿ | – | ಮಹಾಸತಿ ಆಚರಣೆ ಒಂದು ಅಧ್ಯಯನ, ಪ್ರಸಾರಾಂಗ, ಬೆಂಗಳೂರು, ವಿಶ್ವವಿದ್ಯಾಲಯ 1985 |
| ಬಾಲ ಸುಬ್ರಮಣ್ಯ, ವಾಸುದೇವನ್ ಸಿ. ಎಸ್. | – | ಕರ್ನಾಟಕ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿ. ವಿ. ಹಂಪಿ–2007 |
| ಚಿದಾನಂದಮೂರ್ತಿ. ಎಂ. | – | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂಪುಟ–1.ಬೆಂಗಳೂರು–2002<br>ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಬೆಂಗಳೂರು. ಐ.ಬಿ.ಎಚ್, ಪ್ರಕಾಶನ–1982<br>ಜನ–ಜನಪದ–ಜಾನಪದ, ಸಂಪುಟ–2, ಬೆಂಗಳೂರು–2002 |
| ಚಿದಾನಂದಮೂರ್ತಿ. ಎಂ. | – | ಸಂಶೋಧನೆ, ಪಾಂಡಿತ್ಯರಸ, ಪ್ರಿಯದರ್ಶಿನಿ ಪ್ರಕಾಶನ–2011 |
| ಚೆನ್ನಕ್ಕ ಎಲಿಗಾರ | – | ಮಾಸ್ತಿಕಲ್ಲುಗಳು, ಧಾರವಾಡ–1977 |
| ದೇವುಡು, ಎನ್. ಎಸ್. | – | ಕರ್ನಾಟಕ ಸಂಸ್ಕೃತಿ, ಬೆಂಗಳೂರು – 1961 |
| ಧ್ರುವರಾಜ. ನಾ. ಗದಗಕರ | – | ದೇಗುಲ ರಥಶಿಲ್ಪ, ಹಂಪಿ–1999 |
| ದೇವರಕೊಂಡಾರೆಡ್ಡಿ | – | ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಬೆಂಗಳೂರು – 1994.<br>ಭಾರತೀಯ ವಾಸ್ತುವಿದ್ಯೆ, ಬೆಂಗಳೂರು – 1994 |

ದಿವಾಕರ, ಆರ್. ಆರ್. – ಕರ್ನಾಟಕದ ಪರಂಪರೆ, ಸಂ. 1 & 2, ಬೆಂಗಳೂರು – 1970

ದೇರೆಬೈಲು ಮುರಳಿಧರ್ ರಾವ್ – ವಾಸ್ತುಶಿಲ್ಪ ಮತ್ತು ಭಾರತೀಯ ಸಂಪ್ರದಾಯದ ಅಮೂಲ್ಯರತ್ನಗಳು, ಮೈಸೂರು – 1996

ಗೋಪಾಲ್ ಬಾ.ರ. ಮತ್ತು ಇತರರು – ಕರ್ನಾಟಕದ ಕಲೆ ವಾಸ್ತು (ನಾಲ್ಕನೆಯ ಸಂಪುಟ) ಬೆಂಗಳೂರು – 1993

ಗೋಪಾಲ್ ಬಾ.ರ. – ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಮೈಸೂರು – 1984

ಹಂಪ ನಾಗರಾಜಯ್ಯ – ಯಕ್ಷ-ಯಕ್ಷಿಯರು, ಬೆಂಗಳೂರು –1976

ಹಿರೇಮಠ ಬಿ.ಆರ್. – ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1986

ಕೃಷ್ಣರಾಯ ಕಪಟರಾಳ – ಕರ್ನಾಟಕ ಲಾಕುಳ ಶೈವರ ಇತಿಹಾಸ, ಕರ್ನಾಟಕ ಇತಿಹಾಸ ಅಕಾಡೆಮಿ, ಧಾರವಾಡ, 1955

ಕುಮಾರಸ್ವಾಮಿ ಕೆ.ಎಸ್. – ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-1996

ಕೊಸಾಂಬಿ ಡಿ.ಡಿ. – ಪ್ರಾಚೀನ ಭಾರತದ ಚರಿತ್ರೆ, (ಅನು) ಶ್ರೀಮತಿ ಎಚ್. ಎಸ್. ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ್ ಮೈಸೂರು, 1998

ಚನ್ನಬಸಪ್ಪ ಎಸ್. ಪಾಟೀಲ – ಕರ್ನಾಟಕದ ಕೋಟೆಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ-1999

ಕೃಷ್ಣರಾವ್. ಎಂ.ಎಚ್. – ಕನ್ನಡ ನಾಡಿನ ಚರಿತ್ರೆ- ಕರ್ನಾಟಕದ ಕಲೆ, ಬೆಂಗಳೂರು–1976

ಕೃಷ್ಣರಾವ್. ಎ.ಎನ್. – ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಬೆಂಗಳೂರು–1962

ಕೃಷ್ಣರಾಯ, ಅ.ನ. –(ಸಂ) – ಭಾರತೀಯ ಕಲಾದರ್ಶನ, ಬೆಂಗಳೂರು – 1964

ಕಲಬುರ್ಗಿ, ಎಂ.ಎಂ. – ಸಮಾಧಿ ಬಲಿದಾನ, ವೀರಮರಣ ಸ್ಮಾರಕಗಳು, ಬೆಂಗಳೂರು–1980
ಕರ್ನಾಟಕದ ಕೈಫಿಯತ್ತುಗಳು, ಹಂಪಿ – 1998

ಕೃಷ್ಣಶರ್ಮ ಬೆಟಗೇರಿ. – ಕರ್ನಾಟಕದ ಜನಜೀವನ, ಧಾರವಾಡ – 1963

ನಂಜುಂಡಸ್ವಾಮಿ ಎಸ್. – ಹೊಯ್ಸಳ ಇತಿಹಾಸ, ಸಮಾಜ ಪುಸ್ತಕಾಲಯ ಧಾರವಾಡ

ನರಸಿಂಹಮೂರ್ತಿ ಎ.ವಿ. – ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, 2003

ನಾಗರಾಜಯ್ಯ, ಹಂ.ಪ. – ಯಾಪನೀಯ ಸಂಘ, ಪ್ರಸಾರಾಂಗ, ಕ.ವಿ.ವಿ. ಹಂಪಿ– 1999

ನಾಗೇಶ್, ಹಾ.ವೆಂ. – ಭಾರತೀಯ ಗ್ರಾಮ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ,

ನಾಗಭೂಷಣ. ಸಿ. – ಕನ್ನಡ ನಾಡಿನ ಶಾಸನಗಳ ಅಧ್ಯಯನ, ಕೆಲವು ಗ್ರಹಿಕೆಗಳು ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ – 2009

ನರಸಿಂಹಮೂರ್ತಿ, ಎ.ವಿ. – ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಮೈಸೂರು –1968
ಚಾಲುಕ್ಯ ವಾಸ್ತುಶಿಲ್ಪ ಪರಿಚಯ, ಬೆಂಗಳೂರು–1976

ಮಳಲಿ ವಸಂತ ಕುಮಾರ್ (ಸಂ) – ಹೊಯ್ಸಳ ಸಂಪದ, ಅಖಿಲ ಭಾರತ 65ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಹಾಸನ, 1996

ಮೇವುಂಡಿ ಮಲ್ಲಾರಿ – ಕನ್ನಡ ನಾಡಿನ ಶಾಸನ ಕವಿಗಳು, ಮನೋಹರ ಗಾಣೇಕರ್, ಪ್ರತಿಭಾ ಗ್ರಂಥಮಾಲೆ ಧಾರವಾಡ, 1974

ಪರಮಶಿವಮೂರ್ತಿ, ಡಿ.ವಿ. – ಕನ್ನಡ ಶಾಸನ ಶಿಲ್ಪ, ಹಂಪಿ–1999

ರಮೇಶ, ಕೆ.ವಿ. – ಕರ್ನಾಟಕ ಶಾಸನ ಸಮೀಕ್ಷೆ, ಬೆಂಗಳೂರು–1971

ರಂಗಸ್ವಾಮಿ, ಎಸ್. – ಕರ್ನಾಟಕ ದೇವಾಲಯಗಳು, ಬೆಂಗಳೂರು–1994

ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್ (ಸಂ) – ಮಲೆಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ, 2001

ರಾಬರ್ಟ್ ಸಿವೆಲ್ (ಅನು) ಸದಾನಂದ ಕನವಳ್ಳಿ – ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪ್ರಸಾರಾಂಗ, ಕ.ವಿ.ವಿ. ಹಂಪಿ–2005

ರಾಮ ಶೇಷನ್, ನೀ.ಕೃ. – ಕರ್ನಾಟಕ ಕೋಟೆ ಕೊತ್ತಲಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1980

ರಾಮಚಂದ್ರರಾವ್, ಎಸ್. ಕೆ. – ಭಾರತದ ದೇವಾಲಯ ನೆಲೆ–ಹಿನ್ನೆಲೆ, ಬೆಂಗಳೂರು – 1980

ಮೂರ್ತಿ ಶಿಲ್ಪ ನೆಲೆ–ಹಿನ್ನೆಲೆ, ಬೆಂಗಳೂರು–1975

ರಘುನಾಥ ಭಟ್, ಎಚ್. ಆರ್. – ಕರ್ನಾಟಕ ಶಾಸನ ಕಲೆ, ಮೈಸೂರು–1977

ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಬೆಂಗಳೂರು–1979

ರಾಮೇಗೌಡ – ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಮೈಸೂರು–1992

ಶಿವತಾರಕ್, ಕೆ. ಬಿ. – ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ–2001

ಶಿವಣ್ಣ, ಕೆ.ಎಸ್. – ಎ ಕ್ರಿಟಿಕ್ ಆಫ್ ಹೊಯ್ಸಳ ಪಾಲಿಟಿ, ಕುವೆಂಪುನಗರ, ಮೈಸೂರು, 1988

ಶ್ರೀಕಂಠಯ್ಯ, ಕೆ. – ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಮೈಸೂರು, 1983

ಶ್ರೀಕಂಠ ಶಾಸ್ತ್ರೀ, ಎಸ್. – ಹೊಯ್ಸಳ ವಾಸ್ತುಶಿಲ್ಪ, ಮೈಸೂರು, 1965

ಶುಭಚಂದ್ರ – ಜೈನ ಸಾಹಿತ್ಯ ಮತ್ತು ಸಂಸ್ಕೃತಿ, ಮೈಸೂರು –1976

ಶೇಠೆ, ಬಿ.ಎಸ್. – ಕರ್ನಾಟಕದಲ್ಲಿ ಸತಿ ಪದ್ಧತಿ, ಬೆಳಗಾವಿ – 1991

ಶೇಠೆ. ಎನ್. – ಕರ್ನಾಟಕದಲ್ಲಿ ಸತಿ ಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ, 1991

ಶೇಷಶಾಸ್ತ್ರಿ. ಆರ್. – ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1982

ಶ್ರೀಕಂಠಶಾಸ್ತ್ರಿ. ಎಸ್. – ಹೊಯ್ಸಳ ವಾಸ್ತುಶಿಲ್ಪ, ಮೈಸೂರು–1965

ಶ್ರೀನಿವಾಸನ್. ಪಿ.ಆರ್. – ದಕ್ಷಿಣ ಭಾರತದ ದೇವಾಲಯಗಳು, ಮೈಸೂರು – 1959

ಶಿವರಾಮ ಕಾರಂತ. ಕೆ. – ಭಾರತೀಯ ಶಿಲ್ಪ, ಬೆಂಗಳೂರು –1975
ಚಾಲುಕ್ಯ ವಾಸ್ತು ಮತ್ತು ಶಿಲ್ಪ, ಬೆಂಗಳೂರು–1969

ಕರ್ನಾಟಕದಲ್ಲಿ ಶಿಲ್ಪ, ಬೆಂಗಳೂರು–1982
ಚಿತ್ರ ಶಿಲ್ಪ – ವಾಸ್ತು ಕಲೆಗಳು, ಧಾರವಾಡ–1975

ಸಕಲೇಶ ಮ. – ಹೊಯ್ಸಳೋದಯ ಸಂಶೋಧನ, ಹಿಮಶೈಲ ಪ್ರಕಾಶನ, ಶಿವಮೊಗ್ಗ, 2002

ಸತ್ಯನಾಥ ಟಿ.ಎಸ್. – ನರಬಲಿ–ಒಂದು ಸಂಸ್ಕೃತಿಯ ಅಧ್ಯಯನ, ಸಂಸ್ಕೃತಿ ವಿಕಾಸ ಮಾಲೆ, ಶ್ರೀರಾಂಪುರಂ, ಬೆಂಗಳೂರು, 1979

ಸರಸ್ವತಿ. ಎನ್. – ಹೊಯ್ಸಳರ ಇತಿಹಾಸ, ವಾಚಸ್ಪತಿ ಪ್ರಕಾಶನ, ಮೈಸೂರು–2009

ಸಿಂದಗಿ ರಾಜಶೇಖರ್ – ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ–1988

ಸ್ವಾಮಿ ಹರ್ಷಾನಂದ – ನಮ್ಮ ದೇವಾಲಯಗಳು. ರಾಮಕೃಷ್ಣ ಆಶ್ರಮ, ಮೈಸೂರು–2010

ತಿಪ್ಪೇರುದ್ರ ಸ್ವಾಮಿ. ಎಚ್. – ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು–1985

ವಸು.ಎಂ.ವಿ.(ಸಂ). – ದಕ್ಷಿಣ ಕರ್ನಾಟಕದ ಅರಸು ಮನೆತನಗಳು,
ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ ಹಂಪಿ, 2001

ವೆಂಕೋಬರಾವ್. ಬಿ. ಮೈಸೂರು ದೇಶದ ವಾಸ್ತುಶಿಲ್ಪ,
ಬೆಂಗಳೂರು–1928

## IV. ಗೆಜೆಟಿಯರ್, ವಿಶ್ವಕೋಶ, ನಿಘಂಟುಗಳು, ಜರ್ನಲ್‌ಗಳು ಇತ್ಯಾದಿ

1. ಕರ್ನಾಟಕ ರಾಜ್ಯ ಗೆಜೆಟಿಯರ್ – ಭಾಗ– 1 (ಸಂ) ಸೂರ್ಯನಾಥ ಕಾಮತ್, 1984

2. ಕರ್ನಾಟಕ ರಾಜ್ಯ ಗೆಜೆಟಿಯರ್ – ಭಾಗ– 2 (ಸಂ) ಸೂರ್ಯನಾಥ ಕಾಮತ್, 1985

3. ಕರ್ನಾಟಕ ಗೆಜೆಟಿಯರ್ ಇಲಾಖೆ, ಕರ್ನಾಟಕ ಕೈಪಿಡಿ. ಕರ್ನಾಟಕ ಸರ್ಕಾರ–1996

4. ಕರ್ನಾಟಕ ರಾಜ್ಯ ಗೆಜೆಟಿಯರ್ – ಭಾಗ– 3 (ಸಂ) ಸೂರ್ಯನಾಥ ಕಾಮತ್, 1986

5. ಮೈಸೂರು ಜಿಲ್ಲಾ ಗೆಜೆಟಿಯರ್ ಕರ್ನಾಟಕ ಸರ್ಕಾರ–2010

6. ತಿರುಮಕೂಡಲು ನರಸೀಪುರ ತಾಲೂಕು ಗೆಜೆಟಿಯರ್ ಕರ್ನಾಟಕ ಸರ್ಕಾರ–2010

### ವಿಶ್ವಕೋಶ

1. ಕನ್ನಡ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಪ್ರಸಾರಾಂಗ, ಮೈಸೂರು (ಸಂಬಂಧಪಟ್ಟ ಸಂಪುಟಗಳು)

2. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಪ್ರಸಾರಾಂಗ, ಮೈಸೂರು–1979

### ನಿಘಂಟುಗಳು

1. ಕನ್ನಡ ನಿಘಂಟು

# JOURNALS

1. Quarterly Journals of the mythic society, Bangalore

2. Art Journal, Volumes (Relevent Volumes)

3. The Journal of the Numismatic Society of India (Relevant Volumes)

4. Half yearly Journal of the mysore University (Arts) Mysore

5. Journal of the Annamalais university, Chidambaram

6. Journal of the Indian History ,Trivandraum

7. Journal of the Karnataka university (Humanties) Dharwar

8. Journal of madras

9. Journal of the oriental Research, Madras

## ಇತ್ಯಾದಿ

1. ಇತಿಹಾಸ ದರ್ಶನ ಸಂ–ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

2. ಮಾನವಿಕ ಕರ್ನಾಟಕ ಸಂಪುಟಗಳು– ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಮೈಸೂರು.

3. ಪ್ರಬುದ್ಧ ಕರ್ನಾಟಕ ಸಂಪುಟಗಳು – ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

4. ಇತಿಹಾಸ ದರ್ಪಣ ಬೆಂಗಳೂರು.

5. ಕನ್ನಡ ಭಾರತಿ, ಧಾರವಾಡ

6. ಸಾಧನೆ, ಬೆಂಗಳೂರು

7. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಬೆಂಗಳೂರು

## ಅಪ್ರಕಟಿತ ಪ್ರಬಂಧಗಳು

**ಕರಿಯಪ್ಪ, ಜಿ**. – ಹೊಯ್ಸಳರ ಕಾಲದಲ್ಲಿ ಜೈನರ ಕಲೆ ಮತ್ತು ವಾಸ್ತುಶಿಲ್ಪ, ಅಪ್ರಕಟಿತ ಪಿಎಚ್.ಡಿ., ಸಂಶೋಧನಾ ಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**ಚುಂಚಯ್ಯ**– ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯ ದ್ರಾವಿಡ ದೇವಾಲಯ ವಾಸ್ತುಶಿಲ್ಪದ ಪ್ರಾರಂಭ ಮತ್ತು ಬೆಳವಣಿಗೆ, ಅಪ್ರಕಟಿತ ಪಿಎಚ್.ಡಿ., ಸಂಶೋಧನಾ ಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**ಕೃಷ್ಣಪ್ಪ, ಎಂ**. – ಕರ್ನಾಟಕದಲ್ಲಿ ಉತ್ಖನನ ನೆಲೆಗಳ ಸಾಂಸ್ಕೃತಿಕ ಅಧ್ಯಯನ ಸಂಶೋಧನ ಪ್ರಬಂಧ, ಮೈ.ವಿ.ವಿ ಮೈ. 2006




(ಕೃಪೆ: ಮೈಸೂರು ಜಿಲ್ಲಾ ನಕ್ಷೆ, ಅಂತರ್ಜಾಲ)




1. ತಲಕಾಡು, ಪಾತಾಳೇಶ್ವರ ದೇವಾಲಯದ ತಳನಕ್ಷೆ
(ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ–2, ಲೇ: ಕೆ.ಎಂ. ಸುರೇಶ್, ದೆಹಲಿ)




2. ಬನ್ನೂರು, ಹನುಮಂತೇಶ್ವರದೇವಾಲಯದ ತಳನಕ್ಷೆ (ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ-2, ಲೇ: ಕೆ.ಎಂ. ಸುರೇಶ್, ದೆಹಲಿ)



೩. ಸೋಮನಾಥಪುರ, ಪಂಚಲಿಂಗೇಶ್ವರದೇವಾಲಯದ ತಳನಕ್ಷೆ
(ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ-2, ಲೇ: ಕೆ.ಎಂ. ಸುರೇಶ್, ದೆಹಲಿ)



4. ಸೋಮನಾಥಪುರ, ಕೇಶವ ದೇವಾಲಯದ ತಳನಕ್ಷೆ
(ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ–2, ಲೇ: ಕೆ.ಎಂ. ಸುರೇಶ್, ದೆಹಲಿ)



5. ತಲಕಾಡು, ಕೀರ್ತಿನಾರಾಯಣ ದೇವಾಲಯದ ತಳನಕ್ಷೆ
(ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ–2, ಲೇ: ಕೆ.ಎಂ. ಸುರೇಶ್, ದೆಹಲಿ)




೬. ಮೂಗೂರು. ಜೈನ ಬಸದಿಯ ತಳನಕ್ಷೆ
(ಕೃಪೆ: ಟೆಂಪಲ್ಸ್ ಆಫ್ ಕರ್ನಾಟಕ, ಸಂ–2, ಲೇ: ಕೆ.ಎಂ. ಸುರೇಶ್, ದೆಹಲಿ)



1. ವೈದ್ಯನಾಥೇಶ್ವರ ದೇವಾಲಯ , ತಲಕಾಡು



2. ನವರಂಗ, ವೈದ್ಯನಾಥೇಶ್ವರ ದೇವಾಲಯ , ತಲಕಾಡು



3. ಗರ್ಭಗುಡಿ, ಪಾತಾಳೇಶ್ವರ ದೇವಾಲಯ, ತಲಕಾಡು



4.ಗರ್ಭಗುಡಿ, ಚೌಡೇಶ್ವರಿ ದೇವಾಲಯ, ತಲಕಾಡು



5. ನವರಂಗದ ಕಂಬ, ಚೌಡೇಶ್ವರಿ ದೇವಾಲಯ, ತಲಕಾಡು



6. ರಾಯಗೋಪುರ, ದೇಸೇಶ್ವರ ದೇವಾಲಯ ಮೂಗೂರು,



7. ಗರ್ಭಗುಡಿ, ದೇಸೇಶ್ವರ ದೇವಾಲಯ ಮೂಗೂರು,



8. ನವರಂಗದ ಕಂಬಗಳು, ದೇಸೇಶ್ವರ ದೇವಾಲಯ, ಮೂಗೂರು





೯. ಗರ್ಭಗುಡಿ, ಮಲ್ಲಿಕಾರ್ಜುನ ದೇವಾಲಯ, ತಡಿಮಾಲಂಗಿ

೧೦. ಭುವನೇಶ್ವರಿ, ಮಲ್ಲಿಕಾರ್ಜುನ ದೇವಾಲಯ, ತಡಿಮಾಲಂಗಿ





11. ಮಲ್ಲಿಕಾರ್ಜುನ ದೇವಾಲಯ, ಮುಡುಕುತೊರೆ

12. ಪಂಚಲಿಂಗೇಶ್ವರ ದೇವಾಲಯ, ಸೋಮನಾಥಪುರ

